

ಗ್ರಂಥಕರ್ತರು :

ಆಸ್ಥಾನಮಹಾವಿದ್ವಾನ್ ಪಂಡಿತರತ್ನಂ

ಸಿ ಸಿರ್ಗ ಗುರುಶಾಂತಶಾಸ್ತ್ರಿಗಳು,

ವೇದಾಂತ ಪ್ರೊ॥ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜು,

ಬೆಂಗಳೂರು.

ದೊರೆಯುವ ಸ್ಥಳ:

**ಪ್ರಬೋಧ ಪುಸ್ತಕಮಾಲೆ**

ನಂ. ೫, ೩ನೇ ರಸ್ತೆ, ಚಾಮರಾಜಪೇಟೆ,

ಬೆಂಗಳೂರು ಸಿಟಿ.

ಮೈಸೂರಿನಲ್ಲಿ ಗ್ರಂಥ ದೊರೆಯುವ ಸ್ಥಳ:

**ಶ್ರೀ ಎಸ್. ಶಿವಕುಮಾರಸ್ವಾಮಿ,**

ನಂ. 373, ನ್ಯೂ ಸಯ್ಯಾಜಿರಾವ್ ರೋಡು, ಮೈಸೂರು.

ಆಶ್ರಯದಾತರು:

**ಶ್ರೀಮಾನ್ ಗುರುಕಾರ್ ಮಾದಪ್ಪನವರು,**

ಮುಡಿಗುಂಡಂ, ಕೊಳ್ಳೇಗಾಲ ತಾಲ್ಲೂಕು.



(ಎಲ್ಲ ಹಕ್ಕುಗಳು ಗ್ರಂಥಕರ್ತರಿಗೆ ಸೇರಿವೆ)

**ಬೆಲೆ: ರೂ. ೨—೮—೦**



ಮುದ್ರಕರು:

ಎಸ್. ನಂಜಪ್ಪ,

"ಉಷಾ ಪ್ರೆಸ್"

೮೮೨, ಚಿಕ್ಕಪೇಟೆ, ಬೆಂಗಳೂರು ಸಿಟಿ.



ಗ್ರಂಥಕರ್ತರಾದ
ಆಸ್ಥಾನ ಮಹಾವಿದ್ವಾನ್ ಪಂಡಿತರತ್ನಂ
ವೇ॥ ಬ್ರ॥ ಶ್ರೀ॥ ಶಿರಸಿ ಗುರುಶಾಂತಶಾಸ್ತ್ರಿಗಳು

# ಕೃತಜ್ಞತೆ

ಸುಪ್ರಸಿದ್ಧ ರೇಷ್ಮೆ ವ್ಯಾಪಾರಿಗಳೂ, ಪೂರ್ವಾಚಾರನಿಷ್ಠರೂ, ಮತಾಭಿಮಾನಿಗಳೂ, ಪರಮ ಆಸ್ತಿಕರೂ ಆದ ಕೊಳ್ಳೇಗಾಲದ ತಾಲ್ಲೂಕು ಮುಡಿಗುಂಡಂ ಸಾಹುಕಾರ್ ಶ್ರೀಮಾನ್ ಗುರುಕಾರ್ ಮಾದಪ್ಪನವರು ದ್ರವ್ಯ ಸಹಾಯ ಮಾಡಿದ್ದರಿಂದ ಈ ಗ್ರಂಥವು ಪ್ರಕಾಶಕ್ಕೆ ಬಂದಿತು. ಈ ಮಹಾಶಯರು ಅನೇಕ ಧರ್ಮಕಾರ್ಯಗಳನ್ನು ಮಾಡಿಯೂ ಮಾಡುತ್ತಲೂ ಇದ್ದಾರೆ. ಇವರು ಮೈಸೂರು ಸರ್ಕಾರದಲ್ಲಿ ಪುದುವಟ್ಟಾಗಿ ಒಂದು ಲಕ್ಷ ರೂಪಾಯಿಗಳಿಗೆ ಮೇಲ್ಪಟ್ಟು ಇಟ್ಟಿರುವ ಎಂಡೋಮೆಂಟ್ ಫಂಡಿನಿಂದ ಬರುವ ಸುಮಾರು ೪ ಸಾವಿರ ರೂಪಾಯಿಗಳು ವಿದ್ಯಾರ್ಥಿಗಳಿಗೆ ಪ್ರತಿವರ್ಷವೂ ಸಹಾಯವಾಗುತ್ತಿರುವುದು. ಇದಲ್ಲದೆ ಅನೇಕ ಸಹಸ್ರ ರೂಪಾಯಿಗಳ ವೆಚ್ಚದಿಂದ ಕೊಳ್ಳೇಗಾಲದಲ್ಲಿ ಹೆರಿಗೆ ಆಸ್ಪತ್ರೆಯನ್ನು ಕಟ್ಟಿಸಿ ಆ ಪ್ರಾಂತದ ಜನಗಳಿಗೆ ಮಹೋಪಕಾರಮಾಡಿರುತ್ತಾರೆ. ಮತ್ತು ಗೌರ್ನಮೆಂಟಿನಲ್ಲಿಟ್ಟಿರುವ ಹತ್ತುಸಾವಿರ ರೂಪಾಯಿಗಳ ವೃದ್ಧ್ಯಂಶದಿಂದ ತಮ್ಮ ಕುಲದೇವತೆಯಾದ ಮುಡುಕುತೊರೆ ಶ್ರೀ ಭ್ರಮರಾಂಬಾಸಹಿತ ಮಲ್ಲಿಕಾರ್ಜುನ ಸ್ವಾಮಿಯ ವಿಶೇಷ ಪೂಜೆಯು ನಡೆಯುವಂತೆ ಏರ್ಪಡಿಸಿರುತ್ತಾರೆ. ಇದಲ್ಲದೆ ಇತ್ತೀಚೆಗೆ ಕೊಳ್ಳೇಗಾಲದಲ್ಲಿ ಹೆಣ್ಣುಮಕ್ಕಳ ಪ್ರೌಢಪಾಠಶಾಲೆಗೆ ಇಪ್ಪತ್ತೈದು ಸಹಸ್ರ ರೂಪಾಯಿಗಳನ್ನು ದಾನ ಮಾಡಿರುತ್ತಾರೆ. "ಪ್ರದಾನಂ ಪ್ರಚ್ಛನ್ನಂ" ಎಂಬಂತೆ ಇವರ ದಾನದ ಎಷ್ಟೋ ಭಾಗವು ಗುಪ್ತವಾಗಿರುತ್ತದೆ. ಜನಮೆಚ್ಚುಗೆಗಾಗಿ ಇವರು ಧರ್ಮವನ್ನು ಮಾಡಬಯಸುವುದಿಲ್ಲ. ಆದರೆ ನಾನು ಬಹಳ ಕಾಲದಿಂದ ಪರಿಚಿತನಾದುದರಿಂದ ಈ ವಿಷಯವನ್ನು ಬರೆಯುವುದು ಅವರ ಮನಸ್ಸಿಗೆ ವಿರೋಧವೆನಿಸಿದರೂ ಅನಿವಾರ್ಯವಾಗಿ ಬಂದಿದೆ.

ಇವರಿಗೆ ಪರಮಾತ್ಮನು ಆಯುರಾರೋಗ್ಯಗಳನ್ನೀಯಲೆಂದು ಪ್ರಾರ್ಥಿಸುವೆನು.

ಗ್ರಂಥ ಮುದ್ರಣದ ಶುದ್ಧೀಕರಣ ಮತ್ತು ಪ್ರಕಾಶನ ಕಾರ್ಯದಲ್ಲಿ ವಿಶೇಷವಾಗಿ ಭಾಗವಹಿಸಿದ ಅರಮನೆ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು (ಸಂಪಾದಕರು: ಪ್ರಬೋಧ ಪುಸ್ತಕಮಾಲೆ) ಇವರಿಗೂ ಬಹಳ ತಾಳ್ಮೆಯಿಂದ ಗ್ರಂಥವನ್ನು ಮನೋಹರವಾಗಿ ಮುದ್ರಿಸಿ ಕೊಟ್ಟ ಉಷಾ ಪ್ರೆಸ್ಸಿನ ಪ್ರೊಪ್ರೈಟರ್, ಮ|| ರಾ|| ಶ್ರೀ ಎಸ್. ನಂಜಪ್ಪ ನವರಿಗೂ ಅನಂತ ಧನ್ಯವಾದಗಳನ್ನು ಅರ್ಪಿಸುವೆನು.

ತಾ|| ೭-೪-೧೯೫೧,
ವಿಕೃತಿ ಸಂ||
ಚೈತ್ರ ಶುದ್ಧ ಪ್ರತಿಪತ್
ಯುಗಾದಿ

"ಪಂಡಿತರತ್ನಂ" ಶಿರಸಿ ಗುರುಶಾಂತಶಾಸ್ತ್ರೀ,
ಗ್ರಂಥಕರ್ತ.

# ವಿಷಯಾನುಕ್ರಮಣಿಕೆ

## ಪೂರ್ವಾರ್ಧ

---

## ಉತ್ತರಾರ್ಧ

# ಉಪೋದ್ಘಾತ

೧

ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

ಎಂಬ ಸಿದ್ಧಾಂತೋಕ್ತಿಗನುಸಾರವಾಗಿ ಲಿಂಗಧಾರಣೆಯೇ ವೀರಶೈವನಿಗೆ ಮುಖ್ಯ ಲಕ್ಷಣವು. ಲಿಂಗವೆಂದರೆ ಚರಾಚರಾತ್ಮಕ ಜಗತ್ತಿಗಾಧಾರವಾದ ಬ್ರಹ್ಮವೆಂದರ್ಥವು. ಇಂಥ ಬ್ರಹ್ಮಬೋಧಕವಾದ ಲಿಂಗವನ್ನು ಶರೀರದಲ್ಲಿ ಧರಿಸುವುದೇ ಲಿಂಗಧಾರಣವೆನಿಸುವುದು. ವೀರಶೈವನು ಲಿಂಗಧಾರಣದಿಂದಲೇ ಮುಕ್ತಿಯನ್ನು ಸಾಧಿಸಬೇಕಾಗಿರುವುದರಿಂದ ಇದನ್ನು ಇಷ್ಟಲಿಂಗವೆಂದು ಕರೆಯುತ್ತಾರೆ. ಈ ಇಷ್ಟಲಿಂಗವು ಷಟ್‌ಸ್ಥಳಗಳಿಗೂ, ಷಡ್ಲಿಂಗಗಳಿಗೂ ಮುಖ್ಯಾಧಾರವಾಗಿರುತ್ತದೆ. ಪಾಠಶಾಲೆಯಲ್ಲಿ ಓದುವ ವಿದ್ಯಾರ್ಥಿಗಳು ತಮ್ಮತಮ್ಮ ಶಕ್ತ್ಯನುಸಾರವಾಗಿ ಒಂದೊಂದು ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದುತ್ತಾ ಮುಂದು ಮುಂದಣ ತರಗತಿಗಳಲ್ಲಿ ಪ್ರವೇಶಿಸಿ ಸಾಮಾನ್ಯಾಕಾರವಾದ ಜ್ಞಾನದೊಡನೆಯೇ ವಿಶೇಷಾಕಾರವಾದ ಜ್ಞಾನವನ್ನು ಪಡೆಯುವಂತೆ ಲಿಂಗಧಾರಣಾತ್ಮಕವಾದ ಶಿವದೀಕ್ಷೆಯನ್ನು ಪಡೆದ ಶುದ್ಧಾತ್ಮನು ಇಷ್ಟಲಿಂಗೋಪಾಸನೆಯೊಡನೆ ಮೇಲೆ ಮೇಲಿನ ಸ್ಥಲಗಳ ಉಪಾಸನೆಯಿಂದ ಷಟ್‌ಸ್ಥಲಬ್ರಹ್ಮಿಯೆನಿಸುವನು. ಈ ಷಟ್‌ಸ್ಥಲಗಳು ಶೃಂಖಲಾ (ಸರಪಣಿ) ನ್ಯಾಯದಂತೆ ಒಂದಕ್ಕೊಂದು ಸಂಬಂಧವುಳ್ಳವುಗಳಾಗಿರುತ್ತವೆ. "ವೃಕ್ಷಸ್ಯ ಮೂಲಸೇಕೇನ ಶಾಖಾಃ ಪುಷ್ಯಂತಿ ವೈ ಯಥಾ" ಮರದ ಬೇರಿಗೆ ನೀರೆರೆದರೆ ಮೇಲೆ ಮೇಲಿರುವ ಶಾಖೆಗಳೆಲ್ಲವೂ ತಾವಾಗಿಯೇ ವೃದ್ಧಿಹೊಂದುವಂತೆ ಭಕ್ತನು ಇಷ್ಟಲಿಂಗೋಪಾಸನೆಯ ದಾರ್ಢ್ಯದಿಂದ ಷಟ್‌ಸ್ಥಲ ಸಿದ್ಧಿಯನ್ನು ಪಡೆಯುತ್ತಾನೆ.

ಇಂತಹ ಭಕ್ತನು ಮಹಾ ಪಾಶುಪತನೆಂದೂ, ಶಿರೋವ್ರತಿ ಯೆಂದೂ ಹೇಳಿಸಿಕೊಳ್ಳಲ್ಪಡುತ್ತಾನೆ.

ನಿಗಮಾಗಮಾನುಸಂಧಾನ ಶೈವದೀಕ್ಷಾವಿಧಾನತಃ ।
ಶಿವಲಿಂಗಂ ಕರೇ ಕಂಠೇ ಧೃತ್ವಾ ವಕ್ಷಸ್ಥಲೇಽಪಿ ವಾ ॥
ತ್ರಿಕಾಲಂ ಯೋಽರ್ಚಯೇದ್ಭಕ್ತ್ಯಾ ಮಹಾಪಾಶುಪತೋ ಹಿ ಸಃ ॥

ಶಿವದೀಕ್ಷೆಯನ್ನು ಪಡೆದು ಕಂಠ ಕರ ಅಥವಾ ವಕ್ಷಸ್ಥಲದಲ್ಲಿ ಶಿವಲಿಂಗ ವನ್ನು ಧರಿಸಿ ತ್ರಿಕಾಲದಲ್ಲಿಯೂ ಕರಪೀಠದಲ್ಲಿರಿಸಿ ಅರ್ಚಿಸುತ್ತಿರುವವನೇ "ಮಹಾಪಾಶುಪತ" ನೆಂದು ಶಿವಾಗಮಗಳು ಸಾರುತ್ತವೆ. ಇದನ್ನೇ ಶ್ರೀಪತಿ ಪಂಡಿತರು "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಬ್ರಹ್ಮ ಸೂತ್ರದ ಭಾಷ್ಯದಲ್ಲಿ ಲಿಂಗಧಾರಣಾತ್ಮಕವಾದ ದೀಕ್ಷೆಯನ್ನು ಪಡೆದವನೇ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಲೋಕದಲ್ಲಿ ಒಬ್ಬ ಮನುಷ್ಯನ ಆತ್ಮಶಕ್ತಿಯನ್ನು ತಿಳಿಯಬೇಕಾದರೆ ಎರಡು ತರಹದ ದಾರಿಗಳುಂಟು. ಅವುಗಳಲ್ಲಿ ಬಹಿಶ್ಚಿಹ್ನೆಗಳಿಂದ ತಿಳಿಯು ವುದು ಒಂದು ದಾರಿ. ಅಂತಶ್ಚಿಹ್ನೆಗಳಿಂದ ತಿಳಿಯುವುದು ಮತ್ತೊಂದು ದಾರಿ. ವೀರಶೈವ ಮತದ ಬಹಿಶ್ಚಿಹ್ನೆಗಳಲ್ಲಿ ಲಿಂಗಧಾರಣೆಯೇ ಪ್ರಧಾನ ವಾದುದು. ಉಳಿದ ಭಸ್ಮ ರುದ್ರಾಕ್ಷ ತೀರ್ಥ ಪ್ರಸಾದಾದಿಗಳೆಲ್ಲವೂ ಸಾಧಾರಣ ಚಿಹ್ನೆಗಳು. ವೀರಶೈವನಿಗೆ ಲಿಂಗಧಾರಣ ಸಹಿತವಾದ ಭಸ್ಮ ರುದ್ರಾಕ್ಷಾದಿಧಾರಣಕ್ಕೆ ಮಹತ್ವವಿದೆಯೇ ಹೊರತು ಕೇವಲ ಭಸ್ಮರುದ್ರಾ ಕ್ಷಾದಿಗಳಿಗೆ ಇರುವುದಿಲ್ಲ. ಇನ್ನು ಅಂತಶ್ಚಿಹ್ನೆಗಳೆಂದರೆ :—ಇಷ್ಟಲಿಂಗೋ ಪಾಸನೆಯ ಅಭ್ಯಾಸಬಲದಿಂದ 'ಶಿವೋಽಹಂ' ಭಾವನಾಕಾರವು ಬಲಿದು ಆತ್ಮನ ಮಲಾವರಣಗಳೆಲ್ಲವೂ ನಷ್ಟವಾಗಿ ಪರಶಿವಸಾಕ್ಷಾತ್ಕಾರದಿಂದ ಸರ್ವಜ್ಞತ್ವಾದಿಗಳು ಉದಿಸುವುವಲ್ಲದೆ ಕಂಠವಿಕಾರ, ಗದ್ಗದ, ಜಿಹ್ವಾ ಸ್ಪಂದ, ಓಷ್ಠಸ್ಫುರಣ, ಕಂಪನ, ರೋಮಾಂಚ, ಸ್ವೇದ, ಸ್ಖಲನ, ಬಾಷ್ಪೋದಯ, ರೋದನ ಮತ್ತು ಪರವಶತೆ ಎಂಬ ದಶವಿಧ ಚಿಹ್ನೆ ಗಳು ಆ ಮಹಾತ್ಮನಲ್ಲಿ ತೋರುವುವು.

ಪ್ರಕೃತ ವೀರಶೈವ ಸಿದ್ಧಾಂತದಲ್ಲಿ ಇಂತಹ ಆತ್ಮಶಕ್ತಿಯು ಉದಿಸ ಬೇಕಾದರೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಮೂರು ಲಿಂಗಗಳ ಉಪಾಸನೆಯು ಅತ್ಯಾವಶ್ಯಕವಾಗಿರುತ್ತದೆ. ಈ ಮೂರು ಲಿಂಗ ಗಳಲ್ಲಿ ಇಷ್ಟಲಿಂಗವು ಸಕಲಸ್ವರೂಪವಾದುದು. ಪ್ರಾಣಲಿಂಗವು ಸಕಲ ನಿಷ್ಕಲಸ್ವರೂಪವಾದುದು. ಭಾವಲಿಂಗವು ನಿಷ್ಕಲಸ್ವರೂಪವು. ಇವು ಗಳಲ್ಲಿ ಇಷ್ಟಲಿಂಗವು ಚಕ್ಷುರಾದಿ ಇಂದ್ರಿಯ ಗೋಚರವಾದುದು. ಪ್ರಾಣ ಲಿಂಗವು ಕೇವಲ ಮನೋಗೋಚರವು. ಭಾವಲಿಂಗವು ಅತೀಂದ್ರಿಯ ವಾದುದು. ಭಾವಲಿಂಗ ಮತ್ತು ಪ್ರಾಣಲಿಂಗಗಳನ್ನು ಸಾಕ್ಷಾತ್ಕರಿಸಬೇಕಾ ದರೆ ಸ್ಥೂಲಾರುಂಧತೀನ್ಯಾಯಾನುಸಾರವಾಗಿ ಇಷ್ಟಲಿಂಗವೇ ದ್ವಾರ ವಾಗಿರುವುದು. ಈ ವಿಷಯದಲ್ಲಿ ಭಗವಾನ್ ರೇಣುಕಾಚಾರ್ಯರು ಹೀಗೆ ಹೇಳಿದ್ದಾರೆ.—

ಅಂತರ್ಧಾರಯಿತುಂ ಲಿಂಗಮಶಕ್ತಶ್ಶಕ್ತ ಏವ ವಾ ।
ಬಾಹ್ಯಂ ತು ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್ ॥

ಅಂತರ್ಧಾರಣ ಸಿದ್ಧಿಯನ್ನು ಪಡೆದಿದ್ದರೂ, ಪಡೆಯದಿದ್ದರೂ ಒಳಗೆ ಪ್ರಕಾ ಶಿಸುವ ಜ್ಯೋತಿರ್ಲಿಂಗವೇ ಇದೆಂದು ದೃಢತರ ಭಾವನೆಯಿಂದ ಹೊರಗಣ ಇಷ್ಟಲಿಂಗವನ್ನು ದೇಹವಿರುವವರೆಗೆ ಧರಿಸಿರಲೇಬೇಕೆಂದು ಅನುಜ್ಞೆಯಿತ್ತಿ ರುತ್ತಾರೆ. ಅತೀಂದ್ರಿಯವೆನಿಸಿದ ನಿಷ್ಕಲರೂಪವಾದ ಭಾವಲಿಂಗೋಪಾಸ ನೆಯು ಸಿದ್ಧಿಸಬೇಕಾದರೆ ಮನೋಗ್ರಾಹ್ಯವಾದ ಪ್ರಾಣಲಿಂಗೋಪಾಸನೆಯು ಆವಶ್ಯಕ. ಪ್ರಾಣಲಿಂಗೋಪಾಸನೆಯು ಸಿದ್ಧಿಸಬೇಕಾದರೆ ಸಕಲರೂಪವಾದ ಇಷ್ಟಲಿಂಗೋಪಾಸನೆಯು ಅತ್ಯಾವಶ್ಯಕವು. ಇವುಗಳಲ್ಲಿ ಶಿವೋಽಹಂಭಾವ ನೆಯು (ಅಹಂಗ್ರಹೋಪಾಸನೆ) ಸರ್ವತ್ರ ಸಮನಾಗಿದ್ದರೂ ಇಷ್ಟಲಿಂಗೋ ಪಾಸನೆಯು ಸ್ಥೂಲವೂ, ಪ್ರಾಣಲಿಂಗೋಪಾಸನೆಯು ಸೂಕ್ಷ್ಮವೂ, ಭಾವ ಲಿಂಗೋಪಾಸನೆಯು ಅತಿ ಸೂಕ್ಷ್ಮವೂ ಆದುದಾಗಿದೆ. ಶ್ರೀಪತಿ ಪಂಡಿತರು "ಜೀವಮುಖ್ಯ ಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾ ದಾಶ್ರಿತತ್ವಾದಿಹ ತದ್ಯೋಗಾತ್" ಎಂಬ ಬ್ರಹ್ಮಸೂತ್ರ ಭಾಷ್ಯವಲ್ಲಿ ತ್ರಿವಿಧೋಪಾಸನೆಯನ್ನು ಸ್ಪಷ್ಟವಾಗಿ ಹೇಳಿರುತ್ತಾರೆ.

(ಅ. ೧. ಪಾ. ೨. ಸೂ. ೩೨)

ವೀರಶೈವ ಮತಕ್ಕೆ ಮೂಲಾಧಾರವಾದ ಇಷ್ಟಲಿಂಗಧಾರಣೆಯನ್ನು ವೀರಶೈವ ಮತಾಚಾರ್ಯರು ತಮ್ಮಿಂದ ರಚಿತವಾದ ಗ್ರಂಥಗಳಲ್ಲಿ ಸಂದರ್ಭಾನುಸಾರವಾಗಿ ಹೇಳಿದ್ದಾರೆಯೇ ಹೊರತು ಗ್ರಂಥದ ಆದ್ಯಂತವಾಗಿ ಲಿಂಗಧಾರಣೆಯನ್ನು ಸಮರ್ಥಿಸಿಲ್ಲ.

ನಂದಿಕೇಶ್ವರ ಶಿವಾಚಾರ್ಯರೆಂಬುವರು ಮಾತ್ರ ಗ್ರಂಥದ ಆದ್ಯಂತವಾಗಿ ಲಿಂಗಧಾರಣವನ್ನೇ ಸಮರ್ಥಿಸಿ ಗ್ರಂಥಕ್ಕೆ "**ಲಿಂಗಧಾರಣ ಚಂದ್ರಿಕೆ**" ಎಂಬ ಅನ್ವರ್ಥನಾಮವನ್ನು ಇಟ್ಟಿರುತ್ತಾರೆ. ಈ ಗ್ರಂಥದಲ್ಲಿ ಲಿಂಗಧಾರಣವು **ವೇದ, ಉಪನಿಷತ್ತು, ಆಗಮಗಳು, ಮನ್ವಾದಿ ಸ್ಮೃತಿಗಳು, ಅಲಂಕಾರಾದಿ ಶಾಸ್ತ್ರಗಳು ಮತ್ತು ಭಾರತಾದಿ ಇತಿಹಾಸಗಳಲ್ಲಿ** ಉಕ್ತವಾಗಿರುವುದರಿಂದ ಅನಾದಿ ಸಂಸಿದ್ಧವಾದುದೆಂದು ಸ್ಥಾಪಿಸಲ್ಪಟ್ಟಿದೆ.

ನಂದಿಕೇಶ್ವರನು ಪರಮಾಸ್ತಿಕನಾದುದರಿಂದ ಅನಾದಿ ಸಂಸಿದ್ಧವಾದ ವೈದಿಕ ಪಂಥವನ್ನು ದೃಢಪಡಿಸುವುದರಲ್ಲಿ ಸಮರ್ಥನೆಂಬುದು ಗ್ರಂಥಾರಂಭದಲ್ಲಿ ಮಾಡಿರುವ ಮಂಗಳಾಚರಣೆಯಿಂದ ಸ್ಪಷ್ಟವಾಗುತ್ತದೆ. ಮತ್ತು ಈತನು ಮಂಗಲ ಪದ್ಯದಲ್ಲಿ ಹೇಳಿರುವ "**ಷಡ್ಲಿಂಗರೂಪೋಽಭವತ್**" "**ಭಾವಾದಿಸಂಜ್ಞೋಽಭವತ್**" ಇತ್ಯಾದಿ ಮಹತ್ವಪೂರಿತ ವಿಶೇಷಣಗಳನ್ನು ಪರಿಶೀಲಿಸಿದರೆ ಗ್ರಂಥಕರ್ತನು ವೀರಶೈವ ಮತದ ಮುಕ್ತಿಹೇತುವಾದ ತ್ರಿವಿಧಲಿಂಗೋಪಾಸನೆಯ ಸಾರಸರ್ವಸ್ವವನ್ನೂ ಕೂಲಂಕಷವಾಗಿ ಅರಿದು ಆಚರಿಸಿ ಅನುಭವಿಸಿದ ಶ್ರೋತ್ರಿಯಬ್ರಹ್ಮನಿಷ್ಠನಾದ ಪಂಡಿತೋತ್ತಮನೆಂದು ವ್ಯಕ್ತವಾಗುತ್ತದೆ.

ಇದಲ್ಲದೆ ತನ್ನ ಉಪದೇಶಗುರುವಾದ ಮಲ್ಲೇಶ್ವರನ ಅಪ್ರತಿಹತವಾದ ವೈದುಷ್ಯವನ್ನು ಕೊಂಡಾಡಿರುವುದನ್ನು ನೋಡಿದರೆ ಈತನು ಕರ್ಣಾಟ ದೇಶವಾಸಿಯೆಂದು ಊಹಿಸಬಹುದು. "**ಮಲ್ಲೇಶ್ವರ**" ಎಂಬ ಹೆಸರು ಕನ್ನಡ ದೇಶೀಯರಾದ ವೀರಶೈವರಲ್ಲಿ ರೂಢಿಯಲ್ಲಿದೆ. ಮತ್ತು ನಂದಿಕೇಶ್ವರನು ವೇದ ಮಂತ್ರಗಳಿಗೆ ಲಿಂಗಧಾರಣಪರವಾದ ಅರ್ಥವನ್ನು ಮಾಡುವ ಸಂದರ್ಭದಲ್ಲಿ ವಿದ್ಯಾರಣ್ಯರ ಹೆಸರನ್ನು ಉಲ್ಲೇಖಿಸಿರು

ವುದರಿಂದ ಈತನು ವಿದ್ಯಾರಣ್ಯರ ಕಾಲ (ಕ್ರಿ. ಶ. ೧೪ನೆಯ ಶತಮಾನ) ದಿಂದೀಚೆಗೆ ಇದ್ದವನೆಂದು ಸ್ಪಷ್ಟವಾಗುತ್ತದೆ.

ಗ್ರಂಥಕರ್ತನು ಲಿಂಗಧಾರಣ ಚಂದ್ರಿಕೆಯನ್ನು ಬರೆಯಲು ಕಾರಣವನ್ನು ನಾಲ್ಕು ಮತ್ತು ಐದನೆಯ ಪದ್ಯಗಳಲ್ಲಿ ಸ್ಪಷ್ಟಪಡಿಸಿರುತ್ತಾನೆ. "ಲಿಂಗಧಾರಣವಿಧಾನವು ವೇದ ಶಾಸ್ತ್ರ ಪುರಾಣಾದಿಗಳಲ್ಲೆಲ್ಲಾ ವಿಶೇಷವಾಗಿ ಹೇಳಿದ್ದರೂ ಅವುಗಳೊಂದನ್ನೂ ಕಣ್ಣೆತ್ತಿನೋಡದೆ ಅಸೂಯಾಂಧರಾಗಿರುವ ಕೆಲವು ಪಂಡಿತಂಮನ್ಯರು (ಕುತ್ಸಿತಪಂಡಿತರು) ಲಿಂಗಧಾರಣವು ವೇದೋಕ್ತವಲ್ಲವಾದುದರಿಂದ ಅವೈದಿಕವೆಂದು ನಿರಾಕರಿಸಿರುವರು. ಆದುದರಿಂದ ಅವರಿಗೆ ತಕ್ಕ ಸಮಾಧಾನವನ್ನು ಕೊಟ್ಟು ಭ್ರಾಂತಿಮೂಲಕವಾದ ಅಜ್ಞಾನವನ್ನು ಪರಿಹರಿಸಿ ಲಿಂಗಧಾರಣಕ್ಕೆ ವೈದಿಕತ್ವ (ವೇದಪ್ರತಿಪಾದ್ಯತ್ವ) ವನ್ನು ಸ್ಥಾಪಿಸುವ ಸಾಮರ್ಥ್ಯವನ್ನು ಅನುಗ್ರಹಿಸೆಂದು ಶ್ರೀ ಪಾರ್ವತೀದೇವಿಯನ್ನು ಪ್ರಾರ್ಥನೆಮಾಡಿರುವುದನ್ನು ನೋಡಿದರೆ ಈತನ ಕಾಲದಲ್ಲಿ ವೀರಶೈವ ಧರ್ಮವು ಬಹಳ ದೀನಾವಸ್ಥೆಯನ್ನು ಪಡೆದಿದ್ದಿತೆಂದೂ, ಅನ್ಯಮತೀಯರು ಲಿಂಗಧಾರಿಗಳನ್ನು ನೋಡಿ ಅಸಹನೆ ತೋರಿಸುತ್ತಿದ್ದುದರಿಂದ ಅದನ್ನು ಸಹಿಸಲಾರದೆ ಈತನು ಈ ಗ್ರಂಥವನ್ನು ಬರೆದನೆಂದೂ ಊಹಿಸಬಹುದು.

ಅಲ್ಲದೆ ಈ ಗ್ರಂಥಕರ್ತನು ಅಲ್ಲಲ್ಲಿ ಸಂದರ್ಭಾನುಸಾರ ಪೂರ್ವ ಮೀಮಾಂಸೆಯ ಅನೇಕ ನ್ಯಾಯಗಳನ್ನು ದೃಷ್ಟಾಂತವಾಗಿ ತೋರಿಸಿ ಲಿಂಗಧಾರಣೆಯನ್ನು ಸ್ಥಿರಪಡಿಸಿರುತ್ತಾನೆ. ಮತ್ತು ಯಾವ ಯಾವ ಮಂತ್ರಗಳಿಗೆ ಲಿಂಗಧಾರಣಪರವಾಗಿ ಅರ್ಥಮಾಡುತ್ತಾನೆಯೋ ಆಯಾ ಮಂತ್ರಾರ್ಥವನ್ನು ಬಲಪಡಿಸುವುದಕ್ಕೋಸ್ಕರ ವ್ಯಾಸಪುರಾಣಾದಿಗಳಿಂದ ಅನೇಕ ಉಪಬೃಂಹಣ ವಾಕ್ಯಗಳನ್ನು ತೆಗೆದುಕೊಂಡಿರುತ್ತಾನೆ.

ಈ ಮಹಾಗ್ರಂಥದಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧವೆಂಬ ಎರಡು ವಿಭಾಗಗಳಿವೆ. ಅವುಗಳಲ್ಲಿ ಮೊದಲನೇ ಭಾಗದಲ್ಲಿ ಸ್ವತಃ (ಇತರ ಅಪೇಕ್ಷೆ ಇಲ್ಲದೆ) ಪ್ರಮಾಣವೆನಿಸಿದ ವೇದ ಮಂತ್ರಗಳಿಂದ ಲಿಂಗಧಾರಣವನ್ನು ಸ್ಥಿರಪಡಿಸಿ ತರುವಾಯ ಸ್ಮೃತಿ ತರ್ಕವ್ಯಾಕರಣಾಲಂಕಾರಾದಿ ಶಾಸ್ತ್ರಗಳಿಂದ

ಸ್ಥಿರಪಡಿಸಿರುತ್ತಾನೆ. ಲಿಂಗಧಾರಣದ ವಿಷಯದಲ್ಲಿ ಶಿವಾಗಮಗಳ ಪ್ರಮಾಣಗಳಂತೂ ಸುರಿಮಳೆಯಾಗಿವೆ. ಕೊನೆಯಲ್ಲಿ ಸಕಲ ದೇವತೆಗಳೂ, ದೇವತಾಸ್ತ್ರೀಯರೂ, ಮಹರ್ಷಿಗಳೂ ಕರಪೀಠಾರ್ಚನಾಪೂರ್ವಕವಾದ ಲಿಂಗಧಾರಣದಿಂದಲೇ ತಮ್ಮ ತಮ್ಮ ಪದವಿಗಳನ್ನು ಪಡೆದರೆಂದು ವ್ಯಾಸ ಮಹಾಪುರಾಣಗಳ ಪ್ರಮಾಣಗಳನ್ನು ಬಹಳವಾಗಿ ತೋರಿಸಿರುತ್ತಾನೆ. ಹೀಗೆ ಶರೀರದಲ್ಲಿ ಶಿವಲಿಂಗಧಾರಣೆಯನ್ನೂ, ಹಸ್ತಪೀಠದಲ್ಲಿ ಲಿಂಗಪೂಜೆಯನ್ನೂ, ಪ್ರತಿಪಾದಿಸುವ ವೀರಶೈವ ಗ್ರಂಥಗಳಲ್ಲಿ ಇದು ಬಹಳಮಟ್ಟಿಗೆ ಮೇಲಾದುದೆಂದು ಹೇಳಬಹುದು. ಇನ್ನು ಉತ್ತರಾರ್ಧವೆನಿಸುವ ಎರಡನೆಯ ಭಾಗದಲ್ಲಿ ಲಿಂಗಧಾರಿಯಾದವನ ಮೃತದೇಹವನ್ನು ಖನನ (ಸಮಾಧಿ) ಮಾಡಬೇಕಲ್ಲದೆ ದಹನಮಾಡಬಾರದೆಂದೂ, ಖನನವು ವೇದೋಕ್ತವಾದುದೆಂದೂ ಸಮರ್ಥಿಸಿ, ಲಿಂಗಧಾರಿಯಾದ ಮೃತಪುರುಷನಿಗೆ ಪ್ರೇತತ್ವವಿಲ್ಲದುದರಿಂದ ಸಾಪಿಂಡ್ಯಾದಿ (ಶ್ರಾದ್ಧ) ಕರ್ಮಗಳನ್ನು ನಿರಾಕರಣಮಾಡಿ, ಮೂವತ್ತಾರು ತತ್ತ್ವಗಳ ಸಂಯೋಜನೆಯ ಮೂಲಕ ಮುಕ್ತನಾಗುವ ವಿಧಾನವನ್ನೂ ತೋರಿಸಿರುತ್ತಾನೆ.

ಈ ಗ್ರಂಥದಲ್ಲಿರುವ ಅಭಿಪ್ರಾಯಗಳನ್ನೆಲ್ಲಾ ತಿಳಿದುಕೊಂಡರೆ ಲಿಂಗಧಾರಣದ ಮೇಲೆ ಬರುವ ವಾದಿಗಳ ಆಕ್ಷೇಪಗಳೆಲ್ಲಾ ಬಿರುಗಾಳಿಯಿಂದ ಮೇಘಗಳು ಚದುರುವಂತೆ ಚೆದುರಿಹೋಗುವುವು. ಆದರೆ ಪೂರ್ವೋತ್ತರ ಮೀಮಾಂಸೆಗಳಲ್ಲಿಯೂ ತರ್ಕವ್ಯಾಕರಣಾದಿ ಶಾಸ್ತ್ರಗಳಲ್ಲಿಯೂ ಪಂಡಿತನಾದವನು ಮಾತ್ರ ಈ ಗ್ರಂಥವನ್ನು ನೋಡಬಹುದೇ ಹೊರತು ಕೇವಲ ಸಂಸ್ಕೃತ ಭಾಷಾಪರಿಚಯವಿದ್ದವನಿಗೆ ಸಾಧ್ಯವಿಲ್ಲ. ಆದುದರಿಂದ ಸಂಸ್ಕೃತ ಭಾಷೆಯ ಹೆಚ್ಚು ಪರಿಚಯವಿಲ್ಲದ ಕನ್ನಡಿಗರಿಗೂ ಮತ್ತು ವಿಶೇಷವಾಗಿ ಮುಮುಕ್ಷುವಾದ ಪ್ರತಿಯೊಬ್ಬ ವೀರಶೈವನಿಗೂ ಈ ಗ್ರಂಥದ ಆಶಯವು ಸುಲಭವಾಗಿ ತಿಳಿಯುವುದು ಆವಶ್ಯಕವೆಂದು ಈ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಪರಿವರ್ತಿಸಬೇಕಾಯಿತು. ಈ ಪರಿವರ್ತನೆಯಲ್ಲಿ ಮೂಲಗ್ರಂಥಕಾರನ ಆಶಯವನ್ನು ದೃಢಪಡಿಸುವುದಕ್ಕಾಗಿಯೂ, ಶಾಸ್ತ್ರೀಯವಾದಗಳನ್ನು ಸುಲಭಮಾಡಿಕೊಡುವುದಕ್ಕಾಗಿಯೂ ಅಲ್ಲಲ್ಲಿ ಬೇರೆ

ಬೇರೆ ಗ್ರಂಥಗಳ ಉದಾಹರಣೆಗಳನ್ನು ಕೊಡಲಾಗಿದೆ ಎಂಬುದನ್ನು ಓದು ಗರು ಅರಿಯಬೇಕು.

ಈ ಗ್ರಂಥವನ್ನು ಕನ್ನಡಕ್ಕೆ ಪರಿವರ್ತಿಸುವುದಕ್ಕೆ ಕಾಶೀಪೀಠಾಧ್ಯಕ್ಷ ರಾಗಿದ್ದ ಶ್ರೀ ರಾಜೇಶ್ವರಸ್ವಾಮಿಗಳವರು ಮಹಾಮಹೋಪಾಧ್ಯಾಯ ರಾದ ಶ್ರೀ ಶಿವಕುಮಾರ ಪಂಡಿತರಿಂದ ಬರೆಯಿಸಲ್ಪಟ್ಟ "ಶರತ್" ಎಂಬ ವ್ಯಾಖ್ಯಾನವು ನಮಗೆ ಸಹಾಯವನ್ನು ನೀಡಿದುದರಿಂದ ಶಿವನಲ್ಲಿ ಐಕೀಭವಿಸಿದ ಆಚಾರ್ಯ ಚರಣರಿಗೂ, ಪಂಡಿತೋತ್ತಮರಿಗೂ ಧನ್ಯವಾದ ಗಳನ್ನು ಸಮರ್ಪಿಸಬೇಕಾಗಿದೆ. ಇದುವರೆಗೆ ಲಿಂಗಧಾರಣ ವಿಷಯದಲ್ಲಿ ಇಷ್ಟು ವಿಸ್ತಾರವಾದ ಗ್ರಂಥವು ಕನ್ನಡದಲ್ಲಿರಲಿಲ್ಲ. ಆದುದರಿಂದ ಪ್ರತಿ ಯೊಬ್ಬ ಕನ್ನಡಿಗನೂ ಹೆಚ್ಚಾಗಿ ಎಲ್ಲ ಲಿಂಗಾಂಗಿಗಳೂ ಈ ಗ್ರಂಥವನ್ನು ಓದುವುದು ಅವಶ್ಯವೆಂದು ಭಾವಿಸುತ್ತೇವೆ.

ಈ ಗ್ರಂಥವನ್ನು ಹಿಂದೆ ಮೈಸೂರಿನ ಕೈ॥ ಶ್ರೀಮಾನ್ **ಯಜಮಾನ್ ವೀರಸಂಗಪ್ಪನವರು** ತೆಲುಗು ಅಕ್ಷರದಲ್ಲಿ ಮುದ್ರಣಮಾಡಿಸಿದ್ದರು. ಆದರೆ ಆಗ ಮುದ್ರಣವಾದ ಪ್ರತಿಯಲ್ಲಿ ಕವಿಯ ಮಂಗಲಾಚರಣೆ ಮತ್ತು ಉದ್ದೇಶನಿರೂಪಣೆಯೂ ಇಲ್ಲದೆ ಗ್ರಂಥ "ತೈತ್ತಿರೀಯಕೇ ತು" ಎಂದು ಆರಂಭವಾಗಿದೆ. ಈ ಗ್ರಂಥದ ಆಧಾರದಮೇಲೆ ಕಾಶಿಯಲ್ಲಿ ಅಚ್ಚಾದ ಪ್ರತಿಯಲ್ಲಿಯೂ ಹೀಗೆಯೇ ಇದೆ. ಆದರೆ ಇತ್ತೀಚೆಗೆ ಆಸ್ಥಾನಮಹಾ ವಿದ್ವಾನ್, ಕರ್ಣಾಟಕಭಾಷಾರತ್ನಂ, **ಕೈ॥ ಪಿ. ಆರ್. ಕರಿಬಸವಶಾಸ್ತ್ರಿ** ಗಳವರ ಪರಿಶ್ರಮದಿಂದ ಲೋಪವಾಗಿದ್ದ ಭಾಗವು ದೊರೆತು ಈಗ ಗ್ರಂಥವು ಸಂಪೂರ್ಣವಾಗಿದೆ.

## ೨
## ಆಕ್ಷೇಪ–ಸಮಾಧಾನಗಳು

ಲಿಂಗಧಾರಣ ಚಂದ್ರಿಕೆ ಮತ್ತು ಶ್ರೀ ಶಿವಕುಮಾರ ಪಂಡಿತರ ಶರತ್ ವ್ಯಾಖ್ಯಾನದ ಮೇಲೆ ಅನೇಕರು ಈಚೆಗೆ ನಾನಾವಿಧವಾದ ಆಕ್ಷೇಪಗಳನ್ನೂ, ಟೀಕೆ, ಟಿಪ್ಪಣಿಗಳನ್ನೂ ಬರೆಯತೊಡಗಿದ್ದಾರೆ. ಈ ಆಕ್ಷೇಪಕರಲ್ಲಿ ಬೆಳಗಾಂ ಲಿಂಗರಾಜ ಕಾಲೇಜಿನ ಸಂಸ್ಕೃತ ಪ್ರೊಫೆಸರ್ ಆಗಿದ್ದ ಶ್ರೀ ಎಂ. ಆರ್.

**ಸಾಖರೆಯವರು** ಪ್ರಧಾನ ಪಟ್ಟಾಂಕಿತರಾಗಿದ್ದಾರೆ. ಇವರು ಲಿಂಗ ಧಾರಣಚಂದ್ರಿಕೆಯನ್ನು ಆಂಗ್ಲಭಾಷೆಗೆ ಪರಿವರ್ತಿಸಿ ಅದಕ್ಕೆ ಒಂದು ದೀರ್ಘವಾದ ವಿಮರ್ಶಾತ್ಮಕ ಪೀಠಿಕೆ (Introduction) ಯನ್ನು ಆಂಗ್ಲ ಭಾಷೆಯಲ್ಲಿ ಬರೆದಿದ್ದಾರೆ. ಇದರಲ್ಲಿ ಬರೆದಿರುವ ಆಕ್ಷೇಪಗಳಲ್ಲಿ ಇವು ಮುಖ್ಯವಾದುವು.

## ಆಕ್ಷೇಪಗಳು

೧. "ಲಿಂಗಧಾರಣ ಚಂದ್ರಿಕೆಯಂಥ ಗ್ರಂಥಗಳು ಲಿಂಗಾಯತ ಮತದ ಮೂಲತತ್ತ್ವಗಳಿಗೆ ವೇದಗಳಲ್ಲಿ ಮುಖ್ಯವಾಗಿ ಉಪನಿಷತ್ತುಗಳಲ್ಲಿ ಆಧಾರ ಹುಡುಕಲು ಹೊರಟಿರುವುದು ಈ ಅವ್ಯವಸ್ಥೆಗೆಲ್ಲಾ ಕಾರಣ. ಲಿಂಗಾಯತ ಮತತತ್ತ್ವಗಳನ್ನೂ ಪ್ರಕ್ರಿಯೆಗಳನ್ನೂ ಸಿದ್ಧಾಂತವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅದು ಮೂಲತಃ ಹಿಂದೂಮತಕ್ಕೆ ಬೇರೆ ಯಾಗಿರುವುದು ಸ್ಪಷ್ಟವಾಗುತ್ತದೆ." * (ಲಿಂ. ಪೀಠಿಕೆ ಪು. ೬೭೩—೬೬೯)

೨. "ಲಿಂಗಾಯತ ಮತಕ್ಕೆ ಅದರದೇ ಆದ ಒಂದು ದರ್ಶನವೂ ಅದಕ್ಕೇ ಪ್ರತ್ಯೇಕವಾದ ಮತಪ್ರಕ್ರಿಯೆಗಳೂ ಇರುವುದರಿಂದ ಅದು ಹಿಂದು ಮತದ ಒಳಶಾಖೆಯಾಗಲಾರದು." (ಲಿಂ. ಪೀಠಿಕೆ ಪು. ೬೭೦)

೩. "ಲಿಂಗಾಯತರು ಹಿಂದುಗಳಿಗಿಂತ ಭಿನ್ನರು, ಲಿಂಗಾಯತ ಮತ ಹಿಂದುಮತದಿಂದ ಭಿನ್ನವಾದುದು." (ಪ್ರ. ಕ. ಪು. ೧೧೧)

೪. "ಲಿಂಗಧಾರಣಚಂದ್ರಿಕಾಕಾರರಂಥ ವೈದಿಕಪ್ರೇಮಿಗಳಿಂದ ಗೊಂದಲವೂ, ಅವ್ಯವಸ್ಥೆಯೂ ಉಂಟಾಗಿದೆಯೆಂದೂ ಕನ್ನಡ ಸಾಹಿತ್ಯದ ವಚನಗಳೇ ಲಿಂಗಾಯತ ಮತಕ್ಕೆ ಮೂಲಾಧಾರವೆಂದೂ, ಬಸವಣ್ಣನವರೇ ಲಿಂಗಾಯತಮತ ಸ್ಥಾಪಕರೆಂದೂ" ಸಾಖರೆಯವರು ಅಭಿಪ್ರಾಯಪಡು ತ್ತಾರೆ. (ಪ್ರ. ಕ. ಪುಟ ೧೦೬)

---

* ಸೂಚನೆ:—ಸಾಖರೆಯವರ ಈ ಆಕ್ಷೇಪಗಳಲ್ಲಿ ೧, ೨, ೩, ೪ ಮತ್ತು ೬ಕ್ಕೆ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳವರು ಪ್ರಬುದ್ಧ ಕರ್ಣಾಟಕದ ಸಂ. ೨೪, ಸಂ. ೩ (೧೯೪೩) ಕಾವ್ಯಾವಲೋಕನ ಪುಟ ೯೬—೧೧೧ರಲ್ಲಿ ಉದ್ಧರಿಸಿರುವ ಭಾಷಾಂತರವನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿದೆ.

೫. "ನಂದಿಕೇಶ್ವರನಿಂದ ಉದಹರಿಸಲ್ಪಟ್ಟಿರುವ ವೇದಭಾಗದ ಮೇಲೆ ಶ್ರೀ ಶಿವಕುಮಾರ ಪಂಡಿತರು ಮಾಡಿರುವ ವ್ಯಾಖ್ಯಾನವು ನಿರೀಕ್ಷಿಸಲಾಗುವಂತೆ ಯಥೇಷ್ಟವಾಗಿಯೂ ದೀರ್ಘವಾಗಿಯೂ ಇದೆ. ಆದರೆ ಲಿಂಗಾಯತ ಮತದ ತತ್ತ್ವದ ವಿಷಯವಾಗಿ ಈ ಪಂಡಿತರ ವ್ಯಾಖ್ಯಾನವು ಬಹಳ ಚಿಕ್ಕದಾಗಿರುವುದಲ್ಲದೆ ಬೆಳಕನ್ನು ಬೀರುವುದಿಲ್ಲ.

ಕೆಲವುಕಡೆ ಗ್ರಂಥಕರ್ತನ ವಿಷಯವಾಗಿ ಸಹಾನುಭೂತಿಯನ್ನು ತೋರಿಸಿಲ್ಲ. ಮತ್ತು ಕೆಲವುಕಡೆ ಗ್ರಂಥಕರ್ತನ ಅಭಿಪ್ರಾಯಕ್ಕೆ ವಿರೋಧವನ್ನು ತೋರಿಸಿದ್ದಾರೆ.

ಈ ವ್ಯಾಖ್ಯಾನವು ಕೇವಲ ದ್ರವ್ಯಾರ್ಜನೆಗಾಗಿ ಬರೆಯಲ್ಪಟ್ಟದ್ದು. ತತ್ತ್ವಾನ್ವೇಷಣದೃಷ್ಟಿಯಿಂದ ಮತ್ತು ವೀರಶೈವಮತ ಸಿದ್ಧಾಂತವನ್ನು ಪ್ರಚಾರಮಾಡಬೇಕೆಂಬ ಧ್ಯೇಯದಿಂದ ಬರೆಯಲ್ಪಟ್ಟದ್ದಲ್ಲ. ದ್ರವ್ಯದಾಶೆಯಿಂದ ಈ ವ್ಯಾಖ್ಯಾನವನ್ನು ಬರೆದ ವಿಷಯವನ್ನು ವ್ಯಾಖ್ಯಾನಕಾರರು "ಲೋಕೈಷಣಾ...." ಎಂಬ ಪದ್ಯದಲ್ಲಿ ಮುಚ್ಚುಮರೆಯಿಲ್ಲದೆ ಒಪ್ಪಿಕೊಂಡಿದ್ದಾರೆ."
(ಲಿಂ. ಪೀಠಿಕೆ ಪು. ೬೯)

೬. "ತಮ್ಮದೇ ಆದ ಒಂದು ಪಂಗಡವನ್ನು ಮಾಡಿಕೊಂಡು ಜಂಗಮರೆಂದು ತಮ್ಮನ್ನು ಕರೆದುಕೊಳ್ಳುತ್ತಾ ಅವಿದ್ಯಾವಂತರೂ, ಶುದ್ಧ ಶುಂಠಕಾಯಿಗಳೂ ಆಗಿದ್ದರೂ ಜನ್ಮತಃ ಜಂಗಮರೆಂಬ ಹೆಮ್ಮೆಯುಳ್ಳವರಾಗಿ ಹಿಂದೂ ಸಮಾಜದ ಬ್ರಾಹ್ಮಣರಂತೆ ಮೂಢಜನತೆಯನ್ನು ಕಿತ್ತು ತಿನ್ನುತ್ತಾ ಹೊಟ್ಟೆಹೊರೆದುಕೊಳ್ಳುತ್ತಿರುವ ಸ್ವಾಮಿಗಳು ಅಥವಾ ಅಯ್ಯನವರುಗಳನ್ನು ಕೆಲವು ಉತ್ಸವ ಸಂದರ್ಭಗಳಲ್ಲಿ ಪೂಜಿಸುತ್ತಾರೆ." *
(ಲಿಂ. ಪೀಠಿಕೆ ಪು. ೬೬೩-೬೬೪)

* ಪ್ರಬುದ್ಧ ಕರ್ಣಾಟಕ ಸಂ. ೨೪, ಸಂ. ೩ ಪುಟ ೧೦೦–೧೦೧.

## ಸಮಾಧಾನಗಳು

ವೇದಾಗಮೋಪನಿಷತ್ತುಗಳೇ ವೀರಶೈವ ಸಿದ್ಧಾಂತಕ್ಕೆ ಆಧಾರವಾಗಿವೆ. ವೇದಾಗಮೋಪನಿಷತ್ತುಗಳು ಸ್ವತಃ ಪ್ರಮಾಣಗಳಾಗಿರುವಂತೆ ಕನ್ನಡ ವಾಙ್ಮಯವು ಸ್ವತಃ ಪ್ರಮಾಣವಾಗಿಲ್ಲ. ಆಯಾ ದೇಶಕಾಲಗಳಲ್ಲಿ ಅವತರಿಸಿದ ಮಹಾನುಭಾವರಾದ ಭಗವದ್ಭಕ್ತರು ವೇದಾಗಮೋಪನಿಷತ್ತುಗಳಲ್ಲಿ ಉಕ್ತವಾಗಿರುವ ನಿಗೂಢತತ್ತ್ವಗಳನ್ನು ಲೋಕಕಲ್ಯಾಣಕ್ಕಾಗಿ ಬೇರೆ ಬೇರೆ ಭಾಷೆಗಳಲ್ಲಿ ಬರೆದಿರುತ್ತಾರೆ. ಕನ್ನಡ ವಚನವಾಙ್ಮಯವಲ್ಲದೆ ಮರಾಠಿ ಮುಂತಾದ ಭಾಷೆಗಳಲ್ಲಿಯೂ ವೇದಾಂತ ತತ್ತ್ವಗಳು ಪ್ರಚಾರದಲ್ಲಿರುತ್ತವೆ. ಇಂತಹ ವಾಙ್ಮಯ ಗ್ರಂಥಗಳೆಲ್ಲವೂ ಮೂಲಭೂತಗಳಾದ ವೇದಾಗಮೋಪನಿಷತ್ತುಗಳ ಮೂಲಕವಾಗಿ (ಪರತಃ) ಪ್ರಮಾಣಗಳಾಗುತ್ತವೆಯೇ ಹೊರತು ಸ್ವತಃ ಪ್ರಮಾಣಗಳಾಗಲಾರವು. ಪ್ರತಿಯೊಂದು ವಚನಪ್ರಣಾಲಿಯಲ್ಲಿಯೂ ವೇದಾಗಮಗಳ ಅವತರಣಗಳೂ, ಅವುಗಳ ಗೂಢಾರ್ಥವೂ ಧಾರಾಕಾರವಾಗಿ ಪ್ರವಹಿಸುತ್ತಲಿದೆ. ಬಸವಣ್ಣನವರ ವಚನಗಳನ್ನೇ ಪರಿಶೀಲಿಸಿದರೆ

"ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತಾಡಬೇಡ.
ದೇವರೊಬ್ಬನೇ ಕಾಣಿರೋ ಕೂ. ದೇವನಲ್ಲದಿಲ್ಲೆಂದಿತ್ತು ವೇದ"
"ಶ್ರುತಿಗಳು ನಾಲ್ಕು ವೇದವು ಪುಸಿಯದೆ 'ಭರ್ಗೋ ದೇವಸ್ಯ ಧೀಮಹಿ'
ಎಂಬುದಾಗಿ ಕೂಡಲಸಂಗನಲ್ಲದಿಲ್ಲೆಂದುದು ವೇದ."
"ಕೋsಹಂ ಬ್ರಹ್ಮರಂಧ್ರದೊಳಗೆ ಯತೋ ವಾಚೋ ನಿವರ್ತಂತೇ
ಅಪ್ರಾಪ್ಯ ಮನಸಾ ಸಹ। ಆನಂದಂ ಬ್ರಹ್ಮಣೋ ವಿದ್ವಾನ್"
ಇಂತೆಂದುದಾಗಿ ಅಗಮ್ಯಕೂಡಲಸಂಗಮದೇವನಲ್ಲದೆ ಮತ್ತಾರೂ ಇಲ್ಲ."

ಎಂದು ಬಸವಣ್ಣನವರು ತಮ್ಮ ವಚನಗಳಲ್ಲಿ ವೇದಗಳಿಗೆ ಪ್ರಾಮಾಣ್ಯವನ್ನು ಕೊಟ್ಟಿದ್ದಾರೆ. ಆದರೆ ಬಸವಣ್ಣನವರು ಒಂದೆರಡು ಕಡೆ ವೇದಾಗಮಗಳನ್ನು ನಿರಾಕರಿಸಿದ್ದರೂ ಆ ನಿರಾಕರಣದ ತಾತ್ಪರ್ಯವೇ ಬೇರೆ. ವೇದಾಂತಮತ ಪ್ರತಿಷ್ಠಾಪನಾಚಾರ್ಯರಾದ ಶಂಕರಾಚಾರ್ಯರೂ ಮತ್ತು ಭಗವದ್ಗೀತಾಕಾರರೂ ಸಹ

"ಅವಿದ್ಯಾವದ್ವಿಷಯಾಣಿ ಶಾಸ್ತ್ರಾಣಿ"

"ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ"

ಮುಂತಾಗಿ ವೇದಗಳ ನಿರಾಕರಣೆಯನ್ನು ಮಾಡಿದ್ದರೂ ಆ ಸಿದ್ಧಾಂತಗಳು ಅವೈದಿಕಗಳೆಂದು ಹೇಳಲು ಸಾಧ್ಯವೆ? ಹಾಗೆ ವೀರಶೈವಮತದಲ್ಲಿಯೂ ಸಹ

"ಉಲ್ಕಾಹಸ್ತೋ ಯಥಾ ಕಶ್ಚಿದ್ದ್ರವ್ಯಮಾಲೋಕ್ಯ ತಾಂ ತ್ಯಜೇತ್ ।
ಜ್ಞಾನೇನ ಜ್ಞೇಯಮಾಲೋಕ್ಯ ಪಶ್ಚಾತ್ ಜ್ಞಾನಂ ಪರಿತ್ಯಜೇತ್ ॥

ಒಬ್ಬನು ಉರಿಯುವ ಕೊಳ್ಳಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ತನ್ನ ಇಷ್ಟವಾದ ಪದಾರ್ಥವನ್ನು ನೋಡಿದ ಮೇಲೆ ಆ ಕೊಳ್ಳಿಯನ್ನು ಬಿಸಾಡುವಂತೆ ವೇದಾಗಮೋಪನಿಷತ್ತೆಂಬ ಪರೋಕ್ಷಜ್ಞಾನದಿಂದ ಅಪರೋಕ್ಷಜ್ಞಾನ (ಆತ್ಮಸಾಕ್ಷಾತ್ಕಾರ)ವನ್ನು ಹೊಂದಿದಮೇಲೆ ವೇದಾಗಮೋಪನಿಷದ್ರೂಪವಾದ ಪರೋಕ್ಷಜ್ಞಾನವನ್ನು ನಿರಾಕರಿಸುವನು" ಎಂದು ಮೃಗೇಂದ್ರಾಗಮದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಮಲಾವರಣವು ನಷ್ಟವಾಗಿ ಶಿವತ್ವಾಭಿವ್ಯಕ್ತಿರೂಪವಾದ ಮೋಕ್ಷವಂ ಪಡೆದಾತನಿಗೆ ಶಾಸ್ತ್ರರೂಪವಾದ ಪರೋಕ್ಷಜ್ಞಾನದ ಆವಶ್ಯಕತೆಯಿಲ್ಲ.

ಮುಖ್ಯವಾಗಿ ಆಸ್ತಿಕ ಮತಗಳು ವೈದಿಕ, ತಾಂತ್ರಿಕ, ವೈದಿಕ–ತಾಂತ್ರಿಕ, ಮತ್ತು ತಾಂತ್ರಿಕ–ವೈದಿಕ ಎಂದು ನಾಲ್ಕು ಭಾಗವಾಗಿ ವಿಗಂಡಿಸಲ್ಪಟ್ಟಿರುತ್ತವೆ. ಇವುಗಳಲ್ಲಿ ಕೇವಲ ವೇದೋಕ್ತ ಕರ್ಮಗಳನ್ನಾಚರಿಸುವವರು ವೈದಿಕರೆಂತಲೂ, ಕೇವಲ ತಂತ್ರೋಕ್ತ ಕರ್ಮಗಳನ್ನಾಚರಿಸುವವರು ತಾಂತ್ರಿಕರೆಂತಲೂ, ವೇದೋಕ್ತ ಕರ್ಮಗಳೊಡನೆ ತಂತ್ರೋಕ್ತ ಕರ್ಮಗಳನ್ನು ಅಪ್ರಧಾನವಾಗಿ ಆಚರಿಸುವವರು ವೈದಿಕತಾಂತ್ರಿಕರೆಂತಲೂ ತಂತ್ರೋಕ್ತ ಕರ್ಮಗಳೊಡನೆ ವೇದೋಕ್ತ (ಅನಿರುದ್ಧ) ಕರ್ಮಗಳನ್ನು ಆಚರಿಸುವ ವೀರಶೈವರು ತಾಂತ್ರಿಕ ವೈದಿಕರೆನಿಸುತ್ತಾರೆ.

"ವೇದಸಿದ್ಧಾಂತಯೋರೈಕ್ಯಂ ಏಕಾರ್ಥಪ್ರತಿಪಾದನಾತ್"

ಎಂಬ ಸಿದ್ಧಾಂತ ಶಿಖಾಮಣಿಯ ಪ್ರಮಾಣದಿಂದ ವೇದಗಳಿಗೂ, ಆಗಮಗಳಿಗೂ ಒಬ್ಬ ಈಶ್ವರನೇ ಕರ್ತನಾಗಿರುವುದರಿಂದಲೂ ಒಂದೇ ಅರ್ಥವನ್ನು

ಬೋಧಿಸುವುದರಿಂದಲೂ ಇವೆರಡೂ ಸಮಪ್ರಾಣಗಳೇ ಆಗಿವೆ. ವೀರಶೈವರ ಲಿಂಗಪೂಜಾದಿ ಕರ್ಮಗಳಲ್ಲಿ ಮೊದಲು ಆಗಮ ಶ್ಲೋಕಗಳೂ ತರುವಾಯ ವೇದಮಂತ್ರಗಳೂ ಕಂಡುಬರುವುದಲ್ಲದೆ ಈ ಸಂಪ್ರದಾಯದಲ್ಲಿರುವ ಷಡಧ್ವ ಶುದ್ಧಿ ತತ್ವಶುದ್ಧಿ ಕ್ರಮಗಳು ಆಗಮೋಕ್ತಗಳಾಗಿಯೂ, ಇವರು ಜಪಿಸುವ ಪಂಚಾಕ್ಷರೀ ಮಹಾಮಂತ್ರವೂ, ಧರಿಸುವ ಶಿವಲಿಂಗ, ಭಸ್ಮ, ರುದ್ರಾಕ್ಷ ಮಂತ್ರಪಾದೋದಕ, ಪ್ರಸಾದ, ಗುರು ಮತ್ತು ಜಂಗಮರು (ಅಷ್ಟಾವರಣ) ವೇದೋಕ್ತಗಳೂ ಆಗಿವೆ. ಹೀಗೆ ವೈದಿಕರೆನಿಸಿಕೊಳ್ಳುವ ವೀರಶೈವರು ವೇದ (ಕರ್ಮಕಾಂಡ) ಗಳಲ್ಲಿ ಹೇಳಲ್ಪಟ್ಟಿರುವ ಜ್ಯೋತಿಷ್ಟೋಮ ಪಶುವಿಶ ಸನ, ಅಗ್ನಿಹೋತ್ರ, ವೈಶ್ವದೇವ, ಶ್ರಾದ್ಧ (ಪಿಂಡಪ್ರದಾನ) ಮುಂತಾದ ಸ್ವರ್ಗ ಸ್ವಾರಾಜ್ಯಾದಿನಶ್ವರಫಲಗಳನ್ನೀಯುವ ಪಶುಕರ್ಮಗಳನ್ನು ಆಚ ರಿಸದಿದ್ದರೂ ಜ್ಞಾನಕಾಂಡ(ಉಪನಿಷತ್ತುಗಳು)ದಲ್ಲಿ ಹೇಳಲ್ಪಟ್ಟಿರುವ ಮುಕ್ತಿ ಸಾಧಕವಾದ ಲಿಂಗಧಾರಣ, ಲಿಂಗಾರ್ಚನ, ಲಿಂಗಭಜನೆ, ಲಿಂಗಾರ್ಪಣ, ಲಿಂಗಾರ್ಪಿತ ಗ್ರಹಣ ಮುಂತಾದ ಮೋಕ್ಷಾಂಗ ಪತಿಕರ್ಮಗಳನ್ನು ಆಚ ರಿಸುತ್ತಲೇ ಇದ್ದಾರೆ. ಈ ವಿಷಯದಲ್ಲಿ ನೀಲಕಂಠ ಶಿವಾಚಾರ್ಯರು

> " ಅಷ್ಟಾವರಣವಿಜ್ಞಾನೀ ಪಂಚಾಚಾರಪರಾಯಣಃ |
> ವೈದಿಕಂ ಕರ್ಮ ಕುರ್ವೀತ ಜ್ಞಾನೈಕಫಲಸಾಧನಮ್ ॥ "

(ಕ್ರಿಯಾಸಾರ)

ಎಂದು ಹೇಳಿರುವುದಲ್ಲದೆ **ನ ಕುರ್ಯಾತ್ಪಾಶವಂ ಕರ್ಮ ವೀರಶೈವಃ ಕದಾಚನ**" ಎಂದು ಜ್ಯೋತಿಷ್ಟೋಮಾದಿ ಪಶುಕರ್ಮಗಳನ್ನು ನಿಷೇಧಿ ಸಿದ್ದಾರೆ. ಅಲ್ಲದೆ ವೇದಗಳಲ್ಲಿರುವ ಯಾವತ್ಕರ್ಮಗಳನ್ನೂ ಆಚರಿಸುವುದು ಯಾರಿಂದಲೂ ಸಾಧ್ಯವಾಗದ ಮಾತು. "**ಯಾವತಾಂ ಸಮನುಷ್ಠಾನಂ ಸಪ್ತಸಾಗರಶೋಷಣಮ್** " ಹಾಗೆ ಆಚರಿಸುತ್ತೇನೆಂಬುದು ಸಪ್ತ ಸಾಗರಗಳನ್ನೂ ಒಣಗಿಸುವೆನೆಂಬುವಷ್ಟು ಸಾಹಸವಾದುದು. ಎಂದು ಅದೇ ನೀಲಕಂಠ ಶಿವಾಚಾರ್ಯರು ವಿಡಂಬನಮಾಡಿದ್ದಾರೆ.

ವೇದವು ಒಂದು ರತ್ನಾಪಣ (ಅಂಗಡಿ) ದಂತಿರುತ್ತದೆ. ಆ ರತ್ನಾ ಪಣದಲ್ಲಿ ಕನಿಷ್ಠ, ಮಧ್ಯಮ, ಉತ್ತಮ ತರಗತಿಯ ರತ್ನಗಳಿರುವುದು ಸ್ವಭಾವವಾಗಿದೆ. ವಿಕ್ರೇತೃ (ಕೊಂಡುಕೊಳ್ಳುವವ) ಗಳು ತಮಗಿಷ್ಟವಾದ

ರತ್ನಗಳನ್ನೆ ತೆಗೆದುಕೊಳ್ಳುತ್ತಾರಲ್ಲದೆ, ಅಲ್ಲಿರುವ ರತ್ನಗಳನ್ನೆಲ್ಲಾ ತೆಗೆದು ಕೊಳ್ಳಲಾರರು. ಈಗ ಕನಿಷ್ಠ ತರಗತಿಯ ರತ್ನಗಳನ್ನು ತೆಗೆದುಕೊಂಡ ವನೇ ಮುಂದೆ ಶ್ರೇಷ್ಠವಾದ ರತ್ನಗಳನ್ನು ತೆಗೆದುಕೊಳ್ಳಬಹುದು. ಅದರಂತೆ ವೇದಗಳು ಜಗತ್ತಿನ ವಸ್ತುಸ್ವಭಾವವನ್ನು ತಿಳಿಸುತ್ತವೆ. ಈ ವೇದ ಗಳಲ್ಲಿ ಕರ್ಮಕಾಂಡವೆಂತಲೂ, ಜ್ಞಾನಕಾಂಡವೆಂತಲೂ ಎರಡು ಭಾಗ ಗಳುಂಟು. ಕರ್ಮಕಾಂಡವು ಐಹಿಕಭೋಗಸಾಧನಗಳಾದ ಕರ್ಮಗಳನ್ನೂ, ಸ್ವರ್ಗಾದ್ಯಾಮುಷ್ಮಿಕ ಫಲಸಾಧನಗಳಾದ ಕರ್ಮಗಳನ್ನೂ ತಿಳಿಸುತ್ತವೆ. ಸ್ವರ್ಗಕಾಮನು ಜ್ಯೋತಿಷ್ಟೋಮ, ಅಗ್ನಿಹೋತ್ರ ದರ್ಶಪೂರ್ಣಮಾಸ ಮುಂತಾದ ಯಾಗಗಳನ್ನೂ, ಪುತ್ರಕಾಮನು ಪುತ್ರಕಾಮೇಷ್ಟಿಯನ್ನೂ, ವೃಷ್ಟಿಕಾಮನು ಕಾರೀರೀ ಯಾಗವನ್ನೂ, ಪ್ರತಿಷ್ಠಾಕಾಮಿಯು ರಾತ್ರಿ ಸತ್ರವನ್ನೂ, ಶತ್ರುಸಂಹಾರ ಕಾಮಿಯು ಶ್ಯೇನಯಾಗವನ್ನೂ, ಸ್ವಾರಾಜ್ಯ ಕಾಮಿಯು ರಾಜಸೂಯ ಯಾಗವನ್ನೂ ಅನುಷ್ಠಿಸುತ್ತಾನೆ. ಇದಲ್ಲದೆ, ಆಭಿಚಾರಿಕ ಕರ್ಮಗಳನ್ನು ತಿಳಿಸುವ ವೇದ ಭಾಗಗಳೂ ಸಹ ಇರುತ್ತವೆ. ಜನನಮರಣ ರೂಪ ಸಂಸಾರ ಬಂಧದಿಂದ ಬಿಡುಗಡೆಯಾಗಿ ಮೋಕ್ಷವೆಂಬ ಪರಮ ಪುರುಷಾರ್ಥವನ್ನು ಪಡೆಯಬೇಕೆಂಬುವನು, ಆ ಕರ್ಮಕಾಂಡೋ ಕ್ತವಾದ ತುಚ್ಛ ಫಲಗಳನ್ನಾಗಲೀ, ತತ್ಸಾಧನಗಳಾದ ಕರ್ಮಗಳನ್ನಾಗಲಿ ಅನುಷ್ಠಿಸುವುದಿಲ್ಲ. ಹೀಗೆ ಮೋಕ್ಷಕಾಮನು ಕರ್ಮಕಾಂಡೋಕ್ತ ಮಂತ್ರ ಗಳಿಗೂ ಆ ಕರ್ಮಗಳಿಗೂ ಅಪ್ರಾಧಾನ್ಯವನ್ನೂ ಮುಕ್ತಿರೂಪ ಫಲಸಾಧಕ ವಾದ ಜ್ಞಾನಕಾಂಡೋ (ವೇದಾಂತ) ಕ್ತಗಳಾದ ಮಂತ್ರಭಾಗಗಳಿಗೂ ತತ್ಸಾಧಕ ಜ್ಞಾನಭಾಗಗಳಿಗೂ ಪ್ರಾಧಾನ್ಯವನ್ನೂ ಹೇಳಿದುದರಿಂದ ಕರ್ಮ ಕಾಂಡಾವಲಂಬಿಗಳಿಗೆ ವೈದಿಕತ್ವವು ಸಿದ್ಧವಾಗುವಂತೆ, ಜ್ಞಾನಕಾಂಡಾವ ಲಂಬಿಗಳಿಗೂ ವೈದಿಕತ್ವವು ಸಿದ್ಧವೇ ಆಗಿದೆ. ಆದುದರಿಂದ ಯಾವನಿಗೆ ಯಾವ ಫಲದಲ್ಲಿ ಅಪೇಕ್ಷೆಯಿರುವುದೋ ಆಯಾಯ ಕರ್ಮಗಳನ್ನು ಅವರು ಮಾಡಬೇಕಲ್ಲದೆ ವೇದದಲ್ಲಿ ಹೇಳಿದ ಕರ್ಮಗಳೆಲ್ಲವನ್ನು ಒಬ್ಬನು, ಒಂದು ಮತೀಯನು ಅನುಷ್ಠಿಸಲಳವಲ್ಲ. ಪ್ರಕೃತ ವೀರಶೈವ ಸಿದ್ಧಾಂತವು ಸ್ವರ್ಗ ಸ್ವಾರಾಜ್ಯಾದಿ ಫಲಗಳನ್ನು ತುಚ್ಛಫಲಗಳೆಂದು ನಿರಾಕರಿಸಿ, ಮೋಕ್ಷವೇ ಪರಮಪುರುಷಾರ್ಥವೆಂದು ಸಮ್ಮತಿಸಿರುವುದರಿಂದ ಜ್ಞಾನಕಾಂಡೋಕ್ತ

(ಉಪನಿಷತ್) ಗಳಾದ ಶ್ರೇಷ್ಠ ರತ್ನಗಳಂತಹ ಪತಿಕರ್ಮಗಳನ್ನು ಮಾತ್ರ ಅನುಷ್ಠಿಸುತ್ತ ತುಚ್ಛ ಫಲಪ್ರದವಾದ ಸ್ಥೂಲ ಕರ್ಮಗಳನ್ನು ನಿರಾಕರಿಸುತ್ತ ಬಂದಿರುವ ವೀರಶೈವರಿಗೆ ವೈದಿಕತ್ವವು ಸ್ವತಃ ಸಿದ್ಧವಾಗಿದೆ. ಇದರಿಂದ ವೀರ ಶೈವರಿಗೆ ವೇದಾಗಮೋಪನಿಷತ್ತುಗಳೇ ಸ್ವತಃ ಪ್ರಮಾಣವೆಂದೂ ಇತರ ಕನ್ನಡ ವಚನಸಾಹಿತ್ಯಾದಿಗಳೆಲ್ಲವೂ ಪರತಃ ಪ್ರಮಾಣವೆಂದೂ ಸ್ಪಷ್ಟ ವಾಗುತ್ತದೆ. ಈ ವಿಷಯದಲ್ಲಿ ವಚನಶಾಸ್ತ್ರ ಪಿತಾಮಹರೆಂದು ಪ್ರಶಸ್ತಿ ಪಡೆದ ರಾ|| ಸಾ|| **ಹಳಕಟ್ಟಿಯವರು** ವಚನಗಳು ವೇದೋಪನಿಷ ತ್ತುಗಳ ಸಾರವೆಂದು ತಮ್ಮ ಗ್ರಂಥದಲ್ಲಿ ಸಾರಿದ್ದಾರೆ. ಮತ್ತು ಡಾಕ್ಟರ್. ಎಸ್. ಸಿ. **ನಂದೀಮಠ** ಅವರು ವೀರಶೈವ ಮತವು ವೇದಾಗಮ ಸಮ್ಮತ ವಾದ ಹಿಂದು ಮತವೇ ಹೊರತು ಜೈನ ಬೌದ್ಧಾದಿ ಮತಗಳಂತೆ ಪ್ರತ್ಯೇಕ ಮತವಲ್ಲ. ಈ ಮತಕ್ಕೆ ರೇಣುಕಾದಿ ಪಂಚಾಚಾರ್ಯರು ಸ್ಥಾಪಕ ರಾಗಿದ್ದಾರೆ. **ಬಸವಣ್ಣನವರು** ಸುಧಾರಕರಾಗಿದ್ದಾರೆಂದು ತಮ್ಮ ಗ್ರಂಥ (Hand-book of Veerasaivism) ದಲ್ಲಿ ಸ್ಪಷ್ಟವಾಗಿ ಹೇಳಿರು ತ್ತಾರೆ.

ಇನ್ನು **ಸಾಖರೆಯವರು** ವೇದಗಳಿಗೆ ಅರ್ಥಮಾಡಲು ಹೊರಟಿರುವ ಲಿಂಗಧಾರಣ ಚಂದ್ರಿಕಾರರಂಥವರಿಂದಲೇ ಗೊಂದಲವಾಗಿದೆ ಎಂದು ಹೇಳಿದ್ದಾರೆ. ಇದನ್ನು ಸ್ವಲ್ಪ ಪರಿಶೀಲಿಸುವ. **ಶ್ರೀಪತಿಪಂಡಿತರು, ಸ್ವಪ್ರಭಾನಂದಶಿವಾಚಾರ್ಯರು, ಮೊಗ್ಗೆಮಾಯಿದೇವರು, ಮರಿ ತೋಂಟದಾರ್ಯರು, ನಿರ್ವಾಣಮಂತ್ರಿ** ಮುಂತಾದ ಅನೇಕ ಪಂಡಿ ತರು ವೀರಶೈವ ಸಿದ್ಧಾಂತಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿರುತ್ತಾರೆ. **ನಿಜಗುಣ ಶಿವಯೋಗಿಗಳು, ವಿರೂಪಾಕ್ಷ ಪಂಡಿತಾರಾಧ್ಯರು, ಗುಬ್ಬಿ ಮಲ್ಲಣಾರ್ಯರು, ಹರಿಹರ, ರಾಘವಾಂಕ, ಷಡಕ್ಷರಿ** ಮುಂತಾದ ಪಂಡಿತರು ಕನ್ನಡ ಗ್ರಂಥಗಳನ್ನು ಬರೆದಿರುತ್ತಾರೆ. ಇದಲ್ಲದೆ ಅನೇಕ ಮಹಾನುಭಾವರು ಕನ್ನಡ ವಾಙ್ಮಯದಲ್ಲಿ ಸಹಸ್ರಾರು ವಚನಗಳನ್ನು ಬರೆದಿರುತ್ತಾರೆ. ಹೀಗೆ ಅನೇಕ ಶತಮಾನಗಳಿಂದ ಇಲ್ಲಿಯವರೆಗೆ ಉಪಲಬ್ಧಿಯಲ್ಲಿರುವ ವೀರಶೈವ ಮತಗ್ರಂಥಗಳೆಲ್ಲವೂ **ಲಿಂಗಧಾರಣ ಚಂದ್ರಿಕೆಯಂತೆ** ವೇದಾಗಾಮಗಳ ಆಧಾರದಿಂದಲೇ ಜನ್ಮತಾಳಿವೆ. ಈ

ಗ್ರಂಥಕಾರರೆಲ್ಲರೂ ಗೊಂದಲಕ್ಕೆ ಕಾರಣಭೂತರಾದರೆ ಇನ್ನು ಗೊಂದಲ (ವೇದಗಳ ಸಂಬಂಧ) ವಿಲ್ಲದ ಗ್ರಂಥಗಳನ್ನು ಸಾಖರೆಯವರು ಎಲ್ಲಿಂದ ತರುವರೋ! ಈಶ್ವರನಿಗೇ ಗೊತ್ತು. ಒಂದು ಪಕ್ಷ ಸಾಖರೆಯವರು ಚಾರ್ವಾಕ, ಯೋಗಾಚಾರ, ಸೌತ್ರಾಂತಿಕ, ವೈಭಾಷಿಕ, ಮಾಧ್ಯಮಿಕ, ಆರ್ಹತ ಮುಂತಾದ ಮತಗಳಿಗಿರುವಂತೆ ವೀರಶೈವ ಮತಕ್ಕೂ ವೇದಾಗಮಗಳ ಹಂಗಿಲ್ಲದ ಗ್ರಂಥಗಳನ್ನು ತೋರಿಸಿದ್ದರೆ ವೀರಶೈವ ಮತವು ವೇದೋಕ್ತ ಮತವಲ್ಲವೆಂದು ಹೇಳಬಹುದಾಗಿತ್ತು. ಮತ್ತು "ಶ್ರೌತಾನಾಂ ವೀರಶೈವಾನಾಂ ವೇದಮಾರ್ಗೈಕವರ್ತಿನಾಂ" ಎಂದು ಸಿದ್ಧಾಂತಾಗಮವು ಸ್ಪಷ್ಟವಾಗಿ ಹೇಳುತ್ತಿರುವಲ್ಲಿ ಲಿಂಗಧಾರಣವು (ವೀರಶೈವ) ಅಶ್ರೌತವೆಂದು ವೇದಾಗಮಗಳಿಗೆ ವಿರುದ್ಧವಾಗಿ ವಾದಿಸುತ್ತಿರುವ ಸಾಖರೆಯವರಿಂದಲೇ ಗೊಂದಲವಾಗಿದೆಯೋ, ಅಥವಾ ಪರಮವೈದಿಕರೆನಿಸಿದ ಪ್ರಾಚೀನ ಗ್ರಂಥಕಾರರಿಂದ ಗೊಂದಲವಾಗಿದೆಯೋ ಎಂಬುದನ್ನು ವಾಚಕರೇ ಊಹಿಸಬೇಕಾಗಿದೆ.

ಇನ್ನು ಸಾಖರೆಯವರು ವ್ಯಾಖ್ಯಾನಕಾರರಾದ ಶಿವಕುಮಾರ ಪಂಡಿತರಮೇಲೆ ಮಾಡಿರುವ ಆಪಾದನೆಗಳನ್ನು ಪರಿಶೀಲಿಸುವ.

ಕಾಶೀ ಪೀಠಾಧಿಪತಿಗಳು ಹೇರಳವಾಗಿ ದ್ರವ್ಯಸುರಿದು ವ್ಯಾಖ್ಯಾನ ಬರೆಸಿದರೆಂದೂ ಪಂಡಿತರು ದ್ರವ್ಯದಾಶೆಯಿಂದಲೇ ಗ್ರಂಥವನ್ನು ಬರೆದಿರುವರೆಂದೂ, ಇದನ್ನು ತಾವೇ

ಲೋಕೈಷಣಾ ಭವತ್ಯೇವ ಯದ್ಯಪ್ಯತ್ರಪ್ರವರ್ತಿಕಾ।
ತಥಾಪಿ ಕಿಂಚಿದ್ಗೌರೀಶಸ್ತುಷ್ಯೇದಿತಿ ಮನೋಗತಮ್॥

ಎಂಬ ಶ್ಲೋಕದಲ್ಲಿ ಸ್ಪಷ್ಟಪಡಿಸಿದ್ದಾರೆಂದೂ, ಮತ್ತು ಮೂಲಕಾರನಲ್ಲಿ ಸ್ವಲ್ಪವೂ ಗೌರವ ತೋರಿಸಿಲ್ಲವೆಂದೂ ಉಲ್ಲೇಖಿಸಿರುತ್ತಾರೆ.

ಸಾಖರೆಯವರು ತೋರಿಸಿರುವ ಈ ಪದ್ಯದ ಹಿಂದು ಮುಂದಣ ಶ್ಲೋಕಗಳನ್ನು ಸ್ವಲ್ಪ ಪರಿಶೀಲಿಸೋಣ. ಚತುಃಶಾಸ್ತ್ರಪಾರಂಗತರಾದ ಶಿವಕುಮಾರ ಪಂಡಿತರು ಗ್ರಂಥಾರಂಭದಲ್ಲಿ ಮೂಲಕಾರನಾದ ನಂದಿಕೇಶ್ವರ ಶಿವಾಚಾರ್ಯನಿಗೂ ಈತನ ಗ್ರಂಥಕ್ಕೂ ಬಹಳ ಗೌರವವನ್ನು ಕೊಟ್ಟಿರುತ್ತಾರೆಂಬುದು ಈ ಶ್ಲೋಕಗಳಿಂದಲೇ ಸ್ಪಷ್ಟವಾಗುತ್ತದೆ.

ಶಂಭೋಶ್ಶಿರಸಿ ವಿಭ್ರಾಜಜ್ಚಂದ್ರಮಶ್ಚಂದ್ರಿಕೇವ ಸಾ !
ಇಮಾಂ ಶರದಮಾಸಾದ್ಯ ಪ್ರಕಾಶಂ ಪರಮೇಷ್ಯತಿ ॥
ಸಾಂಬ ಶಂಭೋಃ ಪರಂ ತೋಷಂ ವಿದಧಾತುಂ ಶಂಭುಪಾದಯೋಃ ।
ವ್ಯಾಖ್ಯಾ ತಸ್ಯಾಶ್ಶರನ್ನಾಮ್ನೀ ವಿಧಾಯ್ಯೈಷಾ ಸಮರ್ಪ್ಯತೇ ॥

ತಾತ್ಪರ್ಯ :—ಪರಮೇಶ್ವರನ ಜಟಾಜೂಟದಲ್ಲಿ ಪ್ರಕಾಶಿಸುತ್ತಿರುವ ಚಂದ್ರನ ಚಂದ್ರಿಕೆ (ಬೆಳದಿಂಗಳು)ಯು ಷಡೃತುಗಳಲ್ಲಿ ಒಂದಾದ ಮೇಘಾವರಣವಿಲ್ಲದ ಶರತ್ಕಾಲವನ್ನಾಶ್ರಯಿಸಿ ಹೇಗೆ ಅತ್ಯಂತ ಪ್ರಕಾಶವನ್ನು ಹೊಂದುವುದೋ, ಅದರಂತೆ ನನ್ನಿಂದ ರಚಿಸಲ್ಪಡುವ ಶರನ್ನಾಮಕವಾದ ಈ ವ್ಯಾಖ್ಯಾನದಿಂದ ನಂದಿಕೇಶ್ವರನ ಲಿಂಗಧಾರಣಚಂದ್ರಿಕೆಯು ಲೋಕದಲ್ಲಿ ದೇದೀಪ್ಯಮಾನವಾಗಿ ಬೆಳಗಲಿ ಎಂದು ಗ್ರಂಥಕ್ಕೆ ಶುಭವನ್ನು ಕೋರಿ–ಮುಂದಿನ ಶ್ಲೋಕದಲ್ಲಿ ನಾನು ಬರೆಯಲು ಉಜ್ಜುಗಿಸುವ ಈ ಶರನ್ನಾಮಕ ವ್ಯಾಖ್ಯಾನವು ಉಮಾಖ್ಯಳಾದ ಪರಮಶಕ್ತಿಯಿಂದೊಡಗೂಡಿಡುವ ಆ ಪರಮೇಶ್ವರನನ್ನು ಸಂತೋಷಪಡಿಸಲಿ. ಈ ವ್ಯಾಖ್ಯಾನವನ್ನು ಆ ಪರಶಿವನ ಪಾದಾರವಿಂದಗಳಿಗೆ ಸಮರ್ಪಿಸಿದ್ದೇನೆ ಎಂದು ಹೇಳಿರುವುದರಿಂದ ಪಂಡಿತರು ಪರಮ ಭಕ್ತಿಯೊಡನೆ ಕೇವಲ ಈಶ್ವರಾರ್ಪಣಬುದ್ಧಿಯಿಂದಲೇ ಈ ಕೃತಿ ರಚನೆಗೆ ತೊಡಗಿದ್ದರೇ ಹೊರತು ದ್ರವ್ಯದಾಶೆಯಿಂದ ತೊಡಗಿಲ್ಲವೆಂದು ವ್ಯಕ್ತವಾಗುತ್ತದೆ.

ಇನ್ನು ಸಾಖರೆಯವರು ತೋರಿಸಿರುವ "ಲೋಕೈಷಣಾ........" ಎಂಬ ಶ್ಲೋಕಾರ್ಥವನ್ನಾದರೂ ಪರೀಶಿಲಿಸುವ :—ಸಾಮಾನ್ಯವಾಗಿ ಯಾವ ಮನುಷ್ಯನಿಗಾದರೂ ಒಂದು ಕಾರ್ಯದಲ್ಲಿ ಪ್ರವೃತ್ತಿಯು ಹುಟ್ಟಬೇಕಾದರೆ ಒಂದೊಂದು ಅಭಿಲಾಷೆಯು ಇದ್ದೇ ಇರಬೇಕು. ಇದೇ ಜನಗಳ ಇಚ್ಛೆ. ಆದರೂ ಗೌರೀ ವಲ್ಲಭನಾದ ಪರಶಿವನು ಈ ವ್ಯಾಖ್ಯಾನದಿಂದ ಸಂತುಷ್ಟಿಗೊಳ್ಳಲೆಂಬುದೇ ನನ್ನ ನಿಜವಾದ ಮನೋಗತವೆಂದು ಸ್ಪಷ್ಟವಾಗಿ ನುಡಿದಿರುತ್ತಾರೆ. ಆದರೆ ಇಲ್ಲಿ ಸಾಖರೆಯವರು ಹೇಳುವಂತೆ ದುಡ್ಡಿಗಾಗಿ ಬರೆದೆನೆಂಬ ಅರ್ಥವು ಎಷ್ಟುಮಾತ್ರವೂ ಸ್ಫುರಿಸುವುದಿಲ್ಲ. ದುಡ್ಡಿಗಾಗಿ ಬರೆದೆನೆಂದೇ ಪಂಡಿತರು ಸ್ಪಷ್ಟವಾಗಿ ಹೇಳಬೇಕೆಂದಿದ್ದರೆ "ಲೋಕೈಷಣಾ" ಎಂಬ ಪದಕ್ಕೆ ಬದಲಾಗಿ "ವಿತ್ತೈಷಣಾ" ಅಥವಾ "ಅರ್ಥೈಷಣಾ" ಎಂಬ

ಪದವನ್ನು ಹಾಕಬಹುದಾಗಿತ್ತು. ಲೋಕೈಷಣಾ (ಜನಗಳ ಇಚ್ಛೆ) ಎಂಬ ಲೋಕಾಭಿರಾಮವಾದ ಶಬ್ದವನ್ನೇ ಏಕೆ ಹಾಕಬೇಕಾಗಿತ್ತು? ಸಾಖರೆಯವರು ಸರಳವಾದ ಅರ್ಥವನ್ನು ಬಿಟ್ಟು ಕೌಟಿಲ್ಯಾರ್ಥವನ್ನು ಮಾಡಿರುವುದಕ್ಕೆ ಶ್ರುತಿದೇವಿಯ ಮೇಲೂ ಆ ಶ್ರುತ್ಯವಲಂಬಿಗಳ ಮೇಲೂ ಇಟ್ಟಿರುವ ಸಹಜದ್ವೇಷವೇ ಕಾರಣವಾಗಿರಬಹುದು. ಅಲ್ಲದೆ ಶ್ರೀ ಶಿವಕುಮಾರ ಪಂಡಿತರಿಗೆ ಅಪರಿಹಾರ್ಯವಾದ ವ್ಯಾಧಿ ಇದ್ದಿತೆಂದೂ, ಅದು ತಪಸ್ವಿಗಳಾದ ಶ್ರೀ ಕಾಶೀ ಪೀಠಾಧ್ಯಕ್ಷರ (ರಾಜೇಶ್ವರ ಮಹಾಸ್ವಾಮಿಗಳ) ಕಾರುಣ್ಯಾಮೃತದಿಂದ ನಿವೃತ್ತಿಯಾದುದರ ಫಲವಾಗಿ ಸಂತೋಷದಿಂದ ಈ ವ್ಯಾಖ್ಯಾನವನ್ನು ಬರೆದರೆಂದೂ ಮೇಲೆ ಕಂಡ ಪಂಡಿತರ ಚಿತ್ರಪಟವು ಈಗಲೂ ಶ್ರೀ ಮಠದಲ್ಲಿ ರಾರಾಜಿಸುವುದೆಂದೂ ತಿಳಿದುಬಂದಿದೆ.* ಆದುದರಿಂದ ಪಂಡಿತರು ತಮ್ಮ ಕೃತಜ್ಞತೆಯನ್ನು ತೋರಿಸುವುದಕ್ಕಾಗಿ ಶ್ರೀ ಶ್ರೀಗಳವರ ಅನುಜ್ಞೆಯಂತೆ ಈ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದು ತಮ್ಮ ಕೃತಜ್ಞತೆಯನ್ನು ತೋರಿಸಿರಬಹುದೆಂದು ಹೇಳಬಹುದು. ಭರತಖಂಡದ ಪಂಡಿತಶ್ರೇಣಿಯಲ್ಲಿ ಅಗ್ರಸ್ಥಾನವನ್ನು ಪಡೆದಿರುವ ಈ ಮಹಾಮಹೋಪಾಧ್ಯಾಯರು ತಾವು ಅನ್ಯಮತೀಯರಾಗಿದ್ದರೂ ವೀರಶೈವ ಸಿದ್ಧಾಂತಕ್ಕೆ ವ್ಯಾಖ್ಯಾನವನ್ನು ಬರೆದು ತಮ್ಮ ಉದಾರ ಹೃದಯವನ್ನು ಪ್ರಕಾಶಗೊಳಿಸಿದರೆಂದು ಸ್ಮರಿಸುವುದಕ್ಕೆ ಬದಲಾಗಿ ಸಾಖರೆಯವರು ಮಾಡಿರುವ ಈ ಆರೋಪವು ಭೂಷಣಾಸ್ಪದವಲ್ಲವೆಂಬುದನ್ನು ನಾವು ಬೇರೆ ಹೇಳಬೇಕಾಗಿಲ್ಲ.

ಇನ್ನು ಸಾಖರೆಯವರು ಪಂಡಿತರ ವ್ಯಾಖ್ಯಾನದ ಮೇಲೆ ಮಾಡಿರುವ ಆಕ್ಷೇಪಗಳ ಅಂತರ್ಯವನ್ನು ಸ್ವಲ್ಪ ವಿಚಾರಿಸುವ :—

"ದಹರೋಪಾಸನಾ (ಹೃತ್ಕಮಲದಲ್ಲಿ ಪರಮಾತ್ಮನ ಧ್ಯಾನ) ಎಂಬ ಪದಕ್ಕೆ ಶಿವಕುಮಾರ ಪಂಡಿತರು "ಪ್ರತೀಕೋಪಾಸನಾ" (ವಿಗ್ರಹಾರಾಧನೆ) ಎಂದು ಅರ್ಥಮಾಡಿರುವರೆಂದು ಹೇಳಿದ್ದಾರೆ. (ಲಿಂ. ಪೀಠಿಕೆ ಪು. ೬೪) ಇದು ಅವಿಚಾರ ರಮಣೀಯವಾಗಿದೆ. ಏಕೆಂದರೆ ಶ್ರೀ ಶಿವಕುಮಾರ ಪಂಡಿತರು ಗ್ರಂಥಾರಂಭದಲ್ಲಿ

---

* ಶರಣ ಸಾಹಿತ್ಯ, ಸಂ. ೧೨, ಸಂ. ೬ (ಪುಟ ೨೪೦)

" ತತ್ರಾದೌ ಲಿಂಗಧಾರಣಸ್ಯ ಆಭ್ಯಂತರ ಬಾಹ್ಯಲಿಂಗಧಾರಣಾತ್ಮಕ-ತಯಾ ದ್ವೈವಿಧ್ಯೇನ ಉಭಯವಿಧಸ್ಯಾಪಿ ತಸ್ಯ ಶುತಿಸ್ಮೃತಿಸಿದ್ಧತ್ವೇ ಸಾಂಪ್ರತಂ ನಿರೂಪಣೀಯೇ ಪ್ರಥಮಮಾಭ್ಯಂತರ ಲಿಂಗಧಾರಣಸ್ಯ ಶ್ರುತಿಸಿದ್ಧತ್ವಂ ಬೋಧಯಿತುಂ ದಹರವಿದ್ಯಾಯಾಃ ಹೃತ್ಪುಂಡರೀಕಾಂತರಾಳವರ್ತಿ ಜ್ಯೋತಿರ್ಲಿಂಗವಿಷಯಕತ್ವಂ ಪ್ರಸಾದಯತಿ "

ಅರ್ಥ :—" ಲಿಂಗಧಾರಣವು ಜ್ಯೋತಿರ್ಲಿಂಗಧಾರಣವೆಂದೂ, ಇಷ್ಟ ಲಿಂಗಧಾರಣವೆಂದೂ ಎರಡು ವಿಧ. ಇವೆರಡು ಲಿಂಗಧಾರಣಗಳೂ ಶ್ರುತಿಗಳಲ್ಲಿಯೂ, ಸ್ಮೃತಿಗಳಲ್ಲಿಯೂ ಹೇಳಲ್ಪಟ್ಟಿರುತ್ತವೆ. ಇವುಗಳಲ್ಲಿ ಮೊದಲು ಜ್ಯೋತಿರ್ಲಿಂಗಧಾರಣೆಯು ಶ್ರುತಿ ಪ್ರತಿಪಾದ್ಯವೆಂಬುದನ್ನು ಸಮರ್ಥಿಸುವುದಕ್ಕಾಗಿ ಹೃದಯಪುಂಡರೀಕಮಧ್ಯದಲ್ಲಿ ಬೆಳಗುತ್ತಿರುವ ಜ್ಯೋತಿರ್ಲಿಂಗವೇ ದಹರವಿದ್ಯೋಪಾಸನೆಗೆ ವಿಷಯವಾಗಿದೆ" ಎಂಬುದನ್ನು ತೋರಿಸುತ್ತೇವೆ. ಎಂದು ವ್ಯಾಖ್ಯಾನಕಾರರು ಪ್ರತಿಜ್ಞೆಮಾಡಿ ಅದೇ ದಹರೋಪಾಸನಾಪ್ರಕರಣದಲ್ಲಿ ಸ್ವಲ್ಪ ಮುಂದೆ ತಮ್ಮ ಪ್ರತಿಜ್ಞೆಗೆ ವಿರೋಧವಾಗಿ ದಹರೋಪಾಸನೆ ಎಂಬ ಶಬ್ದಕ್ಕೆ ಪ್ರತೀಕೋಪಾಸನೆ ಎಂದು ಯಾವಾಗಲೂ ಅರ್ಥಮಾಡಲಾರರು.

ಮೂಲಕಾರನು "ಹೃತ್ಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವಾದರೋ ಶಿವರೂಪವಸ್ತುವೇ ಹೊರತು ಬೇರೆ ಇನ್ನಾವ ದೇವತೆಯೂ ಅಲ್ಲ" ಎಂದು ತೈತ್ತಿರೀಯ ಶ್ರುತಿಯನ್ನು ಉದಾಹರಿಸುವಾಗ ಅದೇ ಶ್ರುತಿಯ ಮಧ್ಯದಲ್ಲಿ "ನಾರಾಯಣಪರೋ ಧ್ಯಾತಾ" ಇತ್ಯಾದಿ ವಾಕ್ಯಗಳು ಬಂದಿರುವುದರಿಂದ " ಹೃತ್ಪುಂಡರೀಕ " (ದಹರಾಕಾಶ)ದಲ್ಲಿ ನಾರಾಯಣನನ್ನು ಉಪಾಸ್ಯವಸ್ತುವನ್ನಾಗಿ ಹೇಳಬಹುದಲ್ಲವೆ? ಎಂಬ ಆಕ್ಷೇಪವನ್ನು ಪರಿಹರಿಸಿ ಶಿವನೇ ಉಪಾಸ್ಯವಸ್ತುವೆಂದು ಸಮರ್ಥಿಸುವುದಕ್ಕೆ ಹೊರಟು

" ಶಿವಸ್ಯ ದಹರೋಪಾಸ್ಯತ್ವ ವಿಧಾನೇನ ಅತ್ರ ದೇವತಾಂತರ ವಿಧಾನೇ ಅನಿಯತ ವಿಷಯಕತ್ವಾಪತ್ತೇಃ "

ತಾತ್ಪರ್ಯ :—ನಾವು ಈಗ ಹೃತ್ಪುಂಡರೀಕದಲ್ಲಿ ಶಿವನೇ ಉಪಾಸ್ಯ ವಸ್ತುವಾಗಿದ್ದಾನೆಂದು ವಿಧಾನ (ಚೋದನ) ಮಾಡುತ್ತ ಬಂದಿರುವುದರಿಂದ ಆ ಶ್ರುತಿಯ ಉಪಕ್ರಮ-ಉಪಸಂಹಾರಕ್ಕೆ ವಿರುದ್ಧವಾಗಿ ಮಧ್ಯದಲ್ಲಿ

ಬಂದಿರುವ "ನಾರಾಯಣ" ಪದಕ್ಕೆ ನಾರಾಯಣನು ದಹರಾಕಾಶದಲ್ಲಿ ಉಪಾಸ್ಯವಸ್ತುವೆಂದು ಹೇಳುವುದಾದರೆ ಒಂದು ಸ್ಥಳದಲ್ಲಿ ಅನೇಕ ದೇವತೆಗಳನ್ನು ಉಪಾಸ್ಯವಸ್ತುಗಳನ್ನಾಗಿ ಸ್ವೀಕರಿಸುವ 'ಅನಿಯತವಿಷಯಕತ್ವ' ದೋಷಕ್ಕೆ ಈಡಾಗಬೇಕಾಗುವುದು" ಎಂಬುದಾಗಿ ಹೇಳಿರುವ ವಾಕ್ಯವು ಅಸ್ಪಷ್ಟವಾಗಿರುವುದರಿಂದ ವ್ಯಾಖ್ಯಾನಕಾರರು :—

"ನಿಯತವಿಷಯಕತ್ವ ಅನಿಯತವಿಷಯಕತ್ವ"ಗಳನ್ನು ವಿವರಿಸುವಾಗ ಅನಿಯತವಿಷಯಕತ್ವವು ದೋಷವಲ್ಲವೆಂದು ಪೂರ್ವಪಕ್ಷವನ್ನು ಮಾಡಿರುತ್ತಾರೆ. ಹೇಗೆಂದರೆ—"ಅಹೋ! ಏನು, ಅನಿಯತವಿಷಯಕತ್ವ (ಒಂದೇ ಸ್ಥಾನದಲ್ಲಿ ಅನೇಕ ದೇವತೆಗಳನ್ನು ಪೂಜಿಸುವುದು) ವೆಂಬುವುದು ದೋಷವೆಂದು ಹೇಳುತ್ತೀರಲ್ಲವೆ? ಹಾಗಾದರೆ ಸಾಲಿಗ್ರಾಮ, ಜಲ, ಮುಂತಾದ ಒಂದೊಂದೇ ಸ್ಥಲ (ವಿಗ್ರಹ) ದಲ್ಲಿ ಅನೇಕ ದೇವರನ್ನು ಉಪಾಸಿಸುತ್ತಿರುವುದನ್ನು ನಾವು ನೋಡಿದ್ದೇವೆ. ಪ್ರತೀಕವು ಒಂದೇ ಆದರೂ ಉಪಾಸನೆಗಳು ಅನಂತವಾಗಿರುವುದರಿಂದ ಅನಿಯತವಿಷಯಕತ್ವವೆಂಬುದನ್ನು ದೋಷವೆಂದು ಅಂಗೀಕರಿಸಲಾಗದು" ಎಂದು ಪೂರ್ವಪಕ್ಷ ಮಾಡಿದ್ದಾರೆ. ಇಲ್ಲಿ ಶ್ರೀ ಸಾಖರೆಯವರು ಈ ಪೂರ್ವಪಕ್ಷ ವಾಕ್ಯವನ್ನು ಮಾತ್ರ ತಮ್ಮ ವಾದಕ್ಕೆ ಆಧಾರಮಾಡಿಕೊಂಡು ಸಿದ್ಧಾಂತಪಕ್ಷವನ್ನು ಕೈಬಿಟ್ಟಿದ್ದಾರೆ.

**ವ್ಯಾಖ್ಯಾನಕಾರರ ಸಿದ್ಧಾಂತ :—** ಜಲ, ಸಾಲಿಗ್ರಾಮ ಮುಂತಾದ ಸ್ಥಳಗಳಲ್ಲಿ ನಿಯಮದಿಂದ ಆಯಾಯ ದೇವತೆಗಳನ್ನು ಬೋಧಿಸುವ ಭಿನ್ನಭಿನ್ನ ಪದಗಳಿರುವುದರಿಂದ ಉಪಾಸನಾಭೇದವು ನಿರ್ಣಯವಾಗಿರುವುದರಿಂದ ಅಂತಹ ಸ್ಥಲದಲ್ಲಿ ಅನಿಯತವಿಷಯಕತ್ವವು ದೋಷವಲ್ಲದಿದ್ದರೂ ಒಂದು ಸ್ಥಲದಲ್ಲಿ ಒಂದೇ ವಸ್ತುವನ್ನು ನಿಯಮದಿಂದ (ನಿಯತವಿಷಯಕತ್ವ) ಉಪಾಸನೆಮಾಡಬೇಕೆಂದು ಸಿದ್ಧವಾಗುತ್ತಿರುವಾಗ ಒಂದೇ ಸ್ಥಾನದಲ್ಲಿ ಹಲವು ದೇವರುಗಳನ್ನು ಉಪಾಸಿಸಬೇಕೆಂಬುದು (ಅನಿಯತವಿಷಯಕತ್ವ) ಅತ್ಯಂತ ತುಚ್ಛವಾದುದೆಂದು ಖಂಡಿತವಾಗಿ ಒಪ್ಪಲೇಬೇಕು. ಆದುದರಿಂದ ತೈತ್ತಿರೀಯದಲ್ಲಿ ಹೇಳಿದ 'ಶಿವ' ಮತ್ತು 'ನಾರಾಯಣ' ಎಂದು ಎರಡು ಉಪಾಸ್ಯವಸ್ತುಗಳನ್ನಿಟ್ಟುಕೊಂಡರೆ ಉಪಾಸಕನಿಗೆ ಅದೋ, ಇದೋ ಎಂಬ ಅನೇಕ

ಸಂದೇಹಗಳುದಿಸಿ ಒಂದರಲ್ಲಿಯೂ ಪ್ರವೃತ್ತಿಯೇ ಹುಟ್ಟದಂತಾಗುತ್ತದೆ. ಆದುದರಿಂದ ಉಪಕ್ರಮೋಪಸಂಹಾರವೆಂಬ ಷಡ್ಲಿಂಗತಾತ್ಪರ್ಯಕ್ಕನು ಸಾರವಾಗಿ ಶಿವನೋರ್ವನೇ ದಹರೋಪಾಸನೆಗೆ ವಿಷಯನಾಗುವನೇ ಹೊರತು ನಾರಾಯಣನಾಗುವುದಿಲ್ಲ. ಮಧ್ಯದಲ್ಲಿ ಬರುವ ಆ ನಾರಾಯಣ ಪದವನ್ನು ವಿಶೇಷಣವನ್ನಾಗಿ ಮಾಡಿ ಅಖಂಡವಾದ ಏಕಾರ್ಥವನ್ನು ಅಂಗೀಕರಿಸುವುದು ಉತ್ತಮವೆಂದು ಸಿದ್ಧಾಂತಮಾಡಿದ್ದಾರೆ. ಹೀಗೆ ಶಿವ ಕುಮಾರ ಪಂಡಿತರು ಮೂಲಕಾರರಾದ ನಂದಿಕೇಶ್ವರ ಶಿವಾಚಾರ್ಯರ ಆಶಯವನ್ನೇ ದೃಢಪಡಿಸಿರುತ್ತಾರಲ್ಲದೆ ವಿರುದ್ಧಾರ್ಥವನ್ನು ಮಾಡಿಲ್ಲ. ದೃಷ್ಟಾಂತವನ್ನು ಕೊಡುವ ಸಂದರ್ಭದಲ್ಲಿ ಪ್ರತೀಕೋಪಾಸನೆಯ ಪ್ರಸ್ತಾಪ ಬಂದಿರುವುದಲ್ಲದೆ "ದಹರೋಪಾಸನೆಗೆ ಪ್ರತೀಕೋಪಾಸನೆ" ಎಂದು ಅರ್ಥ ಮಾಡಿಲ್ಲ.

ಇನ್ನು ಶ್ರೀ ಸಾಖರೆಯವರು ಪಂಡಿತರು ಅಪಾರ್ಥವನ್ನು ಮಾಡಿರುವ ರೆಂಬುದನ್ನು ತೋರಿಸುವುದಕ್ಕಾಗಿ (ಲಿಂ. ಪು. ೬೪) ಮತ್ತೊಂದು ಸ್ಥಾನ ವನ್ನು ಉಲ್ಲೇಖಿಸಿರುತ್ತಾರೆ.

"ಈಶ್ವರಂ ತಮಹಂ ವಂದೇ ಯಸ್ಯ ಲಿಂಗಮಹರ್ನಿಶಮ್ ।
ಯಜಂತೇ ಸಹಭಾರ್ಯಾಭಿಃ ಇಂದ್ರಜ್ಯೇಷ್ಠಾ ಮರುದ್ಗಣಾಃ ॥

(ಚಿದಂಬರಸಂಹಿತೆ)

ಅರ್ಥ :—ಯಾವ ಪರಶಿವನಿಗೆ ಶರೀರಭೂತವಾದ ಶಿವಲಿಂಗವನ್ನು ಇಂದ್ರನೇ ಮೊದಲಾದ ದೇವತೆಗಳು ತಮ್ಮ ತಮ್ಮ ಪತ್ನಿಯರೊಂದಿಗೆ ರಾತ್ರಿ ಹಗಲೂ (ಅಹರ್ನಿಶಂ) ಎಡೆಬಿಡದೆ ಧರಿಸುತ್ತಾರೆಯೋ ಅಂತಹ ಲಿಂಗ ಮೂರ್ತಿಯಾದ ಈಶ್ವರನನ್ನು ನಮಸ್ಕರಿಸುತ್ತೇನೆ.

ಈ ಶ್ಲೋಕದಲ್ಲಿ "ಯಜಂತೇ" ಎಂಬ ಕ್ರಿಯಾಪದಕ್ಕೆ "ಯಜದೇವ ಪೂಜಾಸಂಗತಿಕರಣದಾನೇಷು" ಎಂಬ ಪಾಣಿನೀಯ ಸೂತ್ರಾನುಸಾರವಾಗಿ ದೇವಪೂಜಾ, ಸಂಗತಿಕರಣ ಮತ್ತು ದಾನ ಎಂಬ ಮೂರು ಅರ್ಥಗಳಿರು ವುದರಿಂದ ಅವುಗಳಲ್ಲಿ ಸಂಗತಿಕರಣ (ಸತತಸಂಬಂಧ) ಎಂಬ ಅರ್ಥವನ್ನು ಮೂಲಕಾರರು ಸ್ವೀಕರಿಸಿರುತ್ತಾರೆ. ಇಲ್ಲಿ—

ಶಂಕೆ :—ಇಂದ್ರಾದಿಗಳು ಸುವರ್ಣಾದಿಪೀಠಗಳಲ್ಲಿ ಶಿವಲಿಂಗಗಳ

ನ್ನಿರಿಸಿ ಗಂಧ ಮೊದಲಾದ ಸುಗಂಧದ್ರವ್ಯಗಳನ್ನು ಹಸ್ತದಿಂದ ಲೇಪಿಸುವಾಗ ಯಾವುದಾದರೊಂದು ಸಮಯದಲ್ಲಿ "ಯಜ" ಧಾತುವಿನ ಅರ್ಥವಾದ ಸಂಗತಿಕರಣ (ಲಿಂಗಸಂಬಂಧ) ವು ಸಿದ್ಧಿಸುವಲ್ಲಿ ಎಡೆಬಿಡದೆ (ಅವಿಭಾಜ್ಯ ಸಂಬಂಧ) ಯಾವಾಗಲೂ ತಮ್ಮ ದೇಹದಲ್ಲಿ ಲಿಂಗವನ್ನು ಧರಿಸಿದ್ದರೆಂಬ ಅರ್ಥವನ್ನು ಏಕೆ ಮಾಡಬೇಕು ?

**ಸಮಾಧಾನ**—ಹಾಗಲ್ಲ, ಈ ಶ್ಲೋಕದಲ್ಲಿ "ಅಹರ್ನಿಶಂ" ಎಂಬ ವಿಶೇಷ ಪದವಿದೆ. ಇದಕ್ಕೆ ಸಂಪೂರ್ಣ ಹಗಲು ರಾತ್ರಿಗಳೆಂದು ಅರ್ಥ ವಾಗುವುದರಿಂದ ಇಂತಹ "ಅಹರ್ನಿಶ" ಪದವನ್ನು "ಯಜಂತೇ" ಎಂಬ ಕ್ರಿಯಾಪದದಲ್ಲಿ ಅನ್ವಯಿಸಬೇಕಾಗಿರುವುದರಿಂದ ಸಾರ್ವಕಾಲಿಕ (ಇಡೀ ರಾತ್ರಿ, ಇಡೀ ಹಗಲು ಎಡೆಬಿಡದೆ)ವಾದ ಲಿಂಗಧಾರಣವು ಸಿದ್ಧಿಸುವುದರಿಂದ ದೇಹದಲ್ಲಿ ಲಿಂಗಧಾರಣ ಪರವಾಗಿ ಅರ್ಥಮಾಡುವುದು ಸಮೀಚೀನವೇ ಹೊರತು ಗಂಧಾದಿಲೇಪನಕಾಲದಲ್ಲಿ ಮಾತ್ರ "ಲಿಂಗಸಂಬಂಧ" ವೆಂಬ ಅರ್ಥವು ಸಾಧುವಲ್ಲ.

ಹೀಗೆ ಮೂಲಕಾರರ ಪೂರ್ವಪಕ್ಷ ಸಿದ್ಧಾಂತಗಳ ಮೇಲೆ ಶಿವಕುಮಾರ ಪಂಡಿತರು ವ್ಯಾಖ್ಯಾನವನ್ನು ಬರೆಯುವಾಗ— "ಪೀಠಾದೇವೇತಿ" ಎಂದು ಪ್ರಾರಂಭಿಸಿ

**ಶಂಕೆ :**—ಅನಂತವಾಕ್ಯಗಳು ಸೋಮನಾಥ, ಮಲ್ಲಿಕಾರ್ಜುನ, ಕೇದಾರೇಶ್ವರ ಮುಂತಾದ ಜ್ಯೋತಿರ್ಲಿಂಗಗಳ ಮಹಿಮೆಯನ್ನು ಪ್ರತಿ ಪಾದಿಸುತ್ತವೆ. ಇದಲ್ಲದೆ ಅನಂತವಾಕ್ಯಗಳು ಶಿವಲಿಂಗವನ್ನು ಪೀಠದ ಮೇಲಿಟ್ಟು ಪೂಜಿಸಬೇಕೆಂದು ಹೇಳುತ್ತವೆ. ಹೀಗೆ ಶಿವಲಿಂಗಪೂಜಾ ವಿಧಾಯಕವಾದ ಅನಂತವಾಕ್ಯಗಳಿದ್ದರೂ "**ಈಶ್ವರಂ ತಮಹಂ.... ಮರುದ್ಗಣಾಃ**" ಎಂಬ ಚಿದಂಬರ ಸಂಹಿತಾವಾಕ್ಯದಲ್ಲಿರುವ "ಯಜಂತೇ" ಎಂಬ ಕ್ರಿಯಾಪದಕ್ಕೆ ಪಾಣಿನಿ ಮಹರ್ಷಿಯ ಧಾತುಪಾಠವನ್ನನುಸರಿಸಿ ಸಂಗತಿಕರಣ (ಅವಿಭಾಜ್ಯಸಂಬಂಧ) ಎಂಬ ಅರ್ಥವನ್ನು ಏಕೆ ಮಾಡ ಬೇಕು? **ಇದಲ್ಲದೆ** ಯಜಂತೇ ಎಂಬ ಧಾತುವಿಗೆ ಅತ್ಯಂತ ಪ್ರಸಿದ್ಧವಾದ ಪೂಜಾರ್ಥಕತ್ವವನ್ನು) ಏಕೆ ಬಿಡಬೇಕು ? ಮತ್ತು ಸುವರ್ಣಪೀಠಗಳಲ್ಲಿ

ಮಂಡಿಸಲ್ಪಟ್ಟ ಲಿಂಗವನ್ನು ಇಂದ್ರಾದಿ ದೇವತೆಗಳು ಪೂಜಿಸುವ ಸಮಯ ದಲ್ಲಿ ತಮ್ಮ ಕೈಗಳಿಂದ ಗಂಧಾದಿಸುಗಂಧ ದ್ರವ್ಯಗಳನ್ನು ಲೇಪಿಸುವಾಗ, ಒಂದು ಸಮಯದಲ್ಲಿ ಆ ಯಜಧಾತುವಿನ ಅರ್ಥವಾದ ಸಂಗತಿಕರಣ (ಲಿಂಗಸಂಬಂಧ) ವು ಸಿದ್ಧಿಸುವಲ್ಲಿ ಎಡಬಿಡದೆ (ಅವಿಭಾಜ್ಯ ಸಂಬಂಧ) ಯಾವಾಗಲೂ ತಮ್ಮ ದೇಹದಲ್ಲಿ ಧರಿಸುತ್ತಾರೆಂಬ ಅರ್ಥವನ್ನೇಕೆ ಮಾಡ ಬೇಕು ?

**ಸಮಾಧಾನ :**—ಹಾಗಲ್ಲ; ಈ ಶ್ಲೋಕದಲ್ಲಿ 'ಅಹರ್ನಿಶಂ' ಎಂಬು ದೊಂದು ವಿಶೇಷ ಪದವಿರುತ್ತದೆ. 'ಅಹಶ್ಚ ನಿಶಾ ಚ ಅಹರ್ನಿಶಂ' ಎಂಬ ಸಮಾಸದಿಂದ ನಿಪಾತಸಂಜ್ಞೆಯು ಬಂದು 'ಅಹರ್ನಿಶಂ' ಎಂದು ರೂಪ ಸಿದ್ಧಿಯಾಗಿದೆ. "ಕಾಲಾಧ್ವನೋರತ್ಯಂತ ಸಂಯೋಗೇ ದ್ವಿತೀಯಾ" ಎಂಬ ಪಾಣಿನಿಯ ಅನುಶಾಸನದಿಂದ ಈ 'ಅಹರ್ನಿಶಂ' ಎಂಬ ಶಬ್ದದಲ್ಲಿರುವ ಅಹಶ್ಶಬ್ದವು ಮತ್ತು ನಿಶಾ ಶಬ್ದವು ಎರಡೂ ಕಾಲವಾಚಕವಾದುದರಿಂದ ಅತ್ಯಂತ ಸಂಯೋಗ (ಸತತ ಸಂಬಂಧ) ಎಂಬ ಅರ್ಥದಲ್ಲಿ ದ್ವಿತೀಯಾ ವಿಭಕ್ತಿ ಬಂದಿರುತ್ತದೆ. ಈ 'ಅಹರ್ನಿಶ' ಶಬ್ದವು ಸಂಪೂರ್ಣ ಹಗಲು, ಸಂಪೂರ್ಣ ರಾತ್ರಿ ಎಂಬ ಅರ್ಥವನ್ನು ಕೊಡುವುದರಿಂದ ಆ ಶ್ಲೋಕದಲ್ಲಿ ಬಂದಿರುವ 'ಯಜಂತೇ' ಎಂಬ ಕ್ರಿಯಾಪದಕ್ಕೆ ಸತತಸಂಬಂಧರೂಪವಾದ 'ಶಿವಲಿಂಗಧಾರಣ' ಎಂಬ ಅರ್ಥವನ್ನು ಮಾಡುವುದೇ ಯುಕ್ತವಾದುದು. ಕೇವಲ ಪೂಜೆಯೆಂಬ ಅರ್ಥವನ್ನು ಮಾಡುವುದು ಸಾಧುವಲ್ಲವೆಂದು ನಿರ್ಣ ಯಿಸಿರುತ್ತಾರೆ.

ಹೀಗೆ ವ್ಯಾಖ್ಯಾನಕಾರರಾದ ಶಿವಕುಮಾರ ಮಿಶ್ರರು ಮೂಲಕಾರರ ಆಶಯವನ್ನೇ ಸ್ಥಾಪಿಸಿರುವಾಗ ಸಾಖರೆಯವರು ಅವಸರದಿಂದ ಪೂರ್ವ ಪಕ್ಷವನ್ನು ಮಾತ್ರ ಪ್ರಮಾಣೀಕರಿಸಿ ದೋಷಾಪಾದನೆ ಮಾಡಿರುವುದರಲ್ಲಿ ಔಚಿತ್ಯವೇ ಇಲ್ಲ. ಒಟ್ಟಿನಮೇಲೆ ಶ್ರೀಮಾನ್ ಸಾಖರೆಯವರ ಬೃಹದಾ ಕಾರವಾದ ವಿಮರ್ಶಾತ್ಮಕ ಪೀಠಿಕೆಯ ಸರಣಿಯನ್ನು ನೋಡಿದರೆ, ಇವರಿಗೆ ವೇದದಲ್ಲಿಯೂ, ವೈದಿಕರು ಅಥವಾ ಜಂಗಮರಲ್ಲಿಯೂ, ವೇದಾನುಸಾರಿ ಗಳಾದ ಸಿದ್ಧಾಂತಗ್ರಂಥಗಳಲ್ಲಿಯೂ ಹುಟ್ಟಿರುವ ದ್ವೇಷಾಗ್ನಿಯ ಜ್ವಾಲೆಯೆ ಈ ರೂಪದಿಂದ ಆವಿರ್ಭವಿಸಿತೆಂದು ಅನುಮಾನಿಸಬಹುದು.

# ಕೃತಜ್ಞತೆ

ಸುಪ್ರಸಿದ್ಧ ರೇಷ್ಮೆ ವ್ಯಾಪಾರಿಗಳೂ, ಪೂರ್ವಾಚಾರನಿಷ್ಠರೂ, ಮತಾಭಿಮಾನಿಗಳೂ, ಪರಮ ಆಸ್ತಿಕರೂ ಆದ ಕೊಳ್ಳೇಗಾಲದ ತಾಲ್ಲೂಕು ಮುಡಿಗುಂಡಂ ಸಾಹುಕಾರ್ ಶ್ರೀಮಾನ್ ಗುರುಕಾರ್ ಮಾದಪ್ಪನವರು ದ್ರವ್ಯ ಸಹಾಯಮಾಡಿದ್ದರಿಂದ ಈ ಗ್ರಂಥವು ಪ್ರಕಾಶಕ್ಕೆ ಬಂದಿತು. ಈ ಮಹಾಶಯರು ಅನೇಕ ಧರ್ಮಕಾರ್ಯಗಳನ್ನು ಮಾಡಿಯೂ ಮಾಡುತ್ತಲೂ ಇದ್ದಾರೆ. ಇವರು ಮೈಸೂರು ಸರ್ಕಾರದಲ್ಲಿ ಪುದುವಟ್ಟಾಗಿ ಒಂದು ಲಕ್ಷ ರೂಪಾಯಿಗಳಿಗೆ ಮೇಲ್ಪಟ್ಟು ಇಟ್ಟಿರುವ ಎಂಡೋಮೆಂಟ್ ಫಂಡಿನಿಂದ ಬರುವ ೫ ಸಾವಿರ ರೂಪಾಯಿಗಳು ವಿದ್ಯಾರ್ಥಿಗಳಿಗೆ ಪ್ರತಿವರ್ಷವೂ ಸಹಾಯವಾಗುತ್ತಿರುವುದು. ಇದಲ್ಲದೆ ಲಕ್ಷಾಂತರ ರೂಪಾಯಿಗಳ ವೆಚ್ಚದಿಂದ ಕೊಳ್ಳೇಗಾಲದಲ್ಲಿ ಹೆರಿಗೆ ಆಸ್ಪತ್ರೆಯನ್ನು ಕಟ್ಟಿಸಿ ಆ ಪ್ರಾಂತದ ಜನಗಳಿಗೆ ಮಹೋಪಕಾರಮಾಡಿರುತ್ತಾರೆ. ಮತ್ತು ಗೌರ್ನಮೆಂಟಿನಲ್ಲಿಟ್ಟಿರುವ ಹತ್ತು ಸಾವಿರ ರೂಪಾಯಿಗಳ ವೃದ್ಧ್ಯಂಶದಿಂದ ತಮ್ಮ ಕುಲದೇವತೆಯಾದ ಮುಡುಕುತೊರೆ ಶ್ರೀ ಭ್ರಮರಾಂಬಾಸಹಿತ ಮಲ್ಲಿಕಾರ್ಜುನ ಸ್ವಾಮಿಯ ಪೂಜೆಯು ತಪ್ಪದೆ ವಿಧ್ಯುಕ್ತವಾಗಿ ನಡೆಯುವಂತೆ ಏರ್ಪಡಿಸಿರುತ್ತಾರೆ. "ಪ್ರದಾನಂ ಪ್ರಚ್ಛನ್ನಂ" ಎಂಬಂತೆ ಇವರ ದಾನದ ಎಷ್ಟೋ ಭಾಗವು ಗುಪ್ತವಾಗಿರುತ್ತದೆ. ಜನಮೆಚ್ಚುಗೆಗಾಗಿ ಇವರು ಧರ್ಮವನ್ನು ಮಾಡಬಯಸುವುದಿಲ್ಲ ಆದರೆ ನಾನು ಬಹಳಕಾಲದಿಂದ ಪರಿಚಿತನಾದುದರಿಂದ ಈ ವಿಷಯವನ್ನು ಬರೆಯುವುದು ಅವರ ಮನಸ್ಸಿಗೆ ವಿರೋಧವೆನಿಸಿದರೂ ಅನಿವಾರ್ಯವಾಗಿ ಬಂದಿದೆ.

ಇವರಿಗೆ ಪರಮಾತ್ಮನು ಆಯುರಾರೋಗ್ಯಗಳನ್ನೀಯಲೆಂದು ಪ್ರಾರ್ಥಿಸುವೆನು.

ವೀರಶೈವ ಸಿದ್ಧಾಂತದ ಹೃದಯವನ್ನು ಚೆನ್ನಾಗಿ ಅರಿತ ರಾಜಧರ್ಮ ಪ್ರವೀಣ, ದಿವಾಣ ಬಹದ್ದೂರ್ ನಿವೃತ್ತ ಚೀಫ್ ಜಸ್ಟಿಸ್. ಶ್ರೀಮಾನ್ **ಪಿ. ಮಹದೇವಯ್ಯನವರು** ಈ ಗ್ರಂಥವನ್ನು ಆದ್ಯಂತವಾಗಿ ಪರಾಮರ್ಶಿಸಿ ಆಂಗ್ಲಭಾಷೆಯಲ್ಲಿ ಹೃದಯಂಗಮವೂ, ತತ್ತ್ವಗರ್ಭಿತವೂ ಆದ **ಮುನ್ನುಡಿ** ಯನ್ನು ಬರೆದು ಈ ಗ್ರಂಥಕ್ಕೆ ಅತಿಶಯ ಶೋಭೆಯನ್ನುಂಟುಮಾಡಿರುವುದ ರಿಂದ ಈ ಮಹೋದಯರಿಗೂ

ಗ್ರಂಥ ಮುದ್ರಣದ ಶುದ್ಧೀಕರಣ ಕಾರ್ಯದಲ್ಲಿ ವಿಶೇಷವಾಗಿ ಭಾಗ ವಹಿಸಿದ ಅರಮನೆ ಆಸ್ಥಾನವಿದ್ವಾನ್ ಶ್ರೀ **ಎಂ. ಜಿ. ನಂಜುಂಡಾ ರಾಧ್ಯರು** (ಸಂಪಾದಕರು: ಪ್ರಬೋಧ ಪುಸ್ತಕಮಾಲೆ) ಇವರಿಗೂ ಬಹಳ ತಾಳ್ಮೆಯಿಂದ ಗ್ರಂಥವನ್ನು ಮನೋಹರವಾಗಿ ಮುದ್ರಿಸಿಕೊಟ್ಟ ಉಷಾ ಪ್ರೆಸ್ಸಿನ ಪ್ರೊಪ್ರೈಟರ್, ಮ॥ ರಾ॥ ಶ್ರೀ॥ **ನಂಜಪ್ಪನವರಿಗೂ** ಅನಂತ ಧನ್ಯವಾದಗಳನ್ನು ಅರ್ಪಿಸುವೆನು.

ತಾ॥ ೧೫-೩-೧೯೫೦,
ವಿಕೃತಿ ಸಂ॥
ಚೈತ್ರ ಶು॥ ಪ್ರತಿಪತ್
ಯುಗಾದಿ

"ಪಂಡಿತರತ್ನಂ" ಶಿರಸಿ **ಗುರುಶಾಂತಶಾಸ್ತ್ರೀ,**
ಗ್ರಂಥಕರ್ತ.





ಶಿವಾಭ್ಯಾಂ ನಮಃ.

# ಕನ್ನಡ
# ಲಿಂಗಧಾರಣಚಂದ್ರಿಕೆ

ಆಧಾರಾದಿ ಸಮಸ್ತಚಕ್ರನಿಚಯೇ ಯೋ ಹಂಸರೂಪಃ ಶಿವೋ
ನಿತ್ಯಾನಂದ ಗುರುಪ್ರಸಾದ ವಿಭವಾದ್ಭಾವಾದಿ ಸಂಜ್ಞೋಽಭವತ್ ।
ಆಚಾರಾದಿ ವಿಭೇದತಃ ಪುನರಸೌ ಷಡ್ಲಿಂಗರೂಪೋಽಭವತ್
ತಸ್ಮೈ ಶ್ರೀ ಗುರುಮೂರ್ತಯೇ ಗಿರಿಸುತಾಭರ್ತ್ರೇ ನಮಸ್ಕುರ್ಮಹೇ ॥೧॥

ಕಮಲಗಳಲ್ಲಿ ವಿಹರಿಸುತ್ತಿರುವ ರಾಜಹಂಸಪಕ್ಷಿಯೋಪಾದಿಯಲ್ಲಿ ಶರೀರದೊಳಗಿರುವ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ ವಿಶುದ್ಧಿ, ಆಜ್ಞಾ ಎಂಬ ಆರು ಚಕ್ರಗಳಲ್ಲಿ ಸದಾ ಸಂಚರಿಸುತ್ತಿರುವ ಯಾವನು ಶಿವದೀಕ್ಷಾ ಸಂಸ್ಕಾರ ರೂಪವಾದ ಗುರುಕರುಣಾಕಟಾಕ್ಷದಿಂದ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂಬ ಮೂರು ಉಪಾಧಿಗಳನ್ನು ಪಡೆದು ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗವೆಂಬ ಆರು ರೂಪಗಳನ್ನು ಹೊಂದಿದನೋ, ಅಂತಹ ಅನನ್ಯಶಕ್ತಿಯಿಂದೊಡಗೂಡಿದ ಅದ್ವಿತೀಯ ಪರಶಿವಮೂರ್ತಿಯನ್ನು ಪರಮಭಕ್ತಿಯಿಂದ ನಮಸ್ಕರಿಸುವೆನು.

ಎಂದು ಗ್ರಂಥಾರಂಭದಲ್ಲಿ ನಂದಿಕೇಶ್ವರನು ಮಂಗಲಾಚರಣೆ ಮಾಡಿರುವುದನ್ನು ನೋಡಿದರೆ ಗ್ರಂಥಕರ್ತನು ಷಟ್‌ಸ್ಥಲ (ವೀರಶೈವ) ಸಿದ್ಧಾಂತವನ್ನು ಚೆನ್ನಾಗಿ ಅರಿತು ನುರಿತವನೆಂದೂ ಈ ಷಟ್‌ಸ್ಥಲ ಸಿದ್ಧಾಂತಕ್ಕೆ ಇಷ್ಟಲಿಂಗಧಾರಣೆಯೇ ಮೂಲಾಧಾರವೆಂದೂ ತಿಳಿದುಬರುತ್ತದೆ. ಹೇಗೆಂದರೆ-ಚರಾಚರಾತ್ಮಕವಾದ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹ ರೂಪವಾದ ಪಂಚಕೃತ್ಯಗಳೆಂಬೀ ಮಹಾಚಿತ್ರವು ಯಾವ

ಪರಶಿವಬ್ರಹ್ಮವೆಂಬ ಗೋಡೆಯ ಆಧಾರದಲ್ಲಿ ತೋರಿ ಅಡಗುತ್ತಿರುವುದೋ **"ಯಸ್ಮಿನ್ ಬ್ರಹ್ಮಣಿ ಲೀಯೇತ...............ತತ್ ಸ್ಥಲಂ ಸ್ಮೃತಂ"** ಎಂಬಂತೆ ಅದಕ್ಕೆ ಸ್ಥಲವೆಂದು ಹೆಸರು. ಇಂತಹ ಸ್ಥಲಶಬ್ದವಾಚ್ಯವಾದ ಬ್ರಹ್ಮದಲ್ಲಿ **"ತಥಾ ಶಕ್ತಿರ್ವಿಮರ್ಶಾಖ್ಯಾ"** ಎಂಬ ಪ್ರಮಾಣಾನುಸಾರವಾಗಿ ಸ್ವಾಭಾವಿಕವಾದೊಂದು ಅನನ್ಯಶಕ್ತಿಯಿರುತ್ತದೆ. ಇಂತಹ ನಿತ್ಯ ಶಕ್ತಿಯಿಂದೊಡಗೂಡಿದ ಪರಮೇಶ್ವರನು **"ಸ್ವಶಕ್ತಿ ಕ್ಷೋಭ ಮಾತ್ರೇಣ"** ಎಂಬ ಪ್ರಮಾಣಾನುಸಾರವಾಗಿ ಜಗತ್ತನ್ನು ಸೃಷ್ಟಿಸುತ್ತಾನೆ. ಒಂದಾನೊಂದು ಸಮಯದಲ್ಲಿ ಅಲೆಗಳಡಗಿದ ಸಮುದ್ರದಲ್ಲಿ ಒಂದು ಸೂಕ್ಷ್ಮವಾದ ಚಲನೆಯುಂಟಾಗಿ ತರುವಾಯ ಅದರಿಂದ ನೊರೆ ತೆರೆ ಬುದ್ಬುದಾದಿಗಳು ಉದಿಸುವಂತೆ ಶಕ್ತಿವಿಶಿಷ್ಟ ಪರಮಾತ್ಮನಲ್ಲಿ **"ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ"** ಎಂಬ ಛಾಂದೋಗ್ಯ ವಾಕ್ಯಾನುಸಾರವಾಗಿ ಜಡಾಜಡಾತ್ಮಕವಾದೀ ಪ್ರಪಂಚೋತ್ಪತ್ತಿಗಿಂತ ಮೊದಲು **"ಉಪಾಸ್ಯೋಪಾಸಕತ್ವೇನ ಸ್ವಯಮೇವ ದ್ವಿಧಾಽಭವತ್"** ತಾನೊಬ್ಬನೆ ಪೂಜ್ಯನಾಗಿಯೂ, ಪೂಜಕನಾಗಿಯೂ ಆಗಬೇಕೆಂಬ ಇಚ್ಛೆಯುದಿಸಿತು. ಇದಕ್ಕೆ ಈಷಚ್ಚಲನವೆಂದೂ, ವಿಮರ್ಶಶಕ್ತಿಸ್ಫುರಣವೆಂದೂ ಹೆಸರು. ಹೀಗೆ ಸ್ಫುರಣಮಯವಾದ ಪರಬ್ರಹ್ಮದಲ್ಲಿ ಇಂತಹ ಇಚ್ಛಾವಿಶೇಷವೆಂಬ ಚಲನ ಕ್ರಿಯೆಯೂ ಸ್ಫುರಣರೂಪವೇ ಆದುದರಿಂದ ಸರ್ವವ್ಯಾಪಕವಾದ ಆ ಪರಬ್ರಹ್ಮದಲ್ಲಿ ಚಲನಕ್ರಿಯೆಗೆ ಅವಕಾಶವಿಲ್ಲವೆಂಬ ಶಂಕೆಯುತ್ಪನ್ನವಾಗಲಾರದು. ಇಂತಹ ನಿರಂಕುಶ ಸ್ವಾತಂತ್ರ್ಯವುಳ್ಳ ಪರಬ್ರಹ್ಮವು ತನ್ನ ವಿಮರ್ಶಶಕ್ತಿಸ್ಫುರಣರೂಪವಾದ ಈಷಚ್ಚಲನದಿಂದ ಲಿಂಗಸ್ಥಲವೆಂದೂ, ಅಂಗಸ್ಥಲವೆಂದೂ ಎರಡು ವಿಭಾಗವನ್ನು ಪಡೆಯಿತು. ಇವೆರಡರಲ್ಲಿ ಅಧಿಕಾಂಶವನ್ನು ಹೊಂದಿ ಸ್ವಪ್ರಕಾಶತ್ವಾಂಶದಲ್ಲಿ ಸ್ಫುರಿಸಿದ ಚೇತನವೇ ಲಿಂಗತತ್ತ್ವವೆನಿಸಿತು. ನ್ಯೂನಭಾವವನ್ನು ಹೊಂದಿ ಸ್ವಪ್ರಕಾಶತ್ವಾಂಶದಲ್ಲಿ ಸ್ಫುರಿಸಿದ ಶಿವಚೈತನ್ಯವೇ ಅಂಗ (ಜೀವ) ತತ್ತ್ವವೆನಿಸಿತು. ಈ ಲಿಂಗಸ್ಥಲವು **"ಭಾವಪ್ರಾಣೇಷ್ಟಭೇದೇನ ತ್ರಿಧಾಭೂತಂ ನಗಾತ್ಮಜೇ"** ಎಂಬ ಆಗಮ ವಾಕ್ಯದಂತೆ ಭಾವಲಿಂಗವೆಂತಲೂ, ಪ್ರಾಣಲಿಂಗವೆಂತಲೂ, ಇಷ್ಟಲಿಂಗವೆಂತಲೂ ಮೂರು ವಿಧವಾಯಿತು. ಇವುಗಳಲ್ಲಿ ಭಾವಲಿಂಗವು

ಮಹಾಲಿಂಗ-ಪ್ರಸಾದಲಿಂಗವೆಂತಲೂ, ಪ್ರಾಣಲಿಂಗವು ಜಂಗಮಲಿಂಗ-ಶಿವಲಿಂಗವೆಂತಲೂ, ಇಷ್ಟಲಿಂಗವು ಗುರುಲಿಂಗ-ಆಚಾರಲಿಂಗವೆಂತಲೂ ಷಡ್ಲಿಂಗರೂಪವನ್ನು ಹೊಂದಿತು. ಆಗ ಪರಶಿವನಲ್ಲಿರುವ ಅನನ್ಯವಾದ ಸ್ವಪ್ರಕಾಶತಾಶಕ್ತಿಯು ಸಹ ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂಬ ಷಡ್ರೂಪದಿಂದ ಯಥಾಕ್ರಮವಾಗಿ ಮಹಾಲಿಂಗ ಮುಂತಾದ ಷಡ್ಲಿಂಗಗಳನ್ನಾಶ್ರಯಿಸಿತು. ಇವುಗಳಲ್ಲಿ ಮಹಾಲಿಂಗವು ಸರ್ವಪದಾರ್ಥಗ್ರಾಹಕವಾದ ಹೃದಯರೂಪವಾದುದರಿಂದ ಗೋಪ್ಯಮುಖವೆನಿಸಿತು. ಪರಾಶಕ್ತಿರೂಪವಾದ ಪ್ರಸಾದಲಿಂಗವು ಶಬ್ದಗ್ರಾಹಕವಾದ ಶ್ರೋತ್ರೇಂದ್ರಿಯವನ್ನಾಶ್ರಯಿಸಿತು. ಆದಿಶಕ್ತಿರೂಪವಾದ ಜಂಗಮಲಿಂಗವು ಸ್ಪರ್ಶಗ್ರಾಹಕವಾದ ತ್ವಗಿಂದ್ರಿಯವನ್ನಾಶ್ರಯಿಸಿತು. ಇಚ್ಛಾಶಕ್ತಿರೂಪವಾದ ಶಿವಲಿಂಗವು ರೂಪಗ್ರಾಹಕವಾದ ಚಕ್ಷುರಿಂದ್ರಿಯವನ್ನಾಶ್ರಯಿಸಿತು. ಜ್ಞಾನಶಕ್ತಿರೂಪವಾದ ಗುರುಲಿಂಗವು ರಸಗ್ರಾಹಕವಾದ ರಸನೇಂದ್ರಿಯವನ್ನಾಶ್ರಯಿಸಿತು. ಕ್ರಿಯಾಶಕ್ತಿರೂಪವಾದ ಆಚಾರಲಿಂಗವು ಗಂಧಗ್ರಾಹಕವಾದ ಘ್ರಾಣೇಂದ್ರಿಯವನ್ನಾಶ್ರಯಿಸಿತು.

ಇನ್ನು ನ್ಯೂನಭಾವವನ್ನು ಹೊಂದಿದ ಅಂಗ (ಜೀವ) ಸ್ಥಲವಾದರೋ "ಅಂಗಸ್ಥಲಂ ತಥಾ ಪ್ರೋಕ್ತಂ" ಎಂಬುಕ್ತಿಯಂತೆ ಯೋಗಾಂಗ ಭೋಗಾಂಗ ಮತ್ತು ತ್ಯಾಗಾಂಗವೆಂದು ಮೂರು ಅನ್ವರ್ಥಕ ನಾಮಗಳನ್ನು ಪಡೆಯಿತು. ಗುರು-ಲಿಂಗ-ಜಂಗಮರಿಗೆ ಅಭೇದವನ್ನೊಳಗೊಂಡಿರುವುದರಿಂದ ಯೋಗಾಂಗವೆಂದೂ, ಗುರುಲಿಂಗಜಂಗಮಾರ್ಪಿತ ಪ್ರಸಾದವನ್ನು ಭುಂಜಿಸುವುದರಿಂದ ಭೋಗಾಂಗವೆಂದೂ, ಗುರುಲಿಂಗಜಂಗಮರಿಗೆ ವಂಚನೆಯಿಲ್ಲದೆ ತನು ಮನೋಧನವನ್ನು ತ್ಯಜಿಸುವುದರಿಂದ ತ್ಯಾಗಾಂಗವೆಂದೂ ಹೆಸರಾಯಿತು. ಈ ಮೂರು ಅಂಗಸ್ಥಲಗಳಲ್ಲಿ ಯೋಗಾಂಗದಲ್ಲಿ ಐಕ್ಯ-ಶರಣ ಎಂದೂ, ಭೋಗಾಂಗದಲ್ಲಿ ಪ್ರಾಣಲಿಂಗಿ-ಪ್ರಸಾದಿ ಎಂದೂ, ತ್ಯಾಗಾಂಗದಲ್ಲಿ ಮಹೇಶ್ವರ-ಭಕ್ತ ಎಂದೂ ಷಟ್‌ಸ್ಥಲಗಳಾದವು. ಈ ಆರು ಸ್ಥಲಗಳಲ್ಲಿ ಮೊದಲನೆಯ ಮೂರು ಸ್ಥಲಗಳು ಲಿಂಗಾಂಗಸಾಮರಸ್ಯರೂಪವಾದ ಮುಕ್ತಿಸಿದ್ಧಿಗಾಗಿ ಪತಿಕರ್ಮದಿಂದ ಕೂಡಿದ ಜ್ಞಾನಭಾಗಕ್ಕೆ ಪ್ರಾಧಾನ್ಯವನ್ನು ಹೇಳುತ್ತವೆ. ಉಳಿದ ಮೂರು ಸ್ಥಲಗಳು

ಜ್ಞಾನದಿಂದೊಡಗೂಡಿದ ಪತಿಕರ್ಮಭಾಗಕ್ಕೆ ಪ್ರಾಧಾನ್ಯವನ್ನು ಹೇಳುತ್ತವೆ.

" ಲಿಂಗಸ್ಥಲಾಶ್ರಯಾ ಶಕ್ತಿಃ ಕಲಾರೂಪಾ ಪ್ರಕೀರ್ತಿತಾ ।
ಅಂಗಸ್ಥಲಾಶ್ರಯಾ ಶಕ್ತಿರ್ಭಕ್ತಿರೂಪಾ ಭಯಾಪಹಾ ॥
ಶಕ್ತಿಃ ಪ್ರವೃತ್ತಿರಾಖ್ಯಾತಾ ನಿವೃತ್ತಿರ್ಭಕ್ತಿರೀರಿತಾ ।
ಶಕ್ತ್ಯಾಪ್ರಪಂಚ ಸೃಷ್ಟಿಸ್ಸ್ಯಾತ್ ಭಕ್ತ್ಯಾತದ್ವಿಲಯೋ ಮತಃ ॥

—ಅನುಭವ ಸೂತ್ರ

ಎಂಬ ಪ್ರಮಾಣದಂತೆ ಪರಬ್ರಹ್ಮದಲ್ಲಿರುವ ಶಕ್ತಿಯೇ ಪ್ರವೃತ್ತಿ ಮಾರ್ಗದಲ್ಲಿ ತಾನು ಶಕ್ತಿಯೆನಿಸಿಕೊಂಡಿದ್ದು, ನಿವೃತ್ತಿ ಮಾರ್ಗದಲ್ಲಿ ಭಕ್ತಿ ರೂಪವನ್ನು ತಾಳಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸ ಎಂದು ಆರು ಪ್ರಕಾರವಾಗಿ ಕ್ರಮದಿಂದ ಈ ಭಕ್ತಾದಿ ಸ್ಥಲಗಳನ್ನಾಶ್ರಯಿಸಿತು. " ತ್ವಮೇವ ಶರಣಂ ಮಮ " ಎಂಬಂತೆ ಸಂಪೂರ್ಣವಾಗಿ ಲಿಂಗಕ್ಕೆ ಶರಣಾಗತವಾಗುವುದೇ ಶ್ರದ್ಧಾಭಕ್ತಿ. ಶರಣಾಗತಿಯಿಂದ ಲಿಂಗದಲ್ಲಿಟ್ಟ ಮನಸ್ಸನ್ನು ಕದಡದಂತೆ ಏಕಾಗ್ರತೆಗೊಳಿಸುವುದೇ ನಿಷ್ಠಾಭಕ್ತಿ. ಏಕಾಗ್ರತೆಯಿಂದ ಆ ಲಿಂಗವನ್ನು ಬಹು ಎಚ್ಚರದಿಂದ ಉಪಾಸಿಸುತ್ತಿರುವುದೇ ಅವಧಾನಭಕ್ತಿಯು. ಎಚ್ಚರದಿಂದ ಆ ಲಿಂಗತತ್ವವನ್ನು ಅನುಭವಿಸುವುದೇ ಅನುಭವಭಕ್ತಿಯು. ಹೀಗೆ ಅನುಭವಿಸಿದ ಬಳಿಕ ಆ ಲಿಂಗದಿಂದುಂಟಾಗುವ ಅಖಂಡಾನಂದವನ್ನು ಪಡೆವುದೇ ಆನಂದಭಕ್ತಿ. ಇಂತಹ ಅಖಂಡಾನಂದ ವೈಭವದಿಂದ " ನ ಬಾಹ್ಯಂ ಕಿಂಚನ ವೇದ ನಾಂತರಂ " ಎಂಬ ಬೃಹದಾರಣ್ಯಕ ವಾಕ್ಯದಂತೆ ಇದು ಲಿಂಗ ಇದು ಅಂಗ (ನೀನು–ನಾನು)ಎಂಬ ಭೇದವಡಗಿ ಸರ್ವತ್ರ ಶಿವಭಾವನೆಯುಂಟಾಗುವುದೇ ಸಮರಸಭಕ್ತಿಯೆನಿಸುತ್ತದೆ. ಇದನ್ನೇ ಲಿಂಗಾಂಗಸಾಮರಸ್ಯವೆಂದು ಹೇಳುತ್ತಾರೆ. ಹೀಗೆ ನಿವೃತ್ತಿಮಾರ್ಗದಲ್ಲಿ ಭಕ್ತಿರೂಪವನ್ನು ತಳೆದ ಆ ಶಕ್ತಿಯು ಶ್ರದ್ಧಾರೂಪದಿಂದ ಪರಿಣಮಿಸಿ ಭಕ್ತಿಸ್ಥಲದಲ್ಲಿಯೂ, ನಿಷ್ಠಾ ರೂಪದಿಂದ ಪರಿಣಮಿಸಿ ಮಹೇಶ್ವರಸ್ಥಲದಲ್ಲಿಯೂ, ಅವಧಾನ ರೂಪದಿಂದ ಪರಿಣಮಿಸಿ ಪ್ರಸಾದಿಸ್ಥಲದಲ್ಲಿಯೂ, ಅನುಭವರೂಪದಿಂದ ಪರಿಣಮಿಸಿ ಪ್ರಾಣಲಿಂಗಿ ಸ್ಥಲದಲ್ಲಿಯೂ, ಆನಂದರೂಪದಿಂದ ಪರಿಣಮಿಸಿ ಶರಣ

ಸ್ಥಲದಲ್ಲಿಯೂ, ಸಮರಸರೂಪದಿಂದ ಪರಿಣಮಿಸಿ ಐಕ್ಯಸ್ಥಲದಲ್ಲಿಯೂ ಸಹಾಯವನ್ನು ನೀಡಿ ಆತ್ಮನ ಪುನರಾವೃತ್ತಿಗೆ ಅವಕಾಶವನ್ನು ಕೊಡದೆ ಅದ್ವಿತೀಯ ಷಟ್‌ಸ್ಥಲಪರಶಿವಬ್ರಹ್ಮಸಾಕ್ಷಾತ್ಕಾರದಿಂದ ಸ್ವಾಭಾವಿಕಮಲತ್ರಯಾತ್ಮಕ ಮಾಯಾಪಾಶದುಃಖನಿವೃತ್ತಿಯಾಗಿ "ಪರಂ ಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ" ಎಂದು ಛಾಂದೋಗ್ಯದಲ್ಲಿ ಹೇಳಿರುವಂತೆ ಜೀವನಿಗೆ ಶಿವತ್ವಾಭಿವ್ಯಕ್ತಿರೂಪವಾದ ಸಾಮರಸ್ಯಸಿದ್ಧಿಯನ್ನು ಉಂಟುಮಾಡುತ್ತದೆ. ಇಂತಹ ಮುಕ್ತಿಸಾಧನವಾದ ಷಟ್‌ಸ್ಥಲಮಾರ್ಗದಲ್ಲಿ ಪ್ರವೇಶಿಸಲಿಚ್ಛೆಯುಳ್ಳವನು ಲಿಂಗಧಾರಣಾತ್ಮಕವಾಗ ಶಿವದೀಕ್ಷೆಯನ್ನು ಹೊಂದಿರಲೇಬೇಕು. ಅದಿಲ್ಲದಿದ್ದರೆ ಷಟ್‌ಸ್ಥಲಸ್ವರೂಪವಾಗಲಿ ಷಡ್ಲಿಂಗಸ್ವರೂಪವಾಗಲಿ ಗೋಚರಿಸಲಾರದು. ಆದುದರಿಂದ ಈ ಗ್ರಂಥಕರ್ತನು ಮಂಗಲಪದ್ಯದಲ್ಲಿ ಲಿಂಗಧಾರಣದಿಂದ ಸಿದ್ಧಿಸುವ ಷಟ್‌ಸ್ಥಲ ಷಡ್ಲಿಂಗಸ್ವರೂಪವನ್ನು ಗರ್ಭೀಕರಿಸಿ ತನ್ನ ಇಷ್ಟದೇವತಾ ಸ್ತೋತ್ರವನ್ನು ಮಾಡಿದ್ದಾನೆ.

ಮಾಮಕೇ ದಹರಾಂಭೋಜೇ ಶಾರಭಂ ಪಾದಪಂಕಜಮ್ ।
ವಿಘ್ನಾಂಧಕಾರಮಾರ್ತಂಡಮಂಡಲಂ ಸತತಂ ಭಜೇ ॥ ೨ ॥

ವಿಘ್ನಗಳೆಂಬ ಕಾರ್ಗತ್ತಲೆಗೆ ಪ್ರಖರಸೂರ್ಯಪ್ರಾಯನಾದ ಪರಶಿವನ ಸಗುಣಮೂರ್ತಿಯೆನಿಸಿದ ಶರಭಾವತಾರವನ್ನು ತಳೆದ ಪರಮಾತ್ಮನ ಸಗುಣಮೂರ್ತಿಯ ಅಡಿದಾವರೆಗಳನ್ನು ನನ್ನ ದಹರಾ (ಹೃದಯಾ) ಕಾಶದಲ್ಲಿ ಧ್ಯಾನಿಸುವೆನು.

ಕರ್ಮಬ್ರಹ್ಮವಿಚಾರಶಾಸ್ತ್ರನಿಚಯಪ್ರೋತಾಚ್ಛವಾಗ್ವೈಭವಂ
ಲಿಂಗಾಂಗಸ್ಥಲತತ್ತ್ವಬೋಧಕಗಿರಾಮಾಪಾದನೇ ಷಣ್ಮುಖಮ್ ।
ವಿದ್ವನ್ಮತ್ತಗಜೇಂದ್ರಕುಂಭದಲನೇ ಕಂಠೀರವಾಡಂಬರಂ
ವಿಘ್ನಧ್ವಾಂತರವಿಂ ನಮಾಮಿ ಶಿರಸಾ ಮಲ್ಲೇಶ್ವರಾಖ್ಯಂ ಗುರುಮ್ ॥ ೩ ॥

ಸ್ವರ್ಗಸಾಧಕವಾದ ಜ್ಯೋತಿಷ್ಟೋಮಾದಿಯಜ್ಞಗಳ ಸ್ವರೂಪವನ್ನು ಪ್ರತಿಪಾದಿಸುವ ಪೂರ್ವಮೀಮಾಂಸೆಯಲ್ಲಿಯೂ, ಮುಕ್ತಿಸಾಧಕವಾದ ಜ್ಞಾನಸ್ವರೂಪವನ್ನು ಪ್ರತಿಪಾದಿಸುವ ಉತ್ತರಮೀಮಾಂಸೆಯಲ್ಲಿಯೂ, ಅಪಾರವಾದ ಪಾಂಡಿತ್ಯವನ್ನು ಆರ್ಜಿಸಿ ಅಪ್ರತಿಹತವಾದ ವಾಗ್ವೈಭವ

ವುಳ್ಳವನಾಗಿಯೂ, ಶಕ್ತಿವಿಶಿಷ್ಟಾದ್ವೈತ (ವೀರಶೈವ) ಸಿದ್ಧಾಂತದಲ್ಲಿ ಹೇಳಲ್ಪಟ್ಟ ಆಚಾರಾದಿಷಡ್ಲಿಂಗಸ್ಥಲಗಳ, ಭಕ್ತಾದಿ ಷಟ್‌ಸ್ಥಲಗಳ ಯಥಾರ್ಥ ತತ್ತ್ವವನ್ನು ಬೋಧಿಸುವುದರಲ್ಲಿ ಸಾಕ್ಷಾತ್ ಷಣ್ಮುಖಸ್ವರೂಪನಾಗಿಯೂ, ಶಿವಾದ್ವೈತ (ವೀರಶೈವ) ಸಿದ್ಧಾಂತವನ್ನು ಖಂಡಿಸಲು ಪ್ರತಿಭಟಿಸುವ ಪಂಡಿತರೆಂಬ ಮದ್ದಾನೆಗಳ ಕುಂಭಸ್ಥಲಗಳನ್ನು ಭೇದಿಸುವುದರಲ್ಲಿ ಸಿಂಹಾಡಂಬರವುಳ್ಳವನಾಗಿಯೂ, ಗ್ರಂಥಾರಂಭದಲ್ಲಿ ಬಂದೊದಗುವ ಎಡರುಗಳೆಂಬ ಇರುಳಿಗೆ ಪ್ರಚಂಡ ಆದಿತ್ಯಸ್ವರೂಪನಾಗಿಯೂ ಇರುವ ಶ್ರೀಮಲ್ಲೇಶ್ವರನೆಂಬ ಅಭಿಧಾನವುಳ್ಳ ಶ್ರೀ ಗುರುವಿನ ಚರಣ ಸರೋಜಗಳಿಗೆ ನಮಿಸುವೆನು.

ವೇದಶಾಸ್ತ್ರಾಣ್ಯನಾಲೋಚ್ಯ ಕೇಚಿತ್ ಪಂಡಿತಮಾನಿನಃ ।
ಧಾರಣಂ ಶಿವಲಿಂಗಸ್ಯ ನಾಂಗೀಚಕ್ರುರಮರ್ಷತಃ ॥ ೪ ॥

ತಮಗೆ ತಾವೇ ಪಂಡಿತರೆಂದು ಅಭಿಮಾನಪಡುವ ಕೆಲವರು ಋಕ್ ಯಜುಸ್ಸಾಮಗಳೆಂಬ ಮೂರು ವೇದಗಳಲ್ಲಿಯೂ, ಮನ್ವಾದಿ ಸ್ಮೃತಿಗಳಲ್ಲಿಯೂ, ಸ್ಕಾಂದಾದಿ ಪುರಾಣಗಳಲ್ಲಿಯೂ, ಶಿವಾಗಮಗಳಲ್ಲಿಯೂ, ವೇದತುಲ್ಯಗಳಾದ ಭಾರತಾದಿ ಇತಿಹಾಸಗಳಲ್ಲಿಯೂ ಪಂಚಾವಯವ (ಪಂಚ ಸೂತ್ರ) ಗಳಿಂದ ಕೂಡಿದ ಶಿವ (ಇಷ್ಟ) ಲಿಂಗವನ್ನು ಕೊರಳಲ್ಲಿ ಧರಿಸಿ, ಅಂಗೈಯಲ್ಲಿಟ್ಟು ಪೂಜಿಸಬೇಕೆಂದು ಸ್ಪಷ್ಟವಾಗಿ ಪ್ರತಿಪಾದಿಸಿದ್ದರೂ ಅವುಗಳೊಂದನ್ನೂ ಲಕ್ಷಿಸದೆ ಅಸಹನೆಯಿಂದ ಕೂಡಿದವರಾಗಿ ಲಿಂಗಧಾರಣ ವಿಷಯದಲ್ಲಿ ತಿರಸ್ಕಾರಬುದ್ಧಿಯುಳ್ಳವರಾಗಿದ್ದಾರೆ.

ಸ್ವಯಂವರೇ ವರಂ ದೇಹಿ ಕರೋಮಿ ಭವದಾಜ್ಞಯಾ ।
ತೇಷಾಂ ನಿರಾಸಸಿದ್ಧ್ಯರ್ಥಂ ಲಿಂಗಧಾರಣಚಂದ್ರಿಕಾಮ್ ॥ ೫ ॥

ಪರಶಿವನ ಇಚ್ಛಾದಿ ಸಮಸ್ತ ಶಕ್ತಿ ಸ್ವರೂಪಿಣಿಯಾದ ಹೇ ಗಿರಿಜಾದೇವಿಯೇ! ನೀನು ನಿನ್ನಿಷ್ಟದಿಂದಲೇ ಪರಶಿವನನ್ನು ವರಿಸಿರುವುದರಿಂದಲೂ, ಇನ್ನೊಬ್ಬರ ಅಪೇಕ್ಷೆಯಿಲ್ಲದೆ ನಿನ್ನ ಭಕ್ತರಿಗೆ ವರವನ್ನು ಕೊಡಲು ಸಮರ್ಥಳಾಗಿರುವುದರಿಂದಲೂ ಲಿಂಗಧಾರಣವು ವೇದಪ್ರತಿಪಾದ್ಯವಲ್ಲವೆಂದು ವಾದಿಸುತ್ತಿರುವ ಪಂಡಿತಂಮನ್ಯರ ಅಭಿಪ್ರಾಯವೆಂಬ ಹೃದಯ

ಗ್ರಂಥಿಯನ್ನು ಯುಕ್ತಿ ಪ್ರಮಾಣಗಳಿಂದ ಸಡಲಿಸುವುದಕ್ಕಾಗಿ "ಲಿಂಗ ಧಾರಣಚಂದ್ರಿಕೆ" ಎಂಬ ಗ್ರಂಥವನ್ನು ರಚಿಸಲು ಉದ್ಯುಕ್ತನಾಗಿರುವ ಪರಮಭಕ್ತನಾದ ನನ್ನ ಮೇಲೆ ಕರುಣಾಮೃತವನ್ನು ಬೀರಿ ಗ್ರಂಥವನ್ನು ರಚಿಸುವ ಸಾಮರ್ಥ್ಯವನ್ನು ದಯೆಪಾಲಿಸು.

ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ
ವಿನ್ಯಸ್ಯ ತಲ್ಲೀನಮನಃ ಪ್ರಚಾರಃ ।
ಬಾಹ್ಯಕ್ರಿಯಾಸಂಕುಲನಿಸ್ಪೃಹಾತ್ಮಾ
ಯಃ ಪೂಜಯತ್ಯಂಗ ಸ ವೀರಶೈವಃ ॥

(ಸ್ಕಾಂದ ಪುರಾಣ)

ಶಿವಲಿಂಗವನ್ನು ಕಂಠಮಸ್ತಕಾದಿ ಉತ್ತಮಾಂಗಗಳಲ್ಲೊಂದೆಡೆ ಧರಿಸಿ ಮೂರು ಕಾಲಗಳಲ್ಲಿಯೂ ಹಸ್ತ ಪೀಠದೊಳಿಟ್ಟು, ಲೌಕಿಕವಿಷಯಗಳಿಂದ ಪರಾಙ್ಮುಖನಾಗಿ ಕ್ರಮವಿಡಿದು ಪೂಜಿಸುತ್ತ ಮನಸ್ಸನ್ನು ಆ ಲಿಂಗದಲ್ಲಿ ಲಯಗೊಳಿಸುವವನೇ ವೀರಶೈವನೆಂದು ವ್ಯಾಸಮಹರ್ಷಿಗಳು ಸ್ಕಾಂದ ಪುರಾಣದಲ್ಲಿ ಹೇಳಿರುವುದರಿಂದ ವೀರಶೈವರಿಗೆ ಲಿಂಗಧಾರಣವೇ ಮುಖ್ಯ ಲಕ್ಷಣವಾಗಿರುತ್ತದೆ. ಇಂತಹ ಮುಕ್ತಿಸಾಧನವಾದ ಶಿವ (ಇಷ್ಟ) ಲಿಂಗ ವನ್ನು ಕೊರಳಲ್ಲಿ ಧರಿಸದವನು ಶಕ್ತಿವಿಶಿಷ್ಟಾ (ಶಿವಾದ್ವೈತ) ದ್ವೈತಾನು ಸಾರವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬಾರು ಮುಕ್ತಿಸೋಪಾನಗಳನ್ನೇರಿ ಶಿವನಲ್ಲಿ ಬೆರೆಯ (ಸಾಮರಸ್ಯ ಹೊಂದ) ಲಾರನು. ಆದುದರಿಂದ ಪೂರ್ವಾಚಾರ್ಯರು ಶಿವದೀಕ್ಷಾಪೂರ್ವಕ ವಾದ ಇಷ್ಟಲಿಂಗಧಾರಣೆಯ ತತ್ತ್ವವನ್ನು ವಿಶೇಷವಾಗಿ ವಿವರಿಸಿದ್ದಾರೆ. ವೀರಶೈವಸಿದ್ಧಾಂತವನ್ನರಿಯದ ಅನೇಕರು ಈ ಲಿಂಗಧಾರಣೆಯ ವಿಷಯ ದಲ್ಲಿ ನಾನಾವಿಧಗಳಾದ ಸಂಶಯವುಳ್ಳವರಾಗಿರುತ್ತಾರೆ.

ಇವರಲ್ಲಿ ಕೆಲವರು ಲಿಂಗಧಾರಣವು ವೇದಗಳಲ್ಲೆಲ್ಲಿಯೂ ಹೇಳದಿರು ವುದರಿಂದ ಅವೈದಿಕವೆಂದು ಹೇಳುವರು. ಮತ್ತೆ ಕೆಲವರು ಶಿವಲಿಂಗ ವನ್ನು ತಮ್ಮ ತಮ್ಮ ಶಕ್ತಿಗನುಗುಣವಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ಕಾಷ್ಠ ತಾಮ್ರ ಸುವರ್ಣ ರಜತಾದಿ ಯಾವುದಾದರೊಂದು ಪೀಠದಲ್ಲಿಟ್ಟು ಭಕ್ತಿ ಯಿಂದ ಪೂಜಿಸುವುದನ್ನು ಬಿಟ್ಟು, ಹೇಯವೂ ಅಪವಿತ್ರವೂ ಮಾಂಸ

ಮಯವೂ ಆದ ದೇಹದಲ್ಲಿ ಧರಿಸುವುದು ಯುಕ್ತವಲ್ಲವೆಂದು ವಾದಿಸುವರು. **ಇನ್ನೂ ಕೆಲವರು** ಸಾಕ್ಷಾತ್ ಪರಶಿವನೆಂದು ಭಾವಿಸಿರುವ ಇಷ್ಟಲಿಂಗವನ್ನು ಅಪವಿತ್ರವಾದ ಎಡಗೈಯಲ್ಲಿಟ್ಟು ಪೂಜಿಸುವುದಂತೂ ಲೋಕವಿರುದ್ಧ ಹಾಗೂ ಶಾಸ್ತ್ರವಿರುದ್ಧವೆಂದು ನುಡಿಯುುವರು. **ಬೇರೆ ಕೆಲವರು** ಶಿವಲಿಂಗವನ್ನು ಸಂಪುಟದೊಳಗಿರಿಸಿ ಕೊರಳಲ್ಲಿ ಧರಿಸಿ ವಾಮಹಸ್ತದಲ್ಲಿ ಪೂಜಿಸಬೇಕೆಂದು ಯಾವ ಉಪನಿಷದಾದಿ ಗ್ರಂಥಗಳಲ್ಲಿಯೂ ಹೇಳಿರುವುದಿಲ್ಲ. ಯಾವ ನಿಯಮವು ಶ್ರುತಿಗಳಲ್ಲಿ ಹೇಳಿರುವುದಿಲ್ಲವೋ ಅದೆಲ್ಲವೂ ಅವೈದಿಕ. ಯಾವುದು ಶ್ರುತಿವಿಹಿತವಾಗಿರುವುದೋ ಅದೆಲ್ಲವೂ ವೈದಿಕವೆಂದು ಸಿದ್ಧಾಂತ ವಾಗಿದೆ. ಆದರೆ ಲಿಂಗಧಾರಣ ವಿಧಾನವು ವೇದಗಳಲ್ಲಿ ವಿಹಿತವಾಗದಿರು ವುದರಿಂದ ಅಂತಹ ಲಿಂಗಧಾರಿಗಳು ವೈದಿಕರಲ್ಲವೆಂದು ಹೇಳುವರು. **ಮತ್ತೆ ಕೆಲವರು ಮಧ್ಯಸ್ಥರು** ಗ್ರಂಥಾರಂಭದಲ್ಲಿ ಮಂಗಳಾಚರಣೆಯನ್ನು ಮಾಡಬೇಕೆಂದು ಯಾವ ವೇದದಲ್ಲಿಯೂ ಸ್ಪಷ್ಟವಾಗಿ ಕಂಡುಬರದಿದ್ದರೂ ಪ್ರತಿಯೊಬ್ಬ ಆಸ್ತಿಕಗ್ರಂಥಕಾರರು ಗ್ರಂಥಸಮಾಪ್ತಿಗೂ, ಮಂಗಳಾ ಚರಣೆಗೂ ಕಾರ್ಯಕಾರಣಭಾವವನ್ನು ಒಪ್ಪಿ **"ಸಮಾಪ್ತಿಕಾಮೋ ಮಂಗಲಮಾಚರೇತ"** ಎಂದರೆ ಗ್ರಂಥವು ವಿಘ್ನವಿಲ್ಲದೆ ಸಾಂಗವಾಗ ಬೇಕಾದರೆ ಮೊದಲು ಮಂಗಲವನ್ನು ಆಚರಿಸಬೇಕೆಂಬ ಒಂದು ಶ್ರುತಿ ಯನ್ನು ಕಲ್ಪಿಸಿಕೊಂಡಿರುವಂತೆ ಇಲ್ಲಿಯೂ, ಲಿಂಗಧಾರಣಕ್ಕೂ ಮುಕ್ತಿಗೂ ಕಾರ್ಯಕಾರಣಭಾವವಿರುವುದರಿಂದ **"ಮುಕ್ತಿಕಾಮೋ ಲಿಂಗಧಾರಣ ಮಾಚರೇತ"** ಮೋಕ್ಷವನ್ನು ಬಯಸುವವನು ಅದಕ್ಕೆ ಕಾರಣವಾದ ಶಿವ ಲಿಂಗವನ್ನು ಕೊರಳಲ್ಲಿ ಧರಿಸಬೇಕೆಂಬ ಒಂದು ಶ್ರುತಿಯನ್ನು ಕಲ್ಪಿಸಿ ಲಿಂಗಧಾರಣವನ್ನು ಸಾಧಿಸಬಹುದೆಂದು ತಾವೇ ಒಂದು ಶಂಕೆ ಯನ್ನು ಕಲ್ಪಿಸಿಕೊಂಡು ಮತ್ತೆ ಇದೂ ಸಹ ಸಮಂಜಸವಾದುವಲ್ಲವೆನ್ನು ತ್ತಾರೆ. ಏಕಂದರೆ—ಮಂಗಲವನ್ನಾಚರಿಸಿದ ಬಳಿಕ ಗ್ರಂಥವನ್ನು ಆರಂಭಿಸ ಬೇಕೆಂದು ಪ್ರತ್ಯಕ್ಷವಾಗಿ ಯಾವ ಶ್ರುತಿಯಲ್ಲಿಯೂ ಹೇಳದಿದ್ದರೂ ಅನಾದಿ ಕಾಲದಿಂದ ರೂಢಮೂಲವಾಗಿ ಶಿಷ್ಟಾಚಾರಪರಂಪರೆಯು ಬಂದಿರುವುದ ರಿಂದ ಅಂಥದೊಂದು ಶ್ರುತಿವಾಕ್ಯವನ್ನು ಕಲ್ಪಿಸಲು ಅವಕಾಶವುಂಟೆಂದೂ, ಆದರೆ ಇಲ್ಲಿ ಅನಾದಿಕಾಲದಿಂದ ಶಿಷ್ಟಜನಗಳು ಮುಕ್ತಿಸಿದ್ಧಿಗಾಗಿ ಶಿವ

ಲಿಂಗವನ್ನು ಧರಿಸುವ ಸಂಪ್ರದಾಯವು ಕಂಡುಬರದೆ ಇತ್ತೀಚೆಗೆ ಕೆಲವರು ಸ್ವತಂತ್ರವಾಗಿ ಲಿಂಗವನ್ನು ಕಂಠದಲ್ಲಿ ಧರಿಸಿದ ಮಾತ್ರದಿಂದ ಅಂತಹ ಶ್ರುತಿಯೊಂದನ್ನು ಕಲ್ಪಿಸಲು ಅವಕಾಶವಿಲ್ಲವೆಂದೂ ವಾದಿಸುವರು. ಹೀಗೆ ತರಂಗ ತರಂಗವಾಗಿ ವಾದಿಸುವ ವಾದಿಗಳ ಇಂತಹ ವಿಪರ್ಯಾಸಗಳನ್ನು ಯುಕ್ತಿ ಪ್ರಮಾಣ ಅನುಭವಗಳಿಂದ ಪರಿಹರಿಸಿ ವೀರಶೈವರಿಗೆ ಮುಖ್ಯೋಪಾದೇಯವಾದ ಲಿಂಗಧಾರಣವು ಮುಕ್ತಿಸಾಧನವೂ, ವೇದೋಪನಿಷತ್ಪ್ರತಿಪಾದ್ಯವೂ, ಸಕಲವೈದಿಕ ಪರಿಗ್ರಾಹ್ಯವೂ, ಅನಾದಿಸಂಸಿದ್ಧವೂ ಆಗಿರುವುದೆಂಬುದನ್ನು ಸ್ಥಿರಪಡಿಸುವುದೇ ಈ ಗ್ರಂಥದ ಉದ್ದೇಶವು.

ವೇದ ಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ |
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ||

(ಸಿದ್ಧಾಂತಾಗಮ)

ಋಗಾದಿ ವೇದಗಳಲ್ಲಿಯೂ, ಮನ್ವಾದಿ ಸ್ಮೃತಿಗಳಲ್ಲಿಯೂ, ಲೈಂಗ್ಯಾದಿ ಮಹಾಪುರಾಣಗಳಲ್ಲಿಯೂ, ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳಲ್ಲಿಯೂ ವೀರಶೈವರು ಶಿವದೀಕ್ಷಾಪೂರ್ವಕವಾಗಿ ಶಿವಕಲಾ ಸಮಾವಿಷ್ಟವಾದ ಇಷ್ಟಲಿಂಗವನ್ನು ದೇಹದಲ್ಲಿ ಧರಿಸತಕ್ಕದ್ದು. ಮತ್ತು

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ |
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ||
ಶಿವ ಏವ ಸ್ವಯಂ ಲಿಂಗಮಿತಿ ಲಿಂಗಸ್ಯ ವೈಭವಂ |
ನಾನ್ಯಚಿಹ್ನಾದಿಕಂ ಲಿಂಗಂ ಸರ್ವಂ ತತ್ಕೃತಕಂ ಚ ಯತ್ ||

(ಅನುಭವಸೂತ್ರ)

ಜಡಾಜಡಾತ್ಮಕವಾದ ಈ ಪ್ರಪಂಚವು ಸೃಷ್ಟಿಪೂರ್ವದಲ್ಲಿ ನಾಮ ರೂಪಕ್ರಿಯೆಗಳೊಂದೂ ಇಲ್ಲದೆ ಯಾವ ಬ್ರಹ್ಮದಲ್ಲಿರುವ ಅನನ್ಯವಾದ ವಿಮರ್ಶಶಕ್ತಿಯ ಸ್ಫುರಣದಿಂದ ಆಯಾಯ ನಾಮರೂಪಾದಿಗಳಿಂದೊಡಗೂಡಿ ಕಣ್ಣಿಗೆ ಗೋಚರಿಸುತ್ತಿರುವುದೋ ಆ ಬ್ರಹ್ಮವೇ ಲಿಂಗವೆನಿಸುವುದು. "**ಲೀನಮರ್ಥಂ ಗಮಯತೀತಿ ಲಿಂಗಂ**" ಎಂಬ ವ್ಯುತ್ಪತ್ತಿಯಿಂದಲೂ ಇದೇ ಅರ್ಥವು ಸ್ಪಷ್ಟವಾಗುತ್ತದೆ. ಇಂತಹ ಸರ್ವಾಧಿಷ್ಠಾನವಾದ ಲಿಂಗವೇ

ಪರಶಿವನೆನಿಸುವದು. ಇತರ ಚಿಹ್ನೆಗಳೆಲ್ಲವೂ ಕೃತಕವಾದುದರಿಂದ ಅವು ಸಹಜಲಿಂಗವೆನಿಸಲಾರವು, ಲಿಂಗಧಾರಣವೆಂದರೆ — ಪರಶಿವಶಬ್ದವಾಚ್ಯವಾದ ಇಂತಹ ಲಿಂಗವನ್ನು ಎಡಬಿಡದೆ ಹೃದಯಸ್ಥಾನದಲ್ಲಿ ಧರಿಸುವುದೆಂಬ ಅರ್ಥವು ಸ್ಪಷ್ಟವಾಗುತ್ತದೆ.

## ಅಂತರ್ಲಿಂಗಧಾರಣ ನಿರೂಪಣ

ಲಿಂಗಧಾರಣವು ಅಂತರ್ಲಿಂಗಧಾರಣವೆಂತಲೂ, ಬಾಹ್ಯಲಿಂಗಧಾರಣವೆಂತಲೂ ಎರಡು ಪ್ರಕಾರವಾಗಿದೆ. ದಹರಾಕಾಶ (ಹೃದಯ ಪುಂಡರೀಕ) ದಲ್ಲಿ ಜ್ಯೋತೀರೂಪವಾದ ಶಿವಲಿಂಗವನ್ನು ಸದಾ ಧ್ಯಾನಿಸುತ್ತಿರುವುದೇ ಅಂತರ್ಲಿಂಗಧಾರಣವೆನಿಸುವುದು. ಭಕ್ತಾನುಗ್ರಹಕ್ಕೋಸ್ಕರ "ಘೃತ ಕಾಠಿನ್ಯ" (ಕರಗಿದ ತುಪ್ಪವು ಹೆಪ್ಪುಗೊಳ್ಳುವುದು) ನ್ಯಾಯಾನುಸಾರವಾಗಿ ಅದೇ ಜ್ಯೋತಿರ್ಲಿಂಗವೇ ಇಷ್ಟಲಿಂಗರೂಪವಾಗಿ ಪರಿಣಮಿಸಿರುವುದರಿಂದ ಅಂತಹ ಇಷ್ಟ ಲಿಂಗವನ್ನು ಹೃದಯಸ್ಥಾನದಲ್ಲಿ ಧರಿಸುವುದೇ ಬಾಹ್ಯಲಿಂಗ ಧಾರಣವೆನಿಸುವುದು. ಬಾಹ್ಯಲಿಂಗಧಾರಣವಿಲ್ಲದ ಹೊರತು ಅತಿಸೂಕ್ಷ್ಮವಾದ ಅಂತರ್ಲಿಂಗಧಾರಣವು ಸಿದ್ಧಿಸಲಾರದು. ಆದುದರಿಂದ ಮುಮುಕ್ಷು ಪುರುಷನಿಗೆ ಎರಡು ವಿಧವಾದ ಲಿಂಗಧಾರಣವೂ ಅತ್ಯಾವಶ್ಯಕವಾದುದರಿಂದ ಈ ಉಭಯವಿಧ ಲಿಂಗಧಾರಣವೂ ಶ್ರುತಿಪ್ರತಿಪಾದ್ಯವೆಂದು ಸಾಧಿಸಲು ಉಪಕ್ರಮಿಸಿ ಮೊದಲು ತೈತ್ತಿರೀಯೋಪನಿಷತ್ಪ್ರಮಾಣದಿಂದ ಅಂತರ್ಲಿಂಗಧಾರಣವನ್ನು ಸಾಧಿಸಿ ಅನಂತರದಲ್ಲಿ ಬಹಿರ್ಲಿಂಗಧಾರಣವನ್ನು ಸಾಧಿಸಲಾಗುತ್ತದೆ.

**ದಹರಂ ವಿಪಾಪ್ಮಂ ಪರವೇಶ್ಮಭೂತಂ ಹೃತ್ಪುಂಡರೀಕಂ**
**ಪುರಮಧ್ಯಸಂಸ್ಥಂ । ತತ್ರಾಪಿ ದಹ್ರೇ ಗಗನಂ ವಿಶೋಕಃ**
**ತಸ್ಮಿನ್ ಯದಂತಸ್ತದುಪಾಸಿತವ್ಯಮ್ ॥**

(ತೈ. ಉಪ. ೪-೧೧-೨೪)

ದಹರಂ – ಸೂಕ್ಷ್ಮವಾಗಿರುವ, ವಿಪಾಪ್ಮಂ – ದುಃಖಹೇತುವಾದ ಪಾಪಕ್ಕೆ ಸಂಬಂಧಿಸದ, ಪರವೇಶ್ಮಭೂತಂ–ಪರ–ಶ್ರೇಷ್ಠನಾದ ಪರಶಿವನ, ವೇಶ್ಮಭೂತಂ – ನಿತ್ಯಾವಾಸಸ್ಥಾನವಾಗಿರುವ, ಪುರಮಧ್ಯಸಂಸ್ಥಂ–ಪುರ–

"ಪೂರ್ಯತ ಇತಿ ಪುರಂ" ಎಂಬ ವ್ಯುತ್ಪತ್ತಿಗನುಗುಣವಾಗಿ ಹಸ್ತಪಾದಾದಿ ಅವಯವಗಳಿಂದ ಕೂಡಿರುವ ಈ ದೇಹದ, ಮಧ್ಯ–ಎದೆ ಹೊಟ್ಟೆ ಇವೆರಡರ ನಡುವೆ, ಸಂಸ್ಥಂ–ಶೋಭಿಸುತ್ತಿರುವ, ಯತ್–ಯಾವ, ಪುಂಡರೀಕಂ-ಹೃತ್ಕಮಲವಿರುತ್ತದೆಯೋ, ತತ್ರಾಪಿ–ಅಂತಹ ಹೃದಯ ಕಮಲದಲ್ಲಿ ದಭ್ರೇ–ಸುಕ್ಷ್ಮ ಪ್ರದೇಶದಲ್ಲಿ, ಗಗನಂ–ಆಕಾಶದಂತೆ ಅಮೂರ್ತವಾದೊಂದು ದಿವ್ಯಜ್ಯೋತಿಯಿರುತ್ತದೆ, ತತ್–ಅಂತಹ ದಿವ್ಯಜ್ಯೋತಿಯು, ವಿಶೋಕಃ-ಶೋಕಮೋಹಾದಿಗಳಿಗೆ ಅತಿದೂರವಾದುದು, ತಸ್ಮಿನ್–ಅಂತಹ ದಿವ್ಯ ಜ್ಯೋತಿಗಾವಾಸವಾದ ಆ ಹೃದಯಚಕ್ರದಲ್ಲಿ, ಯತ್–ಯಾವ ವಸ್ತುವು ಇರುತ್ತದೆಯೋ, ತತ್–ಆ ವಸ್ತುವು, ಉಪಾಸಿತವ್ಯಮ್–ಸೋಽಹಂ ಭಾವನೆಯಿಂದ ಅನವರತವೂ ಧ್ಯಾನಿಸಸತಕ್ಕದ್ದು.

ವಿಚಾರ—ಈ ಮಂತ್ರದಲ್ಲಿ "ಗಗನಂ ವಿಶೋಕಃ" ಎಂದರೆ ಹೃದಯಕಮಲದಲ್ಲಿ ಗಗನಶಬ್ದವಾಚ್ಯವಾದ ಬ್ರಹ್ಮತತ್ತ್ವವಿರುವುದೆಂಬ ವಾಕ್ಯವಿದ್ದು ಮುಂದೆ "ತಸ್ಮಿನ್ ಯದಂತಸ್ತದುಪಾಸಿತವ್ಯಂ" ಎಂಬ ವಾಕ್ಯವಿರುವುದನ್ನು ನೋಡಿದರೆ ಆ ಬ್ರಹ್ಮಕ್ಕಿಂತಲೂ ಬೇರೆಯಾಗಿ ಮತ್ತೊಂದು ವಸ್ತುವಿರುವುದೆಂಬ ಭ್ರಾಂತಿಯುಂಟಾಗುತ್ತದೆ. ಇಂತಹ ಭ್ರಾಂತಿಯುಂಟಾಗಬಾರದೆಂದು ಭಾಷ್ಯಕಾರರು "ಗಗನಂ ವಿಶೋಕಃ" ಎಂಬುವವರೆಗೂ ಒಂದು ವಾಕ್ಯವನ್ನು ಪೂರ್ಣಮಾಡಿ, ಮುಂದೆ "ತಸ್ಮಿನ್ ಯದಂತಸ್ತದುಪಾಸಿತವ್ಯಂ" ಎಂಬ ವಾಕ್ಯದಲ್ಲಿರುವ "ತಸ್ಮಿನ್" ಎಂಬ ಪದದ ಹಿಂದೆ ಅವ್ಯವಹಿತವಾದ ಗಗನಪದವನ್ನು ತೆಗೆದುಕೊಳ್ಳದೆ, ಈ ಗಗನ ಪದಕ್ಕೂ ಹಿಂದಿರುವ ವ್ಯವಹಿತವಾದ ಪುಂಡರೀಕ ಪದವನ್ನೇ ತೆಗೆದುಕೊಂಡು ಮಂತ್ರಾರ್ಥವನ್ನು ಅನ್ವಯಿಸತಕ್ಕುದೆಂದು ನಿಶ್ಚೈಸಿರುತ್ತಾರೆ.

ಈ ಮಂತ್ರಾರ್ಥವಿಚಾರದಿಂದ ದಹರಾಕಾಶದಲ್ಲಿ ಅತಿಸೂಕ್ಷ್ಮವೂ, ಪಾಪಲೇಪರಹಿತವೂ, ಪರಿಚ್ಛೇದಶೂನ್ಯವೂ ಪೂರ್ಣಕುಂಭದಂತೆ ಶಾಂತವೂ ಆಗಿರುವ ಜ್ಯೋತೀರೂಪವಾಗಿರುವ ವಸ್ತುವನ್ನು ಅನವರತವೂ ಉಪಾಸಿಸುತ್ತಿರಬೇಕೆಂದು ಸಿದ್ಧವಾಯಿತಲ್ಲದೆ; ಉಪಾಸಿಸಲ್ಪಡುವ ವಸ್ತುವು ಯಾರೆಂಬುದು ಸಿದ್ಧವಾಗಲಿಲ್ಲ. ಉಪಾಸಕನು ಒಂದು ವಸ್ತುವನ್ನು ಉಪಾಸಿಸಬೇಕಾದರೆ ಆ ವಸ್ತುವು ಯಾವುದು? ಅದರ ಸ್ವರೂಪವೇನು?

ಅದರ ನಾಮರೂಪಗಳೇನು? ಎಂಬುದನ್ನು ಮೊದಲು ತಿಳಿಯಪಡಿಸಿದರೆ ಉಪಾಸಕನಿಗೆ ಆ ವಸ್ತುವಿನಲ್ಲಿ ಪ್ರವೃತ್ತಿಯುಂಟಾಗುತ್ತದೆ ಆದುದರಿಂದ ದಹರಾಕಾಶದಲ್ಲಿ ಬೆಳಗುತ್ತಿರುವ ಜ್ಯೋತಿಯು ಯಾವುದೆಂಬುದನ್ನು ತಿಳಿಸುವುದಕ್ಕಾಗಿ ಅದೇ ಶ್ರುತಿಯು ಮುಂದೆ ಆ ಉಪಾಸ್ಯವಸ್ತುವು ಇಂತಹುದೆಂಬುದನ್ನು ದೃಢವಡಿಸುತ್ತದೆ.

**ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ।**
**ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥**

ತೈ. ಉ. ೪-೧೦-೨೪

ಯಃ-ಯಾವ ಸ್ವರವು ವೇದದೌ ವೇದಗಳ ಪ್ರಾರಂಭದಲ್ಲಿಯೂ, ಚ - ಮತ್ತು ವೇದಾಂತೇ - ಈಶ ಕೇನಾದ್ಯುಪನಿಷತ್ತುಗಳಲ್ಲಿಯೂ, ಪ್ರೋಕ್ತಃ-ಹೇಳಲ್ಪಟ್ಟಿರುವುದೋ, ಪ್ರಕೃತಿಲೀನಸ್ಯ-ಅಕಾರ, ಉಕಾರ, ಮಕಾರರೂಪಗಳಾದ ಅವಯವವುಳ್ಳ, ತಸ್ಯ- ಅಂತಹ ಓಂಕಾರರೂಪವಾದ ಸ್ವರಕ್ಕೆ, ಯಃ-ಯಾವ ದೇವತೆಯು, ಪರಃ-ವಾಚ್ಯಾರ್ಥವಾಗಿದೆಯೋ, ಸಃ-ಅಂತಹ ದೇವತೆಯು, ಮಹೇಶ್ವರಃ-ಪರಶಿವನೇ ಆಗಿರುವನು.

**ಶಂಕೆ**—ಈ ಮಂತ್ರದಲ್ಲಿರುವ ಪದಗಳ ಪರ್ಯಾಲೋಚನೆಯಿಂದ ಹಿಂದಿನ ಮಂತ್ರದಲ್ಲಿ ಹೇಳಿರುವ ದಹರಾಕಾಶದಲ್ಲಿ ಉಪಾಸಿಸಲ್ಪಡುವ ವಸ್ತುವು "**ಮಹೇಶ್ವರ**" ರೂಪವಾದ ವಸ್ತುವೆಂದು ಗೊತ್ತಾಗುತ್ತದೆ. ಈ ಮಹೇಶ್ವರಪದವು "**ಮಹಾಂಶ್ಚಾಸೌ ಈಶ್ವರಶ್ಚ**" ಎಂಬ ಕರ್ಮಧಾರಯಸಮಾಸವನ್ನು ಆಶ್ರಯಿಸಿ ಅವಯವ ಶಕ್ತಿಯಿಂದ ವಿಷ್ಣು ಇಂದ್ರ ಮುಂತಾದ ಯಾವ ದೇವತೆಯನ್ನಾದರೂ ಉಪಾಸಿಸಬಹುದೆಂದು ಅರ್ಥವಾಗುತ್ತದೆಯಲ್ಲದೆ ನಿಯಮದಿಂದ ಪರಶಿವನೊಬ್ಬನೇ ಉಪಾಸ್ಯನೆಂಬ ಅರ್ಥವನ್ನು ಕೊಡುವುದಿಲ್ಲ.

**ಸಮಾಧಾನ**—ಯದ್ಯಪಿ ಮಹೇಶ್ವರಪದಕ್ಕೆ ಅವಯವಾರ್ಥದಿಂದ ಇತರ ದೇವತೆಯೆಂದು ಅರ್ಥಮಾಡಲು ಅವಕಾಶವಿದ್ದರೂ "**ರೂಢಿರ್ಯೋಗ ಮಪಹರತಿ**" ಎಂಬ ಪ್ರಮಾಣದಿಂದ ರೂಢ್ಯರ್ಥವು ಅವಯವಾ (ಯೋಗಾ) ರ್ಥವನ್ನು ದುರ್ಬಲಗೊಳಿಸುವುದರಿಂದ ಮಂತ್ರದಲ್ಲಿರುವ

" ಮಹೇಶ್ವರ " ಎಂಬ ಪದವು ಶಿವನಲ್ಲಿ ರೂಢವಾಗಿರುವಂತೆ ಇತರ ಯಾವ ದೇವತೆಗಳಲ್ಲಿಯೂ ರೂಢವಾಗಿರುವುದಿಲ್ಲ. ಆದುದರಿಂದ ಮಹೇಶ್ವರ ಪದಕ್ಕೆ ಶಿವನೆಂದು ಅರ್ಥಮಾಡುವುದೇ ಸಾಧುವಾದುದು. ಈ ವಿಷಯ ದಲ್ಲಿ ಅನೇಕ ಆದ್ಯೋಕ್ತಿಗಳಿರುವುದಲ್ಲದೆ " ಶಂಭುರೀಶಃ ಪಶುಪತಿಶ್ಶಿವ ಶ್ಶೂಲೀ ಮಹೇಶ್ವರಃ " ಎಂಬ ಅಮರಕೋಶದಿಂದಲೂ ಮಹೇಶ್ವರ ಪದವು ಪರಶಿವನ ಪರ್ಯ್ಯಾಯನಾಮವಾಗಿರುತ್ತದೆಯಲ್ಲದೆ ಇನ್ನಾವದೇವತೆ ಗಳ ಪರ್ಯಾಯನಾಮವಾಗಿಲ್ಲವೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಶಿವನೊಬ್ಬನಲ್ಲಿಯೇ ಶಕ್ತಿಯುಳ್ಳ ಇಂತಹ ಮಹೇಶ್ವರಪದವು ಈ ಮಂತ್ರ ದಲ್ಲಿ ಪ್ರಧಾನಭೂತವಾದ ವಿಶೇಷ್ಯಪದವಾದುದರಿಂದ ಇಂತಹ ಸಮೀಪ ದಲ್ಲಿರುವ ಮಹೇಶ್ವರಶಬ್ದವಾಚ್ಯನಾದ ಶಿವನನ್ನು ಬಿಟ್ಟು ವಿಷ್ಣ್ವಾದಿ ಇತರ ದೇವತೆಗಳನ್ನು ದಹರಾಕಾಶದಲ್ಲಿ ಉಪಾಸ್ಯವಸ್ತುವನ್ನಾಗಿ ಸ್ವೀಕರಿಸು ವುದು ಸನ್ನಿಹಿತಪದದಲ್ಲಿಯೇ ಅನ್ವಯಿಸಬೇಕೆಂಬ " ಪ್ರತ್ಯಾಸತ್ತಿ ನ್ಯಾಯಕ್ಕೆ" ವಿರೋಧವಾಗುತ್ತದೆ. ಆದುದರಿಂದ ಈ ನ್ಯಾಯವನ್ನನು ಸರಿಸಿ " ದಹರಂ....................ತದುಪಾಸಿತವ್ಯಂ " ಎಂಬ ಹಿಂದಿನ ಮಂತ್ರಕ್ಕೆ ದಹರಾಕಾಶದಲ್ಲಿ ಬೆಳಗುತ್ತಿರುವ ಜ್ಯೋತೀರೂಪವಸ್ತುವು ಶಿವರೂಪವಾದ ವಸ್ತುವೆಂದೇ ನಿಶ್ಚಯವಾಗುತ್ತದೆ. " ತಂ ಯಥೋ ಪಾಸತೇ ತತ್ತದೇವ ಭವತಿ " ಎಂದರೆ ಉಪಾಸಕನು ಪರಮಾತ್ಮನನ್ನು ಯಾವ ಯಾವ ಗುಣ ಮತ್ತು ಆಕಾರವುಳ್ಳವನನ್ನಾಗಿ ಉಪಾಸನೆ ಮಾಡು ವನೋ ಆಯಾಯ ಗುಣ ಮತ್ತು ಆಯಾಯ ಆಕಾರವನ್ನೇ ಆತನು ಪಡೆ ಯುತ್ತಾನೆಂದು ಪರಮಾಪ್ತವಾದ ಶ್ರುತಿಯು ಅನುಜ್ಞೆಯಿತ್ತಿರುವುದು. ಮತ್ತು ಉಪಾಸ್ಯವಸ್ತುವಿನಲ್ಲಿ ಅಸಾಧಾರಣವಾದ ಗುಣಗಳಿಲ್ಲದಿದ್ದರೆ ಉಪಾಸಕನಿಗೆ ಆ ವಸ್ತುವಿನಲ್ಲಿ ಪ್ರವೃತ್ತಿಯುಂಟಾಗುವುದಿಲ್ಲವಾದುದರಿಂದ ಆ ಮಹೇಶ್ವರನಲ್ಲಿ ಅನಂತ ಕಲ್ಯಾಣಗುಣಗಳನ್ನು ತೋರಿಸುವುದಕ್ಕಾಗಿ ಅದೇ ತೈತ್ತಿರೀಯ ಶ್ರುತಿಯು ಮುಂದೆ ಆ ಮಹೇಶ್ವರನ ಗುಣಾವಳಿಯನ್ನು ತೋರಿಸುತ್ತದೆ.

**ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।**
**ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ ॥**

(ತೈ. ಆ. ೭-೧೨)

ಋತಂ— ವಾಗ್ವಿಪರ್ಯಾಸವಿಲ್ಲದುದು, ಸತ್ಯಂ-ಮನೋವಿಪರ್ಯಾಸ ವಿಲ್ಲದುದು, ಪರಂ-ಶ್ರೇಷ್ಠವಾದುದು, ಬ್ರಹ್ಮ-ದೊಡ್ಡದಕ್ಕಿಂತ 'ದೊಡ್ಡದು' ತಾನೇ ಪ್ರಪಂಚಾಕಾರವಾಗಿ ಪರಿಣಮಿಸಿದುದು. ಪುರುಷಂ-ಸಕಲಪ್ರಾಣಿ ಗಳ ಹೃದಯಾಕಾಶದಲ್ಲಿ ವಾಸವಾಗಿರುವುದು, ಕೃಷ್ಣಪಿಂಗಲಂ-ಬಲಭಾಗದಲ್ಲಿ ಕಪ್ಪಾಗಿಯೂ ಎಡಭಾಗದಲ್ಲಿ ಹೊಂಬಣ್ಣವಾಗಿಯೂ ಇರುವುದು. ಊರ್ಧ್ವ ರೇತಂ-ಉರ್ಧ್ವರೇತಸ್ಸುಳ್ಳುದು, ವಿರೂಪಾಕ್ಷಂ-ಸೂರ್ಯ ಚಂದ್ರ ಅಗ್ನಿ ಗಳೆಂಬ ಕಣ್ಣುಳ್ಳುದೂ ಆದ ಯಾವ ವಸ್ತುವುಂಟೋ, ತಸ್ಮೈ-ಅಂತಹ, ವಿಶ್ವರೂಪಾಯ-ಜಗತ್ಸ್ವರೂಪವಾಗಿರುವ ಬ್ರಹ್ಮಪದವಾಚ್ಯವಾದ ಮಹೇ ಶ್ವರ ವಸ್ತುವಿಗೆ, ನಮಃ-ನಮಸ್ಕಾರವು.

**ವಿಚಾರ**— ಈ ಮಂತ್ರದಲ್ಲಿ "ಋತಂ, ಸತ್ಯಂ" ಎಂಬ ಎರಡು ವಿಶೇಷಣಗಳಿವೆ. ಇವೆರಡು ಪದಗಳು ಸತ್ಯವೆಂಬ ಒಂದೇ ಅರ್ಥ ವನ್ನು ಕೊಡುವುದರಿಂದ "ಋತಂ" ಎಂಬ ಪದಕ್ಕೆ ವ್ಯಾವಹಾರಿಕಸತ್ಯ ವೆಂದೂ, "ಸತ್ಯಂ" ಎಂಬ ಪದಕ್ಕೆ ಪಾರಮಾರ್ಥಿಕ ಸತ್ಯವೆಂದೂ ಕೆಲವರು ಅರ್ಥಮಾಡುತ್ತಾರೆ. ಈ ಅರ್ಥವು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿರೋಧವಾಗುವುದರಿಂದ ಈ ಭಾಷ್ಯಕಾರರು ಆ ಪದಕ್ಕೆ ಬೇರೆ ಅರ್ಥವನ್ನು ಅಂಗೀಕರಿಸಿದ್ದಾರೆ. ಅಂದರೆ-ಪ್ರಪಂಚದಲ್ಲಿರುವ ಸಕಲಮಾನವರು ಕಿಂಚಿ ಜ್ಞರಾದುದರಿಂದ ಅವರು ತಮ್ಮ ತಮ್ಮ ಮಾತುಗಳಲ್ಲಿಯೂ ಮನಸ್ಸು ಗಳಲ್ಲಿಯೂ ಅನೇಕ ಬದಲಾವಣೆಗಳನ್ನು ಹೊಂದಿರುತ್ತಾರೆ. ಬ್ರಹ್ಮಶಬ್ದ ವಾಚ್ಯನಾದ ಪರಶಿವನಾದರೋ ಅಂತಹ ವಾಗ್ವಿಪರ್ಯಾಸವುಳ್ಳವನಲ್ಲ ವೆಂಬುದು "ಋತಂ" ಎಂಬ ಶಬ್ದದಿಂದಲೂ, ಯಾವ ಕಾಲದಲ್ಲಿಯೂ ಅಂತಹ ಮನೋವಿಪರ್ಯಾಸವುಳ್ಳವನಲ್ಲವೆಂದು "ಸತ್ಯಂ" ಎಂಬ ಪದ ದಿಂದಲೂ ವ್ಯಕ್ತವಾಗುತ್ತದೆ. ಮತ್ತು "ಪುರುಷಂ" ಎಂಬ ಪದಕ್ಕೆ "**ಪುರಿ ಶೇತ ಇತಿ ಪುರುಷಃ**" ಎಂಬ ವ್ಯುತ್ಪತ್ತಿಗನುಗುಣವಾಗಿ ಸಕಲ ಪ್ರಾಣಿಗಳ ಹೃದಯದಲ್ಲಿ ಪ್ರಕಾಶಿಸುತ್ತಿರುವುದು. ಬ್ರಹ್ಮವೆಂಬ ಪದಕ್ಕೆ "**ಬೃಹತ್ವಾತ್ ಬೃಹ್ಮಣತ್ವಾಚ್ಚೈವಾತ್ಮಾ ಬ್ರಹ್ಮೇತಿಗೀಯತೇ**" ಎಂಬ ವ್ಯುತ್ಪತ್ತಿಗನುಗುಣವಾಗಿ ದೊಡ್ಡದಕ್ಕಿಂತ ದೊಡ್ಡದಾಗಿಯೂ ತಾನೇ ಪ್ರಪಂಚಾಕಾರನಾಗಿ ಪರಿಣಮಿಸಿದುದಾಗಿಯೂ "**ಕೃಷ್ಣ ಪಿಂಗಳಂ**" ಎಂಬ

ಪದಕ್ಕೆ ಅಗ್ನಿಯಲ್ಲಿ ದಾಹಜನಕ ಶಕ್ತಿಯಿರುವಂತೆ ಪರಶಿವನಲ್ಲಿ ಒಂದು ಅನನ್ಯವಾದ ಶಕ್ತಿಯಿರುವುದರಿಂದ ಅಂತಹ ಶಕ್ತಿವಿಕಾಸದಿಂದ ಶಿವನು ಪ್ರಪಂಚಾಕಾರವಾಗಿ ಪರಿಣಮಿಸಿರುತ್ತಾನೆ. "ಸರ್ವೋ ವೈ ರುದ್ರಃ" "ತಸ್ಯಾವಯವಭೂತೇನ" ಇತ್ಯಾದಿ ಶ್ರುತಿಗಳು ಇದೇ ಅರ್ಥವನ್ನು ಪ್ರತಿಪಾದಿಸಿರುತ್ತವೆ. ಇಂತಹ ನಿಜಶಕ್ತಿಯಿಂದ ಪರಶಿವನು ಶಬಲ (ಚಿತ್ರ) ವರ್ಣವುಳ್ಳವನಾದುದರಿಂದ ಬಲಭಾಗದಲ್ಲಿ ಕಪ್ಪಾಗಿಯೂ, ಎಡ ಭಾಗದಲ್ಲಿ ಪಿಂಗಲವರ್ಣವಾಗಿಯೂ ಇರುವನೆಂದು ಅರ್ಥವು. "ಊರ್ಧ್ವ ರೇತಂ" ಎಂಬ ಪದಕ್ಕೆ ಕೆಲವರು ಭಾಷ್ಯಕಾರರು ಬ್ರಹ್ಮವು ಯೋಗಬಲ ದಿಂದ ಊರ್ಧ್ವರೇತಸ್ಸುಳ್ಳುದೆಂಬ ಅರ್ಥವನ್ನು ಹೇಳಿರುತ್ತಾರೆ. ಇಲ್ಲಿ "ಕೃಶಾನುರೇತಾಸ್ಸರ್ವಜ್ಞಃ" ಎಂಬ ಅಮರಕೋಶಪ್ರಮಾಣಾನುಸಾರ ವಾಗಿ ಶಿವನು ಅಗ್ನಿಯೇ ರೇತಸ್ಸುಳ್ಳವನಾದುದರಿಂದ "ಕೃಶಾನುರೇತಾಃ" ಎನಿಸಿಕೊಳ್ಳುತ್ತಾನೆ. ಇಂತಹ ಅಗ್ನಿರೂಪವಾದ ರೇತಸ್ಸಿನ ಜ್ವಾಲೆ ಯಾದರೊ ಊರ್ಧ್ವಾಕಾರವಾದ ಜ್ವಾಲೆಯುಳ್ಳುದ್ದಾದ್ದರಿಂದ ಪರಶಿವ ಬ್ರಹ್ಮವು ಊರ್ಧ್ವರೇತಸ್ಕವೆನಿಸುವದೆಂದೂ "ವಿರೂಪಾಕ್ಷಂ" ಎಂಬ ಪದಕ್ಕೆ "ವಿರೂಪಾಕ್ಷಸ್ತ್ರಿಲೋಚನಃ" ಎಂಬ ಕೋಶೋಕ್ತಿಯಂತೆ ಸಕಲಜಗತ್ತಿಗೆ ಆಧಾರಭೂತಗಳಾದ ಸೂರ್ಯ ಚಂದ್ರ ಅಗ್ನಿಗಳೇ ಕಣ್ಣು ಳ್ಳವನೆಂದೂ "ವಿಶ್ವರೂಪಾಯ" ಎಂಬ ಪದಕ್ಕೆ ತಾನೇ ವಿಶ್ವಾಕಾರವಾಗಿ ಪರಿಣಮಿಸಿರುವುದರಿಂದ ಉಪಾದಾನಕಾರಣವಾಗಿಯೂ, ಜಗನ್ನಿಯಾಮಕ ನಾದುದರಿಂದ ನಿಮಿತ್ತಕಾರಣನಾಗಿಯೂ ಇರುವದೆಂದೂ "ಸರ್ವೋ ವೈ ರುದ್ರಃ" "ವಿಶ್ವಾಧಿಕೋ ರುದ್ರಃ" ಎಂಬ ಶ್ರುತಿಗಳೂ ಸಹ ಶಿವನಿಗೆ ವಿಶ್ವರೂಪತ್ವವನ್ನೂ, ವಿಶ್ವಾಧಿಪತಿತ್ವವನ್ನೂ ಪ್ರತಿಪಾದಿಸುತ್ತವೆಯಾದುದ ರಿಂದ ಇಂತಹ ಪರಶಿವನಿಗೆ ನಮಸ್ಕಾರಮಾಡುವೆನೆಂದು ಶ್ರುತಿಯು ಪರ ಶಿವನನ್ನು ಸ್ತುತಿಸಿರುತ್ತದೆ. ಹೀಗೆ ಮಂತ್ರದಲ್ಲಿ ಬಂದಿರುವ ಋತ, ಸತ್ಯ, ಪುರುಷ, ಕೃಷ್ಣಪಿಂಗಳ, ಊರ್ಧ್ವರೇತ, ವಿರೂಪಾಕ್ಷ, ವಿಶ್ವರೂಪ ಎಂಬ ವಿಶೇಷಣಗಳು ಶಿವನಲ್ಲಿರುವ ಅಸಾಧಾರಣವಾದ ಗುಣಗಳನ್ನು ಬೋಧಿಸು ವುದರಿಂದ ದಹರಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವು ಶಕ್ತಿವಿಶಿಷ್ಟ ಪರಶಿವನೇ ಹೊರತು ಬೇರೆ ವಸ್ತುವಲ್ಲವೆಂದು ಸ್ಪಷ್ಟವಾಗುತ್ತದೆ.

**ಶಂಕೆ :**—ಓಹೋ! ಇದೇನು ? ದಹರಾಕಾಶದಲ್ಲಿ ಉಪಾಸಿಸಲ್ಪಡುವ ವಸ್ತುವು ಪರಶಿವನೆಂದು ಒಪ್ಪುತ್ತೇವೆ. ಆದರೆ ಆ ಶಿವನು ಮೂರು ಕಣ್ಣುಗಳುಳ್ಳವನು. ಉಮಾರೂಪವಾದ ಸ್ಥೂಲಪರಿಣಾಮವನ್ನು ಹೊಂದಿದ ಶಕ್ತಿಯುಳ್ಳವನು. ಕೃಶಾನುರೇತಸ್ಸುಳ್ಳವನೂ, ಮಾನವರಂತೆ ವಾಗ್ವಿಪರ್ಯಾಸ, ಮನೋವಿಪರ್ಯಾಸಗಳಿಲ್ಲದವನು, ಎಂದು ಹೇಳಿರುವುದನ್ನು ನೋಡಿದರೆ ಶಿವನಿಗೂ ಒಂದು ಶರೀರವನ್ನು ಕಲ್ಪಿಸಿದಂತಾಗುವುದು. ಹಾಗೆ ಶಿವನಿಗೆ ಸ್ಥೂಲಶರೀರವಿರುವದಾದರೆ ಮಾನವಶರೀರಿಗಳಿಗುಂಟಾಗುವಂತೆ ಅವನಿಗೆ ಸುಖ ದುಃಖಾದಿ ಭೋಗಗಳುಂಟಾಗಬಹುದಲ್ಲವೆ ?

**ಸಮಾಧಾನ** — ಶರೀರವನ್ನು ಧರಿಸಿದ ಮೇಲೆ ಸುಖ ದುಃಖ ಭೋಗಾದಿಗಳನ್ನು ಅನುಭವಿಸಬೇಕೆಂಬುದನ್ನು ಅಂಗೀಕರಿಸಲೇಬೇಕು. ಆದರೆ ಸುಖ ದುಃಖ ಭೋಗಗಳೆಲ್ಲ ಜೀವ ಶರೀರಿಗಳಿಗೆ ಉಂಟಾಗುವುವಲ್ಲದೆ ಮಿಕ್ಕ ಶರೀರಿಗಳಿಗೆ ಬರಲಾರವು. ಪರಶಿವ ಬ್ರಹ್ಮದ ಶರೀರಕ್ಕೂ ಸುಖ ದುಃಖ ಭೋಗಗಳಿಗೆ ಕಾರಣವಾದ ಜೀವ ಶರೀರಗಳಿಗೂ ಬಹಳ ತಾರತಮ್ಯವುಂಟು. ಪರಶಿವನಲ್ಲಿರುವ ತ್ರಿಲೋಚನತ್ವ, ಕೃಷ್ಣ ಪಿಂಗಲತ್ವ, ಊರ್ಧ್ವರೇತಸ್ತ್ವಾದಿ ಗುಣಗಳು ತನ್ನ ಇಚ್ಛಾವಶದಿಂದ ಬಂದಿರುತ್ತವೆ. ಜೀವರಿಗೆ ಬಂದಿರುವ ಶರೀರಗಳಾದರೋ ಅವರವರು ಮಾಡುವ ಪುಣ್ಯ ಪಾಪ ಕರ್ಮಗಳಿಂದ ಬಂದಿರುತ್ತವೆ. ಪರಶಿವನು ತ್ರಿಲೋಚನತ್ವಾದಿ ಶರೀರವುಳ್ಳವನಾಗಿದ್ದರೂ

**"ಏಷ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ।**
**ವಿಜಿಘುತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ"**

(ಛಾಂದೋಗ್ಯ)

ಪರಮಾತ್ಮನು ಪಾಪರಹಿತನೂ, ಮುಪ್ಪಿಲ್ಲದವನೂ, ಮರಣವಿಲ್ಲದವನೂ, ಶೋಕರಹಿತನೂ, ಹಸಿವಿಲ್ಲದವನೂ, ಬಾಯಾರಿಕೆಯಿಲ್ಲದವನೂ, ಸತ್ಯಕಾಮನೂ, ಸತ್ಯಸಂಕಲ್ಪನೂ ಆಗಿರುತ್ತಾನೆ. ಜೀವಾತ್ಮನಾದರೋ ಪಾಪಪುಣ್ಯಕರ್ಮದಿಂದುಂಟಾದ ಶರೀರಗಳನ್ನು ಧರಿಸಿ ಆ ಪಾಪಪುಣ್ಯಗಳಿಗೆ ಅನುಗುಣವಾಗಿ **"ರಮಣೀಯಚರಣಾಃ ರಮಣೀಯಾಂ ಯೋನಿಮಾಪದ್ಯಂತೇ"** **"ಕಪೂಯಚರಣಾಃ ಕಪೂಯಾಂ ಯೋನಿಂ"**

ಎಂದು ಅದೇ ಛಾಂದೋಗ್ಯದಲ್ಲಿ ಹೇಳಿರುವಂತೆ ಸುಖದುಃಖಗಳನ್ನನುಭವಿಸುತ್ತಾನೆ. ಪರಶಿವನು ಇಂತಹ ಹೇಯವಾದ ಶರೀರವನ್ನುಧರಿಸದೆ ಸ್ವೇಚ್ಛಾಕಲ್ಪಿತಲೀಲಾಮಂಗಲರೂಪಗಳಾದ ಅಪ್ರಾಕೃತದಿವ್ಯಶರೀರಗಳನ್ನು ಹೊಂದಿರುವುದರಿಂದ ಕರ್ಮಜನ್ಯವಾದ ಜೀವಶರೀರಗಳಿಗಿರುವ ದೋಷಗಳು ಇವನನ್ನೆಂದೂ ಸ್ಪರ್ಶಿಸುವುದಿಲ್ಲ. " ಸ್ಥಿರೇಭಿರಂಗೈಃ ಪುರುರೂಪ ಉಗ್ರಃ " ಎಂಬ ಋಕ್ ಸಂಹಿತೆಯು ಇದೇ ಅರ್ಥವನ್ನೇ ಪ್ರತಿಪಾದಿಸಿರುತ್ತದೆ.

ಶಂಕೆ — ದಹರಾಕಾಶದಲ್ಲಿ ಉಪಾಸಿಸಲ್ಪಡುವ ವಸ್ತುವು ಪರಶಿವರೂಪವಾದ ವಸ್ತುವೆಂದು ನಿಶ್ಚಯವಾದರೂ ಅದೇ ತೈತ್ತಿರೀಯ ಶ್ರುತಿಯಲ್ಲಿ

ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ ।
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪ್ರಭುಮ್ ॥

ವಿಶ್ವತಃ ಪರಮಂ ನಿತ್ಯಂ ವಿಶ್ವಂ ನಾರಾಯಣಂ ಹರಿಂ ।
ವಿಶ್ವಮೇವೇದಂ ಪುರಷಃ ತದ್ವಿಶ್ವಮುಪಜೀವತಿ ॥

ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಂ ।
ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್ ॥

ನಾರಾಯಣಃ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ।
ನಾರಾಯಣಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ ॥

ನಾರಾಯಣಪರೋ ಧ್ಯಾತಾ ಧ್ಯಾನಂ ನಾರಾಯಣಃ ಪರಃ ।
ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ॥ ೧ ॥

(ತೈ. ಉ. ೪—೧೧—೨೯)

ಯಾವನು ಸಾವಿರಾರು ತಲೆಗಳುಳ್ಳವನೂ, ಸಾವಿರಾರು ಕಣ್ಣುಳ್ಳವನೂ, ಪ್ರಪಂಚಕ್ಕೆ ಸುಖವನ್ನು ಕೊಡುವವನೂ, ಪ್ರಪಂಚ ಸ್ವರೂಪನೂ, ನಾಶರಹಿತನೂ, ಶ್ರೇಷ್ಠನೂ, ನಿಗ್ರಹಾನುಗ್ರಹಶಕ್ತನೂ, ವ್ಯಾಪಕನೂ, ಸತ್ಯಸ್ವರೂಪನೂ, ವಿಶ್ವಕಾರಣನೂ, ಪುರುಷಶಬ್ದವಾಚ್ಯನೂ, ಪತಿಶಬ್ದವಾಚ್ಯನೂ, ಜೀವಾಧಿಪತಿಯೂ, ಶಾಶ್ವತನೂ, ನಿತ್ಯಮಂಗಳಸ್ವರೂಪನೂ, ಅಚ್ಯುತನೂ, ನಾರಾಯಣನಾಮಧೇಯನೂ, ಆಗಿರುತ್ತಾನೆಯೋ, ಆತನೇ

ಆತ್ಮನು, ಆತನೇ ಜ್ಯೋತಿ ಸ್ವರೂಪನು. ಆತನೇ ಪರಬ್ರಹ್ಮವೂ, ಪರ ವಸ್ತುವೂ, ಧ್ಯೇಯಸ್ವರೂಪವೂ, ಧ್ಯಾನಸ್ವರೂಪವೂ, ಧ್ಯಾತೃಸ್ವರೂಪವೂ ಆಗಿ ಕಾಣಲ್ಪಡುತ್ತಿರುವ ಚರಾಚರಾತ್ಮಕ ಜಗತ್ತೆಲ್ಲವೂ ನಾರಾಯಣಸ್ವರೂಪವೇ ಆಗಿರುತ್ತದೆ.

ಎಂದು ನಾರಯಣನೇ ಪರಬ್ರಹ್ಮವೆಂದು ಹೇಳುವುದರಿಂದ ದಹರಾಕಾಶದಲ್ಲಿ ಧ್ಯಾನಿಸಲ್ಪಡುವ ವಸ್ತುವು ನಾರಾಯಣರೂಪವಸ್ತುವೇ ಹೊರತು ಪರಶಿವ ಸ್ವರೂವ ವಸ್ತುವಲ್ಲವೆಂದು ನಿಶ್ಚಯವಾಗುವುದರಿಂದ ಹಿಂದೆ ಬಂದಿರುವ " **ಯಃ ಪರಸ್ಸಮಹೇಶ್ವರಃ** " ಎಂಬ ಮಂತ್ರದಲ್ಲಿರುವ ಮಹೇಶ್ವರ ಪದವು ಶಿವನಲ್ಲಿ ರೂಢವಾಗಿದ್ದರೂ ಮುಂದಿನ ಅನುವಾಕದಲ್ಲಿರುವ ನಾರಾಯಣ, ಹರಿ, ಅಚ್ಯುತ ಇತ್ಯಾದಿ ಪದಗಳ ಪರ್ಯಾಲೋಚನೆಯಿಂದ ಮಹೇಶ್ವರ ಶಬ್ದಕ್ಕೆ "ಮಹಾಂಶ್ಚಾಸೌ ಈಶ್ವರಶ್ಚ ಮಹೇಶ್ವರಃ" ಎಂದು ಕರ್ಮಧಾರಯ ಸಮಾಸವನ್ನಾಶ್ರಯಿಸಿ ಮಹೇಶ್ವರಪದದ ರೂಢ್ಯರ್ಥವನ್ನು ಬಿಟ್ಟು ಅವಯವಾರ್ಥಸ್ವೀಕಾರಮಾಡಿ ನಾರಾಯಣಪರವೆಂದು ಅರ್ಥ ಮಾಡುವುದಾದರೆ ಉಪಕ್ರಮ, ಉಪಸಂಹಾರಗಳಿಗೆ ಏಕಾರ್ಥವು ಸಿದ್ಧಿಸಿದಂತಾಗುತ್ತದೆ.

**ಸಮಾಧಾನ**—ಇದಕ್ಕಾಗಿ ಬೇರೆ ಬೇರೆ ಶ್ರುತಿಗಳನ್ನೂ, ಪ್ರಕರಣವನ್ನೂ ಪರ್ಯಾಲೋಚಿಸಿ ಮಹೇಶ್ವರಪದಕ್ಕೆ ಅರ್ಥವನ್ನು ನಿರ್ಧರಿಸಬೇಕಾಗಿದೆ.

**ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ**
**ವಿಶದಂ ವಿಶೋಕಮ್ ।**
**ಅಚಿಂತ್ಯಮವ್ಯಕ್ತಮನಂತರೂಪಂ ಶಿವಂ ಪ್ರಶಾಂತಮಮೃತಂ**
**ಬ್ರಹ್ಮಯೋನಿಮ್ ॥**
**ತದಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದ**
**ಮರೂಪಮದ್ಭುತಮ್ ।**
**ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ**
**ನೀಲಕಂಠಂ ಪ್ರಶಾಂತಂ ॥**

(ಕೈವಲ್ಯೋಪನಿಷತ್ ಖಂ. ೧.)

ಹೃತ್ಪುಂಡರೀಕಂ– ಯಾಪ ಹೃದಯಕಮಲವಿರುತ್ತದೆಯೋ, ತಸ್ಯ ಮಧ್ಯೇ–ಆ ಕಮಲದ ಮಧ್ಯಭಾಗದಲ್ಲಿ, ವಿರಜಂ–ರಾಗದ್ವೇಷಗಳಿಂದ ಶೂನ್ಯ ವಾದ, ವಿಶುದ್ಧಂ–ಹುಟ್ಟುವುದು, ಇರುವುದು, ಬೆಳೆಯುವುದು ಪರಿಣಾಮ ಹೊಂದುವುದು, ಕ್ಷೀಣವಾಗುವುದು, ನಶಿಸುವುದು ಎಂಬ ಷಡೂರ್ಮಿಗಳಿಲ್ಲದ, ವಿಚಿಂತ್ಯಂ-ಇಷ್ಟೇ ಪರಿಮಾಣವುಳ್ಳದ್ದೆಂದು ಮನಸ್ಸಿಗೆ ಗೋಚರಿಸದ, ಅವ್ಯಕ್ತಂ ಅಜ್ಞಾನಾವೃತನಾದ ಜೀವಾತ್ಮನಿಗೆ ನಿಲುಕದ, ಅನಂತರೂಪಂ—ಅಪರಿಚ್ಛಿನ್ನಾಕಾರವಾದ, ಶಿವಂ–ಸರ್ವಾಧಾರನೂ, ಮಂಗಲಸ್ವರೂಪನೂ ಆಗಿರುವ, ಪ್ರಶಾಂತಂ – ಗಾಳಿಯಿಲ್ಲದ ದೀಪದಂತೆ ನಿಶ್ಚಂಚಲವಾದ, ಅಮೃತಂ – ನಿತ್ಯ ವಾಗಿರುವ, ಬ್ರಹ್ಮಯೋನಿಂ – ಋಗಾದಿವೇದಗಳಿಗೂ ಚತುರ್ಮುಖ ಬ್ರಹನಿಗೂ ಉತ್ಪತ್ತಿಗೆ ಕಾರಣವಾದ, ತತ್ – ಪ್ರಸಿದ್ಧವಾದ, ಆದಿಮಧ್ಯಾಂತ ವಿಹೀನಂ – ಉತ್ಪತ್ತಿವೃದ್ಧಿಹಾನಿಗಳಿಲ್ಲದ, ಏಕಂ – ಸಜಾತೀಯಾದಿ ಭೇದ ಶೂನ್ಯವಾದ, ವಿಭುಂ – ಆಕಾಶದಂತೆ ವ್ಯಾಪಕವಾದ, ಚಿದಾನಂದಂ–ನಿತ್ಯ ಜ್ಞಾನ ನಿತ್ಯಸುಖಗಳಿಗಾಶ್ರಯವಾದ, ಅರೂಪಂ – ಅವಯವಶೂನ್ಯವಾದ, ಅದ್ಭುತಂ-ಅಣಿಮಾದಿ ಅಷ್ಟೈಶ್ವರ್ಯಗಳಿಂದ ಆಶ್ಚರ್ಯವನ್ನುಂಟುಮಾಡುವ, ಉಮಾಸಹಾಯಂ ಸೃಷ್ಟಿಸ್ಥಿತ್ಯಾದಿಗಳಿಗೆ ಅನುಕೂಲವಾಗಿರುವ ನಿಜಶಕ್ತಿ ಯಿಂದ ಕೂಡಿದ, ಪರಮೇಶ್ವರಂ – ನಿರತಿಶಯವಾದ ಐಶ್ವರ್ಯವುಳ್ಳ, ಪ್ರಭುಂ – ನಿಗ್ರಹಾನುಗ್ರಹದಲ್ಲಿ ಶಕ್ತನಾದ, ತ್ರಿಲೋಚನಂ – ಸೂರ್ಯ ಚಂದ್ರ ಅಗ್ನಿಯೆಂಬ ಮೂರು ಕಣ್ಣುಳ್ಳ, ನೀಲಕಂಠಂ – ಸಮುದ್ರಮಥನ ದಲ್ಲಿ ಹುಟ್ಟಿದ ವಿಷವನ್ನು ಕಂಠದಲ್ಲಿ ಧರಿಸಿದ, ಪ್ರಶಾಂತಂ – ಪೂರ್ಣಕುಂಭ ದಂತೆ ಶಾಂತವಾಗಿರುವ ಬ್ರಹ್ಮವನ್ನು ಧ್ಯಾನಿಸಬೇಕು.

ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ ವಿಶ್ವೇದೇವಂ
ಜಾತವೇದಂ ವರೇಣ್ಯಂ॥

(ಅಥರ್ವಶಿರಸ್ಸು)

" ವಾಲಾಗ್ರಮಾತ್ರಂ–ಕೂದಲಿನ ತುದಿಯೋಪಾದಿಯಲ್ಲಿ ಅತಿಸೂಕ್ಷ್ಮ ವಾಗಿರುವ, ವಿಶ್ವೇದೇವಂ – ಸಕಲದೇವತಾಸ್ವರೂಪನಾಗಿರುವ, ಜಾತ ವೇದಂ–ವೇದಗಳ ಉತ್ಪತ್ತಿಸ್ಥಾನನಾಗಿಯೂ, ಅಥವಾ–ಸಕಲಪ್ರಾಣಿಗಳಿಗೆ

ಆಧಾರನಾಗಿಯೂ, ಸಕಲ ಚರಾಚರಪ್ರಪಂಚಜನಕನಾಗಿಯೂ ಇರುವ, ವರೇಣ್ಯಂ– ಶ್ರೇಷ್ಠನಾಗಿರುವ ಬ್ರಹ್ಮವಾಚ್ಯವಾದ ಪರಶಿವನನ್ನು, ಹೃದಯಸ್ಯ– ಹೊಟ್ಟೆ ಮತ್ತು ಎದೆ ಇವುಗಳ ನಡುವೆ ಇರುವ ದಹರಪುಂಡರೀಕದ, ಮಧ್ಯೇ– ಮಧ್ಯಭಾಗದಲ್ಲಿ ಧ್ಯಾನಿಸತಕ್ಕದ್ದು. ಮತ್ತು

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ**
**ಈಶಾನೋ ಭೂತಭವ್ಯಸ್ಯ ॥**

(ಕಠ ಅಧ್ಯಾ. ೨–ಮಂ. ೧೩)

ಅಂಗುಷ್ಠಮಾತ್ರಃ – ಹೆಬ್ಬೆರಳಿನಷ್ಟು ಅಳತೆಯುಳ್ಳ, ಪುರುಷಃ– "ಪುರಿ ಶೇತ ಇತಿ ಪುರುಷಃ" ಎಂಬ ವ್ಯುತ್ಪತ್ತಿಯಂತೆ ಹೃದಯಪುಂಡರೀಕದ ಮಧ್ಯದಲ್ಲಿ ವಾಸವಾಗಿರುವ, ಅಧೂಮಕಃ – ಹೊಗೆಯಾಡದಿರುವ, ಜ್ಯೋತಿರಿವ–ಬೆಂಕಿಯ ಜ್ವಾಲೆಯೋಪಾದಿಯಲ್ಲಿ ನಿರ್ಮಲಪ್ರಕಾಶವುಳ್ಳ ಪರಶಿವನು, ಭೂತಭವ್ಯಸ್ಯ – ಭೂತಭವಿಷ್ಯದ್ವರ್ತಮಾನಕಾಲೀನವಾದ ವಸ್ತುಗಳಿಗೆಲ್ಲ ಈಶಾನಃ – ನಿಯಾಮಕನಾಗಿರುತ್ತಾನೆ.

ಶಂಕೆ — ಈ ಮಂತ್ರದಲ್ಲಿ "ಅಂಗುಷ್ಠಮಾತ್ರಃ" ಹೆಬ್ಬೆರಳಿನಷ್ಟು ಸೂಕ್ಷ್ಮಾಕಾರವುಳ್ಳವನು ಎಂಬ ಶಬ್ದವಿರುತ್ತದೆ. ಈ ಶಬ್ದವು ಪರಿಚ್ಛಿನ್ನನೂ, ಅಲ್ಪಜ್ಞನೂ, ಅಲ್ಪಶಕ್ತನೂ ಆದ ಜೀವಾತ್ಮನ ಧರ್ಮವನ್ನು ಬೋಧಿಸುತ್ತದೆಯಲ್ಲದೆ, ಅಪರಿಚ್ಛಿನ್ನನೂ, ಪರಿಮಾಣರಹಿತನೂ, ಸರ್ವಜ್ಞನೂ, ಅನಂತಶಕ್ತಿಯುತನೂ ಆದ ಪರಶಿವನ ಧರ್ಮವನ್ನು ಬೋಧಿಸುವುದಿಲ್ಲ. ಮತ್ತು

**ಅಂಗುಷ್ಠಮಾತ್ರೋ ರವಿತುಲ್ಯರೂಪಃ**
**ಸಂಕಲ್ಪಾಹಂಕಾರಸಮನ್ವಿತೋ ಯಃ ॥**

(ಶ್ವೇತಾಶ್ವತರ ಅಧ್ಯಾ. ೫–ಮಂ. ೮)

ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಸಹ ಜೀವಾತ್ಮನಿಗೆ ಅಂಗುಷ್ಠಪರಿಮಾಣತ್ವವನ್ನು ಸ್ಪಷ್ಟವಾಗಿ ಹೇಳಿರುತ್ತದೆ. ಪರಶಿವನಿಗೆ ಅಂತಹ ಅಂಗುಷ್ಠಪರಿಮಾಣತ್ವವನ್ನು ಯಾವ ಶ್ರುತಿಯಲ್ಲಿಯೂ ಹೇಳಿರುವುದಿಲ್ಲ. ಆದುದರಿಂದ ಈ ಮಂತ್ರವು ಜೀವಾತ್ಮಬೋಧಕವೇ ಹೊರತು

ಪರಶಿವಬೋಧಕವಲ್ಲವೆಂದು ನಿರ್ಧರಿಸಬೇಕಾಗುವುದು "ಅಂಗುಷ್ಠ ಮಾತ್ರಃ ಪುರುಷಃ" ಎಂಬೀಪೂರ್ವವಾಕ್ಯದ ಮುಂದೆ "ಜ್ಯೋತಿರಿ ವಾಧೂಮಕಃ" ಹೊಗೆಯಿಲ್ಲದ ಜ್ಯೋತಿಯಂತೆ ಪ್ರಕಾಶವುಳ್ಳವನೆಂದೂ "ಈಶಾನೋ ಭೂತಭವ್ಯಸ್ಯ" ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ವಸ್ತುಗಳಿಗೆಲ್ಲ ಸ್ವಾಮಿಯೆಂದೂ, ಸರ್ವಕರ್ತನೂ, ನಿತ್ಯಶುದ್ಧನೂ ಆದ ಪರಮಾತ್ಮನೆಂಬ ಅರ್ಥವನ್ನು ಕೊಡುವ ವಾಕ್ಯಗಳಿರುತ್ತವೆ. ಹೀಗೆ ಪೂರ್ವೋತ್ತರ ವಾಕ್ಯಗಳು ಜೀವಾತ್ಮ, ಪರಮಾತ್ಮ ಇವರೀರ್ವರನ್ನು ಬೋಧಿ ಸುವುದರಿಂದ ದಹರಾಕಾಶದಲ್ಲಿ ಪ್ರಕಾಶಿಸುತ್ತಿರುವ ವಸ್ತುವು ಪರಶಿವರೂಪ ವಾದ ವಸ್ತುವೇ ಎಂದು ಹೇಗೆ ನಿಶ್ಚಯಿಸಲಾದೀತು!

**ಸಮಾಧಾನ** — ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ಮೂರನೆಯ ಪಾದದಲ್ಲಿ ಇಪ್ಪತ್ತುಮೂರನೆಯ "ಶಬ್ದಾದೇವ ಪ್ರಮಿತಃ" ಎಂಬ ಸೂತ್ರ ದಲ್ಲಿ ಅಂಗುಷ್ಠಪರಿಮಾಣತ್ವವು ಪರಶಿವನಿಗೆ ಇರುತ್ತದೆಯಲ್ಲದೆ ಜೀವಾತ್ಮ ನಿಗಿರುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿರುತ್ತದೆ. ಹೇಗಂದರೆ "ಪ್ರಮಿತಃ" ಕಠೋಪನಿಷತ್ತಿನಲ್ಲಿ ಬಂದಿರುವ ಅಂಗುಷ್ಠಪರಿಮಾಣವುಳ್ಳ ಪುರುಷನು ಪರಮಾತ್ಮನೇ ಆಗಿರುವನಲ್ಲದೆ ಜೀವಾತ್ಮನಾಗಿರುವುದಿಲ್ಲ. ಏಕಂದರೆ-"ಶಬ್ದಾ ದೇವ" ಪರಮೇಶ್ವರತ್ವಬೋಧಕವಾದ ಶಬ್ದವಿರುವುದರಿಂದ ಅಂದರೆ "ಅಂಗುಷ್ಠಮಾತ್ರಃ ಪುರುಷಃ" ಎಂಬ ವಾಕ್ಯದ ಮುಂದೆ "ಈಶಾನೋ ಭೂತಭವ್ಯಸ್ಯ" ಹಿಂದೆಯೂ, ಈಗಲೂ, ಮುಂದೆಯೂ ಇರುವ ಸಮಸ್ತ ಪದಾರ್ಥಗಳಿಗೆಲ್ಲ ಸ್ವಾಮಿಯಾಗಿರುವನು ಎಂಬ ವಾಕ್ಯದಲ್ಲಿರುವ ಸಕಲ ವಸ್ತುನಿಯಾಮಕತ್ವರೂಪವಾದ ಅಸಾಧಾರಣಧರ್ಮವೂ ಮತ್ತು "ಈಶಾನ" ಪದವಾಚ್ಯತ್ವವೂ ಅಲ್ಪಜ್ಞನಾದ ಜೀವಾತ್ಮನಿಗೆ ಎಂದಿಗೂ ಸಂಭವಿಸುವುದಿಲ್ಲ. ಅಂತಹ ಧರ್ಮವು ವಸ್ತುತಃ ಅಪರಿಚ್ಛಿನ್ನನಾದ ಪರಶಿವ ನೊಬ್ಬನಲ್ಲಿಯೇ ಇರುತ್ತದೆಯೆಂದು ನಿಶ್ಚಯಿಸತಕ್ಕದ್ದು. ಹಾಗಾದರೆ— ಆಮಂತ್ರದ ಪೂರ್ವವಾಕ್ಯದಲ್ಲಿ ಬಂದಿರುವ "ಅಂಗುಷ್ಠಮಾತ್ರಃ ಪುರುಷಃ" ಎಂಬಲ್ಲಿರುವ ಅಂಗುಷ್ಠಪರಿಮಾಣತ್ವವು ಪರಶಿವನಲ್ಲಿ ಹೇಗೆ ಸಂಭವಿಸು ವುದೆಂದರೆ, ಈ ಅಂಗುಷ್ಠ ಪರಿಮಾಣತ್ವವೆಂಬ ಧರ್ಮವು ಪರಶಿವನಲ್ಲಿರುವ ಸ್ವಾಭಾವಿಕ ಧರ್ಮವಲ್ಲದಿದ್ದರೂ ಔಪಾಧಿಕಧರ್ಮವೆಂದು ಅಂಗೀಕರಿಸಲೇ

ಬೇಕು. ಏಕೆಂದರೆ—ಸಕಲಮಾನವರ ಹೃದಯಕೋಶವು ಅವರವರ ಅಂಗುಷ್ಠ (ಹೆಬ್ಬೆರಳು) ಪರಿಮಾಣ (ಅಳತೆ) ವುಳ್ಳದ್ದಾದ್ದರಿಂದ ಅಂತಹ ಉಪಾಸಕರ ಅಂಗುಷ್ಠಪರಿಮಾಣದ ಹೃದಯಕೋಶದಲ್ಲಿ ಸರ್ವಾನುಗ್ರಾಹಕನಾದ ಪರಶಿವನು ಯಾವಾಗಲೂ ಆ ಹೃದಯಕೋಶ ಪರಿಮಿತಿಯಾಗಿಯೇ ವಾಸಮಾಡುತ್ತಾನೆ. ಆದ್ದರಿಂದ ಅಂತಹ ಹೃದಯಕೋಶಾಂತರ್ವರ್ತಿಯಾದ ಪರಶಿವನಿಗೂ ಸಹ ಔಪಾಧಿಕವಾದ ಅಂಗುಷ್ಠಪರಿಮಿತತ್ವವು ಸಂಭವಿಸುತ್ತದೆಯೇ ಹೊರತು ಅಣುಪರಿಮಾಣನಾದ ಜೀವಾತ್ಮನಿಗೆ ಅಂಗುಷ್ಠಪರಿಮಾಣತ್ವವು ಸಂಭವಿಸುವುದಿಲ್ಲ. ಮತ್ತು ಈ ಮಂತ್ರದಲ್ಲಿ "ಈಶಾನ" ಎಂಬುದೊಂದು ವಿಶೇಷಪದವಿರುವುದರಿಂದ ಈ ಈಶಾನಪದವು "**ಈಶ್ವರಃ ಶರ್ವ ಈಶಾನಃ**" ಎಂಬ ಕೋಶಪ್ರಮಾಣದಿಂದಲೂ ಶಿವನೊಬ್ಬನಲ್ಲಿಯೇ ಪ್ರಸಿದ್ಧವಾಗಿರುವುದರಿಂದಲೂ ಸಹ "**ಅಂಗುಷ್ಠ........ಈಶಾನೋ ಭೂತಭವ್ಯಸ್ಯ**" ಎಂಬೀ ಕಠವಲ್ಲಿಯ ಮಂತ್ರದಿಂದ ದಹರಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವು ಶಿವರೂಪವಸ್ತುವಲ್ಲದೆ ಬೇರೆ ಯಾವದೂ ಅಲ್ಲವೆಂದು ದೃಢಪಡುತ್ತದೆ.

ಹೀಗೆ ಬೇರೆ ಬೇರೆ ಉಪನಿಷತ್ತುಗಳಲ್ಲಿ ಬಂದಿರುವ ಪರಶಿವನನ್ನು ಬೋಧಿಸುವ ವಿಶೇಷಶಬ್ದಗಳನ್ನು ಪರಿಶೀಲಿಸುವುದರಿಂದ "**ತಸ್ಮಿನ್ಯದಂತಸ್ತದುಪಾಸಿತವ್ಯಂ**" ಎಂಬ ತೈತ್ತಿರೀಯಶ್ರುತಿಯಲ್ಲಿ ಬಂದಿರುವ ಸಾಮಾನ್ಯವಾದ "**ಯತ್ ತತ್**" ಎಂಬ ಪದಗಳಿಗೆ ಶಿವರೂಪವಾದ ವಸ್ತುವೆಂದೇ ಸಿದ್ಧವಾಗುತ್ತದೆ. ಹಾಗಿಲ್ಲದಿದ್ದರೆ ಅದೇ ತೈತ್ತಿರೀಯದಲ್ಲಿ ಮುಂದೆ ಬರುವ ಮಂತ್ರಗಳಲ್ಲಿ "**ಮಹೇಶ್ವರ, ವಿರೂಪಾಕ್ಷ, ಕೃಷ್ಣಪಿಂಗಳ**" ಮುಂತಾದ ವಿಶೇಷಶಬ್ದಗಳಿಗೆ ಅರ್ಥವೇ ಇಲ್ಲದಂತಾಗುತ್ತದೆಯಲ್ಲದೆ, "**ಕೈವಲ್ಯ, ಅಥರ್ವಶಿರಸ್ಸು, ಕಠವಲ್ಲಿ**" ಮುಂತಾದ ಅನೇಕ ಉಪನಿಷತ್ತುಗಳಲ್ಲಿ ಬಂದಿರುವ "**ಶಿವ, ಅಮೃತ, ಉಮಾಸಹಾಯ, ಪರಮೇಶ್ವರ, ನೀಲಕಂಠ, ತ್ರಿಲೋಚನ, ಜಾತವೇದ, ಈಶಾನ**" ಮುಂತಾದ ಶಿವನಲ್ಲಿ ರೂಢವಾಗಿರುವ ವಿಶೇಷಪದಗಳು ಸಹ ವ್ಯರ್ಥಗಳಾಗಬೇಕಾಗುತ್ತವೆ. "**ಅಗ್ನೀಷೋಮೀಯಂ ಪಶುಮಾಲಭೇತ**" ಅಗ್ನೀಷೋಮ ಎಂಬುದೊಂದು ಯಾಗ. ಆ ಯಾಗದಲ್ಲಿ ಪಶುವನ್ನು ವಧಿಸಬೇಕೆಂಬ

ಈ ಮಂತ್ರವು ಪಶುವಧೆಯನ್ನು ವಿಧಿಸುತ್ತದೆ. ಈ ಪ್ರೇರಣವಾಕ್ಯದಲ್ಲಿ "**ಪಶು**" ಎಂಬ ಸಾಮಾನ್ಯಪದವಿರುವುದರಿಂದ ಅದು ನಾಲ್ಕು ಕಾಲುಳ್ಳ ಯಾವ ಪಶುವನ್ನಾದರೂ ವಧಿಸಬೇಕೆಂಬ ಅರ್ಥವನ್ನು ಕೊಡುತ್ತದೆಯಲ್ಲದೆ ಇಂತಹ ಪಶುವನ್ನೇ ವಧಿಸಬೇಕೆಂಬ ವಿಶೇಷಾಕಾರವಾದ ಅರ್ಥವನ್ನು ಕೊಡುವುದಿಲ್ಲ. ಆದುದರಿಂದ ಆ ಅಗ್ನೀಷೋಮಯಾಗದಲ್ಲಿ ವಧಿಸಬೇಕಾದುದು ಎಂತಹ ಪಶುವಾಗಿರಬೇಕೆಂಬ **ಸಂದೇಹ**ವುಂಟಾಗುತ್ತದೆ.

**ಪರಿಹಾರ**—ಹೀಗೆ ಸಾಮಾನ್ಯವಾಗಿ ಪಶುವಿಧಾನಮಾಡಿ ಮುಂದೆ "**ಛಾಗಸ್ಯ ಹವಿಷೋ ವಪಾಯಾ ಮೇಧಸಃ**" ಆ ಗಂಡು ಆಡಿನ ಹೃದಯದಲ್ಲಿರುವ ವಪೆ (ಮಾಂಸದಪೊರೆ) ಯನ್ನು ಹವಿಸ್ಸನ್ನಾಗಿ ಮಾಡಬೇಕೆಂಬ ಅರ್ಥವನ್ನು ಕೊಡುವ ವಿನಿಯೋಗ ಮಂತ್ರವು ಬಂದಿರುತ್ತದೆ. ಈ ಮಂತ್ರದಲ್ಲಿ ಛಾಗವೆಂಬ ವಿಶೇಷ ಪದವು ಬಂದಿರುವುದರಿಂದ "**ಅಗ್ನೀಷೋಮೀಯಂ ಪಶುಮಾಲಭೇತ**" ಎಂಬ ವಿಧಿವಾಕ್ಯದಲ್ಲಿರುವ ಸಾಮಾನ್ಯವಾದ ಪಶುಪದಕ್ಕೆ ಛಾಗರೂಪವಾದ ಪಶುವೆಂಬ ಅರ್ಥವು ದೃಢಪಡುತ್ತದೆ. ಹೀಗೆ ಸಾಮಾನ್ಯವಾದ ಪಶುಪದಕ್ಕೆ ಛಾಗರೂಪವಾದ ವಿಶೇಷಾರ್ಥವನ್ನು ಮಾಡದಿದ್ದಲ್ಲಿ "**ಅಗ್ನೀಷೋಮೀಯಂ**" ಎಂಬ ವಿಧಿವಾಕ್ಯಕ್ಕೂ "**ಛಾಗಸ್ಯ ಹವಿಷೋ**" ಎಂಬ ವಿನಿಯೋಗವಾಕ್ಯಕ್ಕೂ ಏಕವಾಕ್ಯತ್ವವೇ ಬರುವುದಿಲ್ಲವಾದುದರಿಂದ ಸಾಮಾನ್ಯವಾದ ಪಶುಪದಕ್ಕೆ ಛಾಗರೂಪ ವಿಶೇಷಾರ್ಥವನ್ನು ಸ್ವೀಕರಿಸಬೇಕೆಂದು ಪೂರ್ವಮೀಮಾಂಸೆಯಲ್ಲಿ "**ಛಾಗೋ ವಾ ಮಂತ್ರವರ್ಣಾತ್**" ಎಂಬ ಸೂತ್ರದಿಂದ ಸಿದ್ಧಾಂತಗೊಳಿಸಲ್ಪಟ್ಟಿರುತ್ತದೆ. ಇದಕ್ಕೆ "**ಛಾಗಪಶುನ್ಯಾಯ**"ವೆಂದು. ಹೇಳುತ್ತಾರೆ. ಹೀಗೆ ಬೇರೆ ಬೇರೆ ಮಂತ್ರಗಳಲ್ಲಿ ಬಂದಿರುವ ಆಯಾಯ ವಿಶೇಷಪದಗಳನ್ನು ಪರ್ಯಾಲೋಚಿಸಿ, ಸಾಮಾನ್ಯ ಪದಗಳಿಗೆ ಅರ್ಥನಿಶ್ಚಯ ಮಾಡಬೇಕೆಂಬ "**ಛಾಗಪಶುನ್ಯಾಯ**" ಪರಾಮರ್ಶೆಯಿಂದ "**ತಸ್ಮಿನ್ ಯದಂತಸ್ತದುಪಾಸಿತವ್ಯಂ**" ಎಂಬ ಸಾಮಾನ್ಯಾರ್ಥಬೋಧಕವಾದ ಹಿಂದಿನ ಮಂತ್ರದಲ್ಲಿ **ಯತ್ ತತ್** ಪದಗಳಿಗೆ ದಹರಪುಂಡರೀಕದಲ್ಲಿರುವ ವಸ್ತುವೆಂದು ಸಿದ್ಧವಾಗುತ್ತದೆ. ಇದರಂತೆ—

**" ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ-ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ಜಿಜ್ಞಾಸಿತವ್ಯಂ "** (ಛಾಂದೋಗ್ಯ)

ಹಿಂದೆ ಬೇರೆ ಬೇರೆ ವಿದ್ಯೆಗಳನ್ನು ಉಪದೇಶಮಾಡಿದ ಬಳಿಕ ದಹರ ವಿದ್ಯೆಯನ್ನು ಉಪದೇಶಿಸುವ ಸಮಯದಲ್ಲಿ " **ಉದ್ದಾಲಕನು ಶ್ವೇತಕೇತು** " ಎಂಬ ತನ್ನ ಮಗನನ್ನು ಕುರಿತು ಎಲೈ ಶ್ವೇತಕೇತುವೇ! ಅಥ-ಇತರ ವಿದ್ಯೆಯನ್ನು ಉಪದೇಶ ಮಾಡಿದನಂತರದಲ್ಲಿ, ಯದಿದಂ – ಸಮೀಪದಲ್ಲಿರುವ ಬ್ರಹ್ಮದ ವಾಸಸ್ಥಾನವೆನಿಸಿದ ಯಾವ ಶರೀರರೂಪವಾದ ಗೃಹವಿರುತ್ತದೆಯೋ! ಅಸ್ಮಿನ್ ಬ್ರಹ್ಮಪುರೇ— ಈ ಬ್ರಹ್ಮಪುರವೆನಿಸಿದ ಶರೀರದಲ್ಲಿ, ದಹರಂ – ಅತಿಸೂಕ್ಷ್ಮವಾದ, ಪುಂಡರೀಕಂ – ಯಾವ ದಹರಾಕಾಶವು ವೇಶ್ಮ–ಆ ಬ್ರಹ್ಮಕ್ಕೆ ಗೃಹವಾಗಿರುತ್ತದೆಯೋ! ಅಸ್ಮಿನ್–ಈ ದಹರಾಕಾಶದಲ್ಲಿ, ಅಂತರಾಕಾಶಃ–ಮಧ್ಯದಲ್ಲಿ ಆಕಾಶದಂತೆ ವ್ಯಾಪಕವೂ, ಅಮೂರ್ತವೂ ಆದ ಬ್ರಹ್ಮವಿರುತ್ತದೆ, ಹೀಗಿರಲು, ತಸ್ಮಿನ್ - ಆ ಹೃದಯಾಕಾಶದಲ್ಲಿ ಯತ್ ಅಂತಃ - ಅಂತರ್ಯಾಮಿಯಾದ ಯಾವ ವಸ್ತುವಿರುತ್ತದೆಯೋ ತತ್ – ಆ ಬ್ರಹ್ಮರೂಪವಾದ ವಸ್ತುವನ್ನು ಅನ್ವೇಷ್ಟವ್ಯಂ-ಹುಡುಕತಕ್ಕದ್ದು. ತದ್ವಾವ-ಅನ್ವೇಷಿಣೀಯವಾದ ಅಂತಹ ವಸ್ತುವನ್ನು, ಜಿಜ್ಞಾಸಿತವ್ಯಂ - ವಿಚಾರಪುರ್ವಕ ನಿರ್ಣಯಿಸಿ ಅರಿಯತಕ್ಕದ್ದು.

ಈ ಮಂತ್ರದಲ್ಲಿ ಹೃದಯಪುಂಡರೀಕದಲ್ಲಿ ಯಾವುದು ಇದೆಯೋ ಆ ವಸ್ತುವನ್ನೇ ಅರಿಯತಕ್ಕದ್ದು ಎಂದು ಹೇಳಿರುವುದರಿಂದ ಅಲ್ಲಿ ಶಿವ ಎಂಬ ವಿಶೇಷಾರ್ಥವನ್ನು ಬೋಧಿಸುವ ಪದವಾಗಲಿ ಮತ್ತು ಇತರ ದೇವತೆಯನ್ನು ಬೋಧಿಸುವ ಪದವಾಗಲಿ ಒಂದೂ ಕಂಡು ಬರುವುದಿಲ್ಲ. ಹೃದಯಾಕಾಶದಲ್ಲಿ ಯಾವ ವಸ್ತುವಿದೆಯೋ ಆ ವಸ್ತುವನ್ನು ಹುಡುಕಬೇಕು. ಆ ವಸ್ತುಸ್ವರೂಪವನ್ನೇ ತಿಳಿಯಬೇಕೆಂದು ಹೇಳಿದ್ದರೂ " ಕೈವಲ್ಯ, ಅಥರ್ವಶಿರ, ಕಠವಲ್ಲಿ " ಮುಂತಾದ ಅನೇಕ ಉಪನಿಷತ್ತುಗಳಲ್ಲಿ ಬಂದಿರುವ ಶಿವನಲ್ಲಿಯೇ ರೂಢವಾಗಿರುವ " ಉಮಾಸಹಾಯ, ತ್ರಿಲೋಚನ, ನೀಲಕಂಠ " ಮುಂತಾದ ಅಸಾಧಾರಣಗಳಾದ ವಿಶೇಷ ಪದಗಳಿಂದ

ಹೃತ್ಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವು ಶಿವರೂಪವಸ್ತುವೇ ಆಗಿರುವುದು. ಅದನ್ನೇ ಹುಡುಕಬೇಕು. ಅದನ್ನೇ ಅರಿಯಬೇಕೆಂಬುದು ಹೇಗೆ ಸ್ಪಷ್ಟವಾಗುತ್ತದೆಯೋ ಅದರಂತೆಯೇ "ದಹರಂ........ತದುಪಾಸಿತವ್ಯಂ" ಎಂಬ ತೈತ್ತಿರೀಯ ವಾಕ್ಯವು ಸಹ ಶಿವರೂಪವಾದ ವಸ್ತುವನ್ನೇ ದಹರಾಕಾಶದಲ್ಲಿ ಉಪಾಸಿಸಬೇಕೆಂದು ವಿಧಿಸುತ್ತದೆ.

ಶಂಕೆ—"ಸಹಸ್ರಶೀರ್ಷಂ...............ನಾರಾಯಣಂ ಮಹಾಜ್ಞೇಯಂ" ಎಂದು ಅದೇ ತೈತ್ತಿರೀಯ ಪ್ರಥಮಾನುವಾಕ ದ್ವಿತೀಯಾನುವಾಕಗಳಲ್ಲಿ "ನಾರಾಯಣ" ಪದವು ಬಂದಿರುವುದರಿಂದ ಹೃದಯಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವು ನಾರಾಯಣರೂಪವಾದ ವಸ್ತುವೆಂದು ಏಕೆ ನಿರ್ಣಯಿಸಬಾರದು?

ಸಮಾಧಾನ:—ಇದೇ ತೈತ್ತಿರೀಯ ಶ್ರುತಿಯಲ್ಲಿಯೂ ಮತ್ತು ಕೈವಲ್ಯ ಕಠವಲ್ಯಾದಿ ಅನಂತಶ್ರುತಿಗಳಲ್ಲಿಯೂ "ಮಹೇಶ್ವರ, ಕೃಷ್ಣಪಿಂಗಳ ವಿರೂಪಾಕ್ಷ, ತ್ರಿಲೋಚನ, ನೀಲಕಂಠ, ಉಮಾಸಹಾಯ ಮುಂತಾದ ವಿಶೇಷಪದಗಳು ಬಂದಿರುತ್ತವೆ. ಈ ಪದಗಳಿಗೆ ಶಿವನೆಂಬ ಅರ್ಥವನ್ನು ಮಾಡಬೇಕಲ್ಲದೆ ಇತರ ದೇವತೆಯೆಂಬ ಅರ್ಥವನ್ನು ಮಾಡಲು ಅವಕಾಶವಿಲ್ಲ. ಆದುದರಿಂದ "ಸಹಸ್ರಶೀರ್ಷ" ಎಂಬ ಅನುವಾಕದಲ್ಲಿ ಬಂದಿರುವ "ನಾರಾಯಣ" ಎಂಬ ಪದಕ್ಕೆ "ನರಾ ಅಯನಂ ಅಸ್ಯೇತಿ" "ನರಾಣಾಂ ಸಮೂಹಃ ಅಯನಂ ಅಸ್ಯೇತಿ" ಎಂಬ ವ್ಯುತ್ಪತ್ತಿಬಲದಿಂದ ನಾರಾಯಣಪದಕ್ಕೆ ಅವಯವಾರ್ಥಸ್ವೀಕಾರ ಮಾಡುವುದರಿಂದ ಆ ನಾರಾಯಣ ಪದವು ಶಿವಪರವಾಗುವುದಲ್ಲದೆ ಸರ್ವವಾಕ್ಯಗಳಿಗೂ ಸಮನ್ವಯವಾಗುತ್ತದೆ. ಮತ್ತು ತ್ರಿಲೋಚನ, ನೀಲಕಂಠ, ಉಮಾಸಹಾಯ, ಮುಂತಾದ ಪದಗಳಿಗಿರುವ ರೂಢ್ಯರ್ಥವನ್ನು ಬಿಟ್ಟು ಅನ್ಯಾರ್ಥವನ್ನು ಕಲ್ಪಿಸಲು ಶಕ್ಯವಿಲ್ಲವಾದುದರಿಂದ ಒಂದೇ ಒಂದಾದ ನಾರಾಯಣ ಪದಕ್ಕೆ ಯೌಗಿಕಾರ್ಥವನ್ನು ಸ್ವೀಕಾರಮಾಡಿ ಉಳಿದ ಸರ್ವವಾಕ್ಯಗಳಿಗೂ ಸಮನ್ವಯಗೊಳಿಸುವುದು ನ್ಯಾಯವಾದುದಾಗಿದೆ.

ಹೀಗೆ ದಹರಾಕಾಶದಲ್ಲಿ ಇರುವ ಉಪಾಸ್ಯವಸ್ತುವನ್ನು ನಿರ್ಣಯಿಸಿಕೊಳ್ಳದೆ ಅವರವರ ಇಷ್ಟದಂತೆ ಯಾವ ಯಾವ ದೇವತೆಯನ್ನಾದರೂ

**" ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ-ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ಜಿಜ್ಞಾಸಿತವ್ಯಂ "** (ಛಾಂದೋಗ್ಯ)

ಹಿಂದೆ ಬೇರೆ ಬೇರೆ ವಿದ್ಯೆಗಳನ್ನು ಉಪದೇಶಮಾಡಿದ ಬಳಿಕ ದಹರ ವಿದ್ಯೆಯನ್ನು ಉಪದೇಶಿಸುವ ಸಮಯದಲ್ಲಿ **" ಉದ್ದಾಲಕನು ಶ್ವೇತಕೇತು "** ಎಂಬ ತನ್ನ ಮಗನನ್ನು ಕುರಿತು ಎಲೈ ಶ್ವೇತಕೇತುವೇ! ಅಥ-ಇತರ ವಿದ್ಯೆಯನ್ನು ಉಪದೇಶ ಮಾಡಿದನಂತರದಲ್ಲಿ, ಯದಿದಂ – ಸಮೀಪದಲ್ಲಿರುವ ಬ್ರಹ್ಮದ ವಾಸಸ್ಥಾನವೆನಿಸಿದ ಯಾವ ಶರೀರರೂಪವಾದ ಗೃಹವಿರುತ್ತದೆಯೋ! ಅಸ್ಮಿನ್ ಬ್ರಹ್ಮಪುರೇ— ಈ ಬ್ರಹ್ಮಪುರವೆನಿಸಿದ ಶರೀರದಲ್ಲಿ, ದಹರಂ – ಅತಿಸೂಕ್ಷ್ಮವಾದ, ಪುಂಡರೀಕಂ – ಯಾವ ದಹರಾಕಾಶವು ವೇಶ್ಮ–ಆ ಬ್ರಹ್ಮಕ್ಕೆ ಗೃಹವಾಗಿರುತ್ತದೆಯೋ! ಅಸ್ಮಿನ್–ಈ ದಹರಾಕಾಶದಲ್ಲಿ, ಅಂತರಾಕಾಶಃ–ಮಧ್ಯದಲ್ಲಿ ಆಕಾಶದಂತೆ ವ್ಯಾಪಕವೂ, ಅಮೂರ್ತವೂ ಆದ ಬ್ರಹ್ಮವಿರುತ್ತದೆ, ಹೀಗಿರಲು, ತಸ್ಮಿನ್ - ಆ ಹೃದಯಾಕಾಶದಲ್ಲಿ ಯತ್ ಅಂತಃ - ಅಂತರ್ಯಾಮಿಯಾದ ಯಾವ ವಸ್ತುವಿರುತ್ತದೆಯೋ ತತ್ – ಆ ಬ್ರಹ್ಮರೂಪವಾದ ವಸ್ತುವನ್ನು ಅನ್ವೇಷ್ಟವ್ಯಂ-ಹುಡುಕತಕ್ಕದ್ದು. ತದ್ವಾವ-ಅನ್ವೇಷಣೀಯವಾದ ಅಂತಹ ವಸ್ತುವನ್ನು, ಜಿಜ್ಞಾಸಿತವ್ಯಂ - ವಿಚಾರಪೂರ್ವಕ ನಿರ್ಣಯಿಸಿ ಅರಿಯತಕ್ಕದ್ದು.

ಈ ಮಂತ್ರದಲ್ಲಿ ಹೃದಯಪುಂಡರೀಕದಲ್ಲಿ ಯಾವುದು ಇದೆಯೋ ಆ ವಸ್ತುವನ್ನೇ ಅರಿಯತಕ್ಕದ್ದು ಎಂದು ಹೇಳಿರುವುದರಿಂದ ಅಲ್ಲಿ ಶಿವ ಎಂಬ ವಿಶೇಷಾರ್ಥವನ್ನು ಬೋಧಿಸುವ ಪದವಾಗಲಿ ಮತ್ತು ಇತರ ದೇವತೆಯನ್ನು ಬೋಧಿಸುವ ಪದವಾಗಲಿ ಒಂದೂ ಕಂಡು ಬರುವುದಿಲ್ಲ. ಹೃದಯಾಕಾಶದಲ್ಲಿ ಯಾವ ವಸ್ತುವಿದೆಯೋ ಆ ವಸ್ತುವನ್ನು ಹುಡುಕಬೇಕು. ಆ ವಸ್ತುಸ್ವರೂಪವನ್ನೇ ತಿಳಿಯಬೇಕೆಂದು ಹೇಳಿದ್ದರೂ **" ಕೈವಲ್ಯ, ಅಥರ್ವಶಿರ, ಕಠವಲ್ಲಿ "** ಮುಂತಾದ ಅನೇಕ ಉಪನಿಷತ್ತುಗಳಲ್ಲಿ ಬಂದಿರುವ ಶಿವನಲ್ಲಿಯೇ ರೂಢವಾಗಿರುವ **" ಉಮಾಸಹಾಯ, ತ್ರಿಲೋಚನ, ನೀಲಕಂಠ "** ಮುಂತಾದ ಅಸಾಧಾರಣಗಳಾದ ವಿಶೇಷ ಪದಗಳಿಂದ

ಹೃತ್ಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವು ಶಿವರೂಪವಸ್ತುವೇ ಆಗಿರುವುದು. ಅದನ್ನೇ ಹುಡುಕಬೇಕು. ಅದನ್ನೇ ಅರಿಯಬೇಕೆಂಬುದು ಹೇಗೆ ಸ್ಪಷ್ಟವಾಗುತ್ತದೆಯೋ ಅದರಂತೆಯೇ "ದಹರಂ........ತದುಪಾಸಿತವ್ಯಂ" ಎಂಬ ತೈತ್ತಿರೀಯ ವಾಕ್ಯವು ಸಹ ಶಿವರೂಪವಾದ ವಸ್ತುವನ್ನೇ ದಹರಾಕಾಶದಲ್ಲಿ ಉಪಾಸಿಸಬೇಕೆಂದು ವಿಧಿಸುತ್ತದೆ.

ಶಂಕೆ—"ಸಹಸ್ರಶೀರ್ಷಂ...............ನಾರಾಯಣಂ ಮಹಾಜ್ಞೇಯಂ" ಎಂದು ಅದೇ ತೈತ್ತಿರೀಯ ಪ್ರಥಮಾನುವಾಕ ದ್ವಿತೀಯಾನುವಾಕಗಳಲ್ಲಿ "ನಾರಾಯಣ" ಪದವು ಬಂದಿರುವುದರಿಂದ ಹೃದಯ ಪುಂಡರೀಕದಲ್ಲಿ ಉಪಾಸಿಸಲ್ಪಡುವ ವಸ್ತುವು ನಾರಾಯಣರೂಪವಾದ ವಸ್ತುವೆಂದು ಏಕೆ ನಿರ್ಣಯಿಸಬಾರದು?

ಸಮಾಧಾನ:—ಇದೇ ತೈತ್ತಿರೀಯ ಶ್ರುತಿಯಲ್ಲಿಯೂ ಮತ್ತು ಕೈವಲ್ಯ ಕಠವಲ್ಯಾದಿ ಅನಂತಶ್ರುತಿಗಳಲ್ಲಿಯೂ "ಮಹೇಶ್ವರ, ಕೃಷ್ಣಪಿಂಗಳ ವಿರೂಪಾಕ್ಷ, ತ್ರಿಲೋಚನ, ನೀಲಕಂಠ, ಉಮಾಸಹಾಯ ಮುಂತಾದ ವಿಶೇಷಪದಗಳು ಬಂದಿರುತ್ತವೆ. ಈ ಪದಗಳಿಗೆ ಶಿವನೆಂಬ ಅರ್ಥವನ್ನು ಮಾಡಬೇಕಲ್ಲದೆ ಇತರ ದೇವತೆಯೆಂಬ ಅರ್ಥವನ್ನು ಮಾಡಲು ಅವಕಾಶವಿಲ್ಲ. ಆದುದರಿಂದ "ಸಹಸ್ರಶೀರ್ಷ" ಎಂಬ ಅನುವಾಕದಲ್ಲಿ ಬಂದಿರುವ "ನಾರಾಯಣ" ಎಂಬ ಪದಕ್ಕೆ "ನರಾ ಅಯನಂ ಅಸ್ಯೇತಿ" "ನರಾಣಾಂ ಸಮೂಹಃ ಅಯನಂ ಅಸ್ಯೇತಿ" ಎಂಬ ವ್ಯುತ್ಪತ್ತಿಬಲದಿಂದ ನಾರಾಯಣಪದಕ್ಕೆ ಅವಯವಾರ್ಥಸ್ವೀಕಾರ ಮಾಡುವುದರಿಂದ ಆ ನಾರಾಯಣ ಪದವು ಶಿವಪರವಾಗುವುದಲ್ಲದೆ ಸರ್ವವಾಕ್ಯಗಳಿಗೂ ಸಮನ್ವಯವಾಗುತ್ತದೆ. ಮತ್ತು ತ್ರಿಲೋಚನ, ನೀಲಕಂಠ, ಉಮಾಸಹಾಯ, ಮುಂತಾದ ಪದಗಳಿಗಿರುವ ರೂಢ್ಯರ್ಥವನ್ನು ಬಿಟ್ಟು ಅನ್ಯಾರ್ಥವನ್ನು ಕಲ್ಪಿಸಲು ಶಕ್ಯವಿಲ್ಲವಾದುದರಿಂದ ಒಂದೇ ಒಂದಾದ ನಾರಾಯಣ ಪದಕ್ಕೆ ಯೌಗಿಕಾರ್ಥವನ್ನು ಸ್ವೀಕಾರಮಾಡಿ ಉಳಿದ ಸರ್ವವಾಕ್ಯಗಳಿಗೂ ಸಮನ್ವಯಗೊಳಿಸುವುದು ನ್ಯಾಯವಾದುದಾಗಿದೆ.

ಹೀಗೆ ದಹರಾಕಾಶದಲ್ಲಿ ಇರುವ ಉಪಾಸ್ಯವಸ್ತುವನ್ನು ನಿರ್ಣಯಿಸಿಕೊಳ್ಳದೆ ಅವರವರ ಇಷ್ಟದಂತೆ ಯಾವ ಯಾವ ದೇವತೆಯನ್ನಾದರೂ

ಉಪಾಸನೆಗೆ ವಿಷಯವನ್ನಾಗಿ ಹೇಳುವುದಾದರೆ ವಿಷ್ಣುವನ್ನು ಉಪಾಸಿಸ ಬೇಕೊ? ಶಿವನನ್ನು ಉಪಾಸಿಸಬೇಕೊ? ಇನ್ನಾವ ದೇವತೆಯನ್ನು ಉಪಾಸಿಸಬೇಕೊ? ಎಂದು ಅನೇಕ ಸಂಶಯಗಳು ಉದಿಸುವುವು. ಆಗ ಮನಸ್ಸಿನಲ್ಲಿ ಅನೇಕಾಂತ (ಅನಿಯಮ) ವು ಹುಟ್ಟಿ ಸಂದೇಹಕ್ಕೊಳಗಾಗ ಬೇಕಾಗುವುದು. ಶಾಸ್ತ್ರಕಾರರು ಹೀಗೆ ಹಲವು ಬಗೆಯಾಗಿ ಹಂಬಲಿಸು ವುದಕ್ಕೆ "**ಅನಿಯಿತವಿಷಯಕತ್ವ**"ವೆಂಬ ದೋಷವನ್ನು ಹೇಳಿರು ತ್ತಾರೆ. ಇಂತಹ ದೋಷಕ್ಕೆ ಎಡೆಗೊಡದೆ ದಹರಾಕಾಶದಲ್ಲಿ ಬೆಳಗುವ ವಸ್ತು ವನ್ನು ಶಿವರೂಪವಸ್ತುವನ್ನಾಗಿ ನಿರ್ಧರಿಸಿ ಉಪಾಸಕನು ಧ್ಯಾನಿಸುತ್ತ ಪರಮಪುರುಷಾರ್ಥವನ್ನು ಪಡೆಯಬೇಕು.

**ಶಂಕೆ:**—ಸಾಲಿಗ್ರಾಮ ಮುಂತಾದ ಒಂದೊಂದು ಸ್ಥಾನದಲ್ಲಿ ಅನೇಕ ದೇವತೆಗಳನ್ನು ಪೂಜಿಸುವ ಸಂಪ್ರದಾಯವು ಲೋಕದಲ್ಲಿ ಕಂಡುಬರುವುದ ರಿಂದ ಪ್ರತೀಕ (ವಿಗ್ರಹ) ವು ಒಂದೆ ಆದರೂ ಉಪಾಸನೆಗಳು ಅನಂತವಾಗಿರು ವುದರಿಂದ ಅನಿಯತವಿಷಯಕತ್ವವನ್ನು (ಒಂದರಲ್ಲಿ ಹಲವು ದೇವರನ್ನು ಪೂಜಿಸುವುದು) ಎಂಬ ದೋಷವನ್ನು ಪರಿಗಣಿಸಲವಕಾಶವಿಲ್ಲ.

**ಸಮಾಧಾನ:**—ಅಂತಹ ಸ್ಥಲದಲ್ಲಿ ನಿಯಮದಿಂದ ಆಯಾಯ ದೇವತೆಗಳನ್ನು ಬೋಧಿಸುವ ಭಿನ್ನಭಿನ್ನ ಪದಗಳು ಕಂಡುಬರುವುದರಿಂದ ಅನೇಕ ದೇವತೆಗಳ ಉಪಾಸನಾಭೇದವು ನಿರ್ಣಯವಾಗುತ್ತದೆ. ಆದ್ದರಿಂದ ಆ ಸ್ಥಲದಲ್ಲಿ "**ಅನಿಯುತವಿಷಯಕತ್ವ**"ವೆಂಬ ದೋಷವಿರುವುದಿಲ್ಲ. ಆದರೆ ನಿಯತವಾಗಿ ಒಂದೇ ದೇವರನ್ನು ಉಪಾಸಿಸಬೇಕೆಂದು ಸಿದ್ಧವಾಗುವ ಸ್ಥಲದಲ್ಲಿ ಅನಿಯತವಿಷಯಕತ್ವದೋಷವನ್ನು ಅಂಗೀಕರಿಸುವುದೇ ನ್ಯಾಯ ವಾಗಿರುತ್ತದೆ. ಪ್ರಕೃತದಲ್ಲಿ ಒಂದೇ ತೈತ್ತಿರೀಯ ವಾಕ್ಯದಲ್ಲಿ ನಾನಾವಿಧ ವಾದ ದೇವತೋಪಾಸನೆಯನ್ನು ವಿಧಾನಮಾಡುವುದಾದರೆ ಅದರಿಂದ ಉಪಾ ಸಕನಿಗೆ ಮತ್ತಷ್ಟು ಸಂದೇಹವೇ ಉಂಟಾಗುವುದರಿಂದ ಯಾರಿಗೂ ಉಪಾ ಸನೆಯಲ್ಲಿ ಪ್ರವೃತ್ತಿಯೇ ಉಂಟಾಗದೆ ಹೋದೀತು! ಆದ್ದರಿಂದ ತೈತ್ತಿರೀಯ ದಲ್ಲಿರುವ ಮೂರು ಅನುವಾಕಗಳಿಗೂ ಒಂದೇ ದೇವತೆಯನ್ನೇ ಉಪಾಸ್ಯ ವಸ್ತುವನ್ನಾಗಿ ಹೇಳಬೇಕೆಂಬುದೇ ಮುಖ್ಯಾಶಯವಾಗಿರುವುದರಿಂದ ಈ

"ಅನಿಯತವಿಷಯಕತ್ವ" ವೆಂಬುದನ್ನು ದೋಷವನ್ನಾಗಿ ಪರಿಗಣಿಸಲೇ ಬೇಕು.

**ಶಂಕೆ:**—ಹಾಗಾದರೆ ತೈತ್ತಿರೀಯದಲ್ಲಿ ಬಂದಿರುವ ನಾರಾಯಣ ಪದಕ್ಕೆ ಅವಯವಾರ್ಥವನ್ನು ಸ್ವೀಕರಿಸಿ ಶಿವನಿಗೆ ವಿಶೇಷಣವನ್ನಾಗಿ ನಾವು ಅಂಗೀಕರಿಸುವುದಿಲ್ಲ. ಆ ನಾರಾಯಣನೇ ದಹರಾಕಾಶದಲ್ಲಿ ಉಪಾಸಿಸಲ್ಪಡುವ ವಸ್ತುವೆಂದು ಹೇಳುತ್ತೇವೆ.

**ಸಮಾಧಾನ:**—ತೈತ್ತಿರೀಯ ಶ್ರುತಿಯಲ್ಲಿ "**ನಾರಾಯಣ ಪರಂ ಬ್ರಹ್ಮ**" ಎಂದು ನಾರಾಯಣನಿಗೆ ಪರಬ್ರಹ್ಮತ್ವವನ್ನು ಪ್ರತಿಪಾದಿಸುವ ಪದ ವೇನೊ ಇರುತ್ತದೆ. ಆದರೆ, **ಉಪಕ್ರಮ-ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ** ಎಂಬ ಷಡ್ಲಿಂಗಗಳಿಂದ ಶ್ರುತಿಗಳಿಗೆ ತಾತ್ಪರ್ಯವನ್ನು ನಿಶ್ಚಯಿಸಬೇಕಾಗಿದೆ. ಇಲ್ಲಿ ಮೊದಲು "**ಅಣೋರಣೀಯಾನ್**" ಮೊದಲು ಮಾಡಿಕೊಂಡು "**ಮಹಿಮಾನಮೀಶಂ**" ಎಂಬುವವರೆಗೂ ಸಮಸ್ತಪ್ರಾಣಿಗಳ ಹೃದಯಗುಹೆಯೊಳಗೆ ಈಶನು ಅಂತರ್ವರ್ತಿಯಾಗಿರುತ್ತಾನೆಂದೂ, ಮತ್ತು ಆ ಈಶನ ಅನುಗ್ರಹ ದಿಂದ ಎಲ್ಲರೂ ವೀತಶೋಕರಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸುವರೆಂದೂ, ಆ ಈಶನ ಮಹಿಮಾತಿಶಯವನ್ನು ಉಪಕ್ರಮಿಸಿ; ಪುನಃ ಮುಂದೆ "**ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್**" ಎಂದು ಅಂತಹ ಅಪಾರಶಕ್ತಿಯುಳ್ಳ ಆ ಈಶನೇ ಸಕಲ ಜಗತ್ತಿಗೆ ಉಪಾದಾನಕಾರಣನೆಂದು ನಿರೂಪಿಸಿ ಆ ಮೇಲೆ "**ಯೋ ದೇವಾನಾಂ ಪ್ರಥಮಂ ಪುರಸ್ತಾತ್ ವಿಶ್ವಾಧಿಕೋ ರುದ್ರೋ ಮಹರ್ಷಿಃ। ಹಿರಣ್ಯಗರ್ಭಂ ಪಶ್ಯತ ಜಾಯಮಾನಂ**" ಎಂದು ವಿಶ್ವಾಧಿಕನೂ, ಸರ್ವಜ್ಞನೂ ಆದ ಈಶನು ಪ್ರಪಂಚ ಸೃಷ್ಟಿಯ ಮೊದಲು ಹಿರಣ್ಯ ಗರ್ಭನನ್ನು ಹುಟ್ಟಿಸಿದನೆಂದೂ ಹೇಳುವುದರಿಂದ ತಾನು ಪ್ರಪಂಚಕ್ಕೆ ನಿಮಿತ್ತ ಕಾರಣನೆಂದು ಸ್ಪಷ್ಟಪಡಿಸಿ; ಪುನಃ ತಾನೆ "**ಪರೇಣ ನಾಕಂ ನಿಹಿತಂ ಗುಹಾಯಾಂ**" ಎಂದು ದಹರಪುಂಡರೀಕದಲ್ಲಿದ್ದುಕೊಂಡು ನಿಷ್ಕಾಮ ಕರ್ಮಾನುಷ್ಠಾನ ಮಾಡುತ್ತಿರುವ ಸಕಲ ವೇದಾಂತ ತಾತ್ಪರ್ಯವನ್ನು ತಿಳಿದಿರುವ ಜಿತೇಂದ್ರಿಯರಾದ ಯತಿಗಳಿಗೆ "**ಪರಾಮೃತಾತ್ಪರಿಮುಚ್ಯಂತಿ**" ಎಂದು ಬಂಧವನ್ನು ನಿವೃತ್ತಿಗೊಳಿಸಿ ಉತ್ಕೃಷ್ಟವಾದ ಮುಕ್ತಿಯನ್ನು ಕೊಡು

ವನೆಂದು ವರ್ಣಿಸಲ್ಪಟ್ಟಿದೆ. ಅನಂತರದಲ್ಲಿ ಅಂತಹ ಮುಕ್ತಿಯನ್ನು ಪಡೆಯಲು ಉಪಾಯವನ್ನು ತೋರಿಸುವುದಕ್ಕಾಗಿ ಮುಂದೆ "**ದಹರಂ ವಿಪಾಪ್ಮಂ**" ಎಂದು ದಹರಪುಂಡರೀಕೋಪಾಸನೆಯನ್ನು ಆರಂಭಿಸಿ ಅಲ್ಲಿ "**ತಸ್ಮಿನ್ಯದಂತಸ್ತದುಪಾಸಿತವ್ಯಂ**" ಎಂಬುದಾಗಿ ದಹರ ಪುಂಡರೀಕದಲ್ಲಿ ಯಾವುದು ಇರುತ್ತದೆಯೋ ಅದನ್ನೇ ಉಪಾಸಿಸಬೇಕೆಂದು ಸಾಮಾನ್ಯವಾಗಿ ಬೋಧಿಸಿ, ಉಪಾಸ್ಯವಾದ ಆ ವಸ್ತುವು ಯಾವುದೆಂದು ಆಕಾಂಕ್ಷೆಯುಂಟಾಗಿ ಮುಂದೆ "**ಯಃ ಪರಸ್ಸಮಹೇಶ್ವರಃ**" ಎಂದು ದಹರಾಕಾಶದಲ್ಲಿರುವ ವಸ್ತುವು ಮಹೇಶ್ವರರೂಪವಸ್ತುವೆಂದು ಸ್ಪಷ್ಟಪಡಿಸಿದೆ. ಅನಂತರ ಅಂತಹ ಉಪಾಸ್ಯವಸ್ತುವಿನ ರೂಪವೇನೆಂಬ ಶಂಕೆಗೆ "**ಋತಂ ಸತ್ಯಂ........ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ**" ಎಂದು ಕೃಷ್ಣಪಿಂಗಲತ್ವ ವಿರೂಪಾಕ್ಷತ್ವಾದಿ ಲಕ್ಷಣವನ್ನು ತೋರಿಸಿ ಉಪಸಂಹಾರಮಾಡಲಾಗಿದೆ. ಇಂತಹ ಉಪಕ್ರಮ ಉಪಸಂಹಾರದ ಮಧ್ಯದಲ್ಲಿ "**ನಾರಾಯಣ ಪರಂ ಬ್ರಹ್ಮ**" ಎಂಬುದೊಂದು ವಿಶೇಷ ವಾಕ್ಯವು ಬಂದಿರುವುದರಿಂದ ಆ ನಾರಾಯಣಪದಕ್ಕೆ "**ಪೂರ್ವಾಧಿಕರಣ**" ನ್ಯಾಯಾನುಸಾರವಾಗಿ ಉಪಾಸಕನೆಂದೇ ಅರ್ಥ ಮಾಡಬೇಕೆಂದು ಸಿದ್ಧವಾಗುತ್ತದೆ. ಆದರೆ ಎಲ್ಲರೂ ಉಪಾಸಕರಾಗಿರುವಾಗ ಇಲ್ಲಿ ನಾರಾಯಣನನ್ನೇ ಉಪಾಸಕನನ್ನಾಗಿ ಸ್ವೀಕರಿಸುವುದರಿಂದ ಎಲ್ಲಾ ಉಪಾಸಕರಿಗಿಂತಲೂ ನಾರಾಯಣನು ಅತ್ಯಧಿಕನೆಂಬ ಅರ್ಥವು ತೋರುತ್ತದೆ. ಆದುದರಿಂದ ಇಲ್ಲಿ ಉಪಾಸ್ಯನೂ, ವಿರೂಪಾಕ್ಷ ಶಬ್ದವಾಚ್ಯನೂ ಆದ ಬ್ರಹ್ಮಕ್ಕೂ ಆ ಬ್ರಹ್ಮೋಪಾಸಕನಾದ ನಾರಾಯಣನಿಗೂ "**ನಾರಾಯಣ ಪರಂ ಬ್ರಹ್ಮ**" ವೆಂದು ಅಭೇದವನ್ನು ತೋರಿಸಿರುತ್ತಾರೆ. ಹಾಗಿಲ್ಲದಿದ್ದರೆ . ಉಪಕ್ರಮೋಪಸಂಹಾರಾದಿ ಷಡ್ಲಿಂಗ ತಾತ್ಪರ್ಯಕ್ಕೆ ವಿರೋಧವಾಗುತ್ತದೆ. ಈ ಅಭಿಪ್ರಾಯವು "**ಸರ್ವತ್ರ ಪ್ರಸಿದ್ಧೋಪದೇಶಾತ್**" "**ವಿವಕ್ಷಿತಗುಣೋಪಪತ್ತೇಶ್ಚ**" (ಬ್ರ. ಸೂ.) ೧-೨. ೧-೨ ಎಂಬ ಬ್ರಹ್ಮಸೂತ್ರ ಭಾಷ್ಯದಲ್ಲಿ ಪರಿಷ್ಕರಿಸಲ್ಪಟ್ಟಿದೆ.

**ಶಂಕೆ :**—ಹೀಗೆ ಪೂರ್ವೋತ್ತರ ವಾಕ್ಯಗಳನ್ನು ವಿಚಾರಮಾಡುವುದರಿಂದ ದಹರಾಕಾಶದಲ್ಲಿ ಉಪಾಸಿಸಲ್ಪಡುವ ವಸ್ತುವು ಶಿವರೂಪ ವಸ್ತುವೆಂದು ನಿರ್ಣಯವಾದರೂ ಲೋಕದಲ್ಲಿ ಯಾರಾದರೂ ಉಪಾಸನೆ ಮಾಡಬೇಕಾದರೆ

ಉಪಾಸಕ, ಉಪಾಸ್ಯ, ಉಪಾಸನೆ ಎಂಬ ಮೂರರ ಆವಶ್ಯಕತೆಯು ಇರಬೇಕು. ಇಲ್ಲಿ ದಹರಾಕಾಶದಲ್ಲಿ ಉಪಾಸ್ಯ ವಸ್ತುವು ಶಿವನೆಂದು ಹೇಳಿದ ಮೇಲೆ ಇಂಥ ಶಿವನನ್ನು ಉ ಪಾಸನೆಮಾಡುವ ಉಪಾಸಕನಾರು ?

**ಸಮಾಧಾನ:—** ತೈತ್ತಿರೀಯದಲ್ಲಿ "**ನಾರಾಯಣಂ ಮಹಾಜ್ಞೇಯಂ**" ಎಂದು ಹೇಳುತ್ತ ಮುಂದೆ "**ಪದ್ಮಕೋಶ ಪ್ರತೀಕಾಶಂ**" ಎಂದು ಕಮಲಸದೃಶವಾದ ದಹರಪುಂಡರೀಕವನ್ನು ತೋರಿಸಿರುತ್ತಾರೆ. ಈ ವಾಕ್ಯದ ಸಮೀಪದಲ್ಲಿ "**ನಾರಾಯಣಂ ಮಹಾಜ್ಞೇಯಂ**" ಎಂಬ ವಾಕ್ಯವಿರುವುದರಿಂದ ನಾರಾಯಣನ ಹೃದಯಕಮಲವೆಂದೇ ನಿಶ್ಚಯಿಸಬೇಕು. ಸಮೀಪದಲ್ಲಿರುವ ಪದವನ್ನು ಬಿಟ್ಟು ದೂರದಲ್ಲಿರುವ ಪದವನ್ನು ತೆಗದುಕೊಳ್ಳುವುದು "**ಅಪರಿಮಿತಾಧಿಕರಣ**" ಎಂಬ ಮೀಮಾಂಸಾ ನ್ಯಾಯಕ್ಕೆ ವಿರೋಧವೆನಿಸುತ್ತದೆ. ಆ ನ್ಯಾಯಸ್ವರೂಪವಾದರೊ ಯಾಗೀಯವಾದ ಆಧಾನದಲ್ಲಿ 'ಅವನಿಗೆ ಒಂದನ್ನು ಕೊಡಬೇಕು', 'ಇವನಿಗೆ ಆರು ಕೊಡಬೇಕು', 'ಮತ್ತೊಬ್ಬನಿಗೆ ಹನ್ನೆರಡನ್ನು ಕೊಡಬೇಕು', 'ಇನ್ನೊಬ್ಬನಿಗೆ ಇಪ್ಪತ್ತುನಾಲ್ಕು ಕೊಡಬೇಕು', 'ಇವನಿಗೆ ನೂರು ಕೊಡಬೇಕು', 'ಅವನಿಗೆ ಸಾವಿರ ಕೊಡಬೇಕು', 'ಆತನಿಗೆ ಅಪರಿಮಿತವಾಗಿ ಕೊಡಬೇಕು' ಎಂದು ಹೇಳಲ್ಪಟ್ಟದೆ. ಇಲ್ಲಿ ಅಪರಿಮಿತಪದವು ಸಮೀಪದಲ್ಲಿರುವ ಸಹಸ್ರ, ಶತ, ಏಕತ್ವಾದಿ ಪದಗಳನ್ನು ನಿಷೇಧಿಸುತ್ತದೆಯೊ ಅಥವಾ ಲೋಕದಲ್ಲಿ ವ್ಯವಹರಿಸುವ ಸಂಖ್ಯಾಸಾಮಾನ್ಯವನ್ನೇ ನಿಷೇಧಿಸುತ್ತದೆಯೊ ಎಂಬ ಸಂದೇಹವುತ್ಪನ್ನವಾಗಿ ಆ ಅಪರಿಮಿತಪದವು ಸಮೀಪದಲ್ಲಿರುವ ಏಕತ್ವಾದಿ ಸಂಖ್ಯೆಗಳನ್ನು ಮಾತ್ರ ನಿಷೇಧಿಸುವುದಲ್ಲದೆ ಲೋಕದಲ್ಲಿರುವ ಎಲ್ಲಾ ಸಂಖ್ಯೆಗಳನ್ನೂ ನಿಷೇಧಿಸುವುದಿಲ್ಲ. ಇದರಂತೆ "**ಪದ್ಮಕೋಶಪ್ರತೀಕಾಶಂ**" ಎಂಬ ವಾಕ್ಯದ ಸಮೀಪದಲ್ಲಿ ನಾರಾಯಣಪದವಿರುವುದರಿಂದ ಅಂಥ ನಾರಾಯಣನ ಹೃದಯಕಮಲವೆಂದೇ ನಿರ್ಣಯವಾಗುವುದರಿಂದಲೂ, ತನ್ನ ಹೃದಯದಲ್ಲಿ ತಾನೇ ಉಪಾಸ್ಯವೆನಿಸದಿರುವುದರಿಂದ ನಾರಾಯಣನೇ ಉಪಾಸಕನೆಂದೂ, ಶಿವನೇ ಉಪಾಸ್ಯನೆಂದೂ ಸಿದ್ಧವಾಗುತ್ತದೆ.

**ಶಂಕೆ—**ನಾರಾಯಣನು ತನ್ನ ಹೃದಯಕಮಲದಲ್ಲಿ ಶಿವನನ್ನು

ಉಪಾಸಿಸುತ್ತಾನೆಂಬ ಅರ್ಥವನ್ನೇಕೆ ಮಾಡಬೇಕು? ಈ ದಹರವಾಕ್ಯದ ಸಮೀಪದಲ್ಲಿಯೇ

ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ । ಸಂನ್ಯಾಸಯೋಗಾದ್ಯತಯಶ್ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥

(ತೈ. ಉ. ೪-೧೨-೨೪)

"ವೇದಾಂತವಿಚಾರದಿಂದ ತತ್ತ್ವವನ್ನು ನಿರ್ಣಯಿಸಿ ಪರಿಶುದ್ಧ ಗುಣವುಳ್ಳವರಾಗಿ ಸರ್ವಸಂಗಪರಿತ್ಯಾಗಮಾಡಿದ ಸಂನ್ಯಾಸಿಗಳು ಇರುವವರೆಗೆ ಜೀವನ್ಮುಕ್ತರಂತೆ ವ್ಯವಹರಿಸಿ ದೇಹಾವಸಾನದಲ್ಲಿ ಆ ಪರಮಾತ್ಮನನ್ನು ಸೇರಿ ನಿತ್ಯಸುಖವನ್ನು ಪಡೆಯುವರು" ಎಂಬ ಮಂತ್ರವಿರುವುದರಿಂದ ಸಂನ್ಯಾಸಿಗಳೇ ದಹರಾಕಾಶದಲ್ಲಿ ಉಪಾಸನೆಮಾಡಲು ಅಧಿಕಾರಿಗಳೆಂದು ಸ್ಪಷ್ಟಪಡುವುದರಿಂದ ಅಂಥ ಸರ್ವಸಂಗಪರಿತ್ಯಾಗ ಮಾಡಿದ ಸಂನ್ಯಾಸಿಗಳು ಉಪಾಸಕರೆಂದು ಹೇಳುವುದನ್ನು ಬಿಟ್ಟು ನಾರಾಯಣನನ್ನು ಉಪಾಸಕನನ್ನಾಗಿ ಹೇಳುವುದುಚಿತವಲ್ಲ.

**ಸಮಾಧಾನ:**—ಪೂರ್ಣಿಮೆಯಲ್ಲಿಯೂ, ಅಮಾವಾಸ್ಯೆಯಲ್ಲಿಯೂ ಮಾಡುವ ಯಾಗಕ್ಕೆ "**ದರ್ಶಪೂರ್ಣಮಾಸೇಷ್ಟಿ**" ಎಂದು ಹೇಳುತ್ತಾರೆ. ಈ ಪ್ರಕರಣದಲ್ಲಿ "**ಸಮಿಧೋ ಯಜತಿ**", "**ಇಡೋ ಯಜತಿ**" "**ಬರ್ಹಿರ್ಯಜತಿ**" "**ತನೂನಪಾತಂ ಯಜತಿ**" "**ಸ್ವಾಹಾಕಾರಂ ಯಜತಿ**" ಎಂದು ಪಂಚ ಪ್ರಯಾಜಗಳು ಹೇಳಲ್ಪಟ್ಟಿರುತ್ತವೆ. ಈ ಪ್ರಯಾಜಗಳು ದರ್ಶಪೂರ್ಣಮಾಸೇಷ್ಟಿಪ್ರಕರಣದಲ್ಲಿ ಹೇಳಲ್ಪಟ್ಟಿರುವುದರಿಂದ ಆ ದರ್ಶಪೂರ್ಣಮಾಸೇಷ್ಟಿಯೆಂಬ ಯಾಗಕ್ಕೆ ಅಂಗಗಳಾಗುವುವೇ ಹೊರತು ಮತ್ತೊಂದು ಯಾಗದಲ್ಲಿ ಅಂಗಗಳೆನಿಸಲಾರವೆಂದು ಮೀಮಾಂಸಾ ಶಾಸ್ತ್ರದಲ್ಲಿ ನಿರ್ಧರಿಸಲ್ಪಟ್ಟದೆ. ಅದರಂತೆ "**ನಾರಾಯಣಂ ಮಹಾಜ್ಞೇಯಂ**" "**ನಾರಾಯಣಂ ಪರಂ ಜ್ಯೋತಿಃ**" "**ನಾರಾಯಣಂ ಪರೋ ಧ್ಯಾತಾ**" ಎಂಬ ನಾರಾಯಣ ಪ್ರಕರಣದಲ್ಲಿ "**ಪದ್ಮಕೋಶ ಪ್ರತೀಕಾಶಂ**" ಎಂದು ಹೃದಯ ಕಮಲವನ್ನು ತೋರಿಸಿರುವುದರಿಂದ ನಾರಾಯಣನ ಸಂಬಂಧಿ ಹೃದಯಕಮಲವೆಂದು ಅರ್ಥಮಾಡುವುದೇ ಉಚಿತವಲ್ಲದೆ ಸಂನ್ಯಾಸಿಗಳ

ಹೃದಯಕಮಲವೆಂದು ಅರ್ಥಮಾಡುವುದು ಪ್ರಕರಣ ವಿರೋಧವೆನಿಸುವುದು. ಇದಲ್ಲದೆ ನಾರಾಯಣನು ತನ್ನ ಹೃದಯಕಮಲದಲ್ಲಿ ಶಿವನನ್ನು ಉಪಾಸಿಸುತ್ತಿರುವನೆಂಬ ವಿಷಯವು ವಾಮನಪುರಾಣ, ಭಗವದ್ಗೀತೆಗಳಿಂದಲೂ ಸ್ಪಷ್ಟವಾಗುತ್ತದೆ.

ತತೋಽವ್ಯಯಾತ್ಮಾ ಸಹರಿಃ ಸ್ವಹೃತ್ಪಂಕಜಶಾಯಿನಮ್ ।
ದರ್ಶಯಾಮಾಸ ದೇವಾನಾಂ ಮುರಾರಿರ್ಲಿಂಗಮೈಶ್ವರಮ್ ॥

(ವಾಮನಪುರಾಣ.)

ನಾಶರಹಿತನಾದ ಶ್ರೀ ನಾರಾಯಣನು ತನ್ನ ಹೃದಯಪುಂಡರೀಕದಲ್ಲಿರುವ ಲಿಂಗರೂಪನಾದ ಸದಾಶಿವನನ್ನು ದೇವತೆಗಳಿಗೆ ತೋರಿಸಿದನು.

ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ।

(ಭಗವದ್ಗೀತಾ)

ಎಲೌ ಅರ್ಜುನನೇ, ಜಗದಾದಿಯಲ್ಲಿ ಯಾವ ಪುರುಷನ ದೆಸೆಯಿಂದ ಜಗನ್ನಿರ್ಮಾಣ ರೂಪವಾದ ಪ್ರವೃತ್ತಿಯುಂಟಾಯಿತೊ ಅಂಥ ಆದಿ ಪುರುಷನಿಗೆ ನಾನು ಶರಣಾಗತನಾಗುವೆನು.

ಹೀಗೆ ಶ್ರೀ ಕೃಷ್ಣನು ತನ್ನಿಂದ ಉಪಾಸಿಸಲ್ಪಡುವ ವಸ್ತುವನ್ನು ಅರ್ಜುನನಿಗೆ ಬೋಧಿಸುತ್ತ ತನಗೆ ಉಪಾಸ್ಯವಾದ ವಸ್ತುವಾವುದೆಂದು ತಾನೇ ಆಕ್ಷೇಪಿಸಿ ಮುಂದೆ

" ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥
ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ॥

(ಭಗವದ್ಗೀತಾ)

ಎಲೌ ಅರ್ಜುನನೇ ? ನನ್ನಿಂದ ಉಪಾಸಿಸಲ್ಪಡುವ ಪುರುಷನಾದರೋ ಸರ್ವೋತ್ತಮನಾಗಿರುತ್ತಾನೆ. ಅವನು ನನಗಿಂತಲೂ ಬೇರೆಯಾಗಿರುತ್ತಾನೆ. ಅವನನ್ನೇ ಪರಮೇಶ್ವರನೆಂದು ಹೇಳುತ್ತಾರೆ. ನಾಶರಹಿತನಾದ ಯಾವ

ಈಶ್ವರನು ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನೂ ಅಂತರ್ಯಾಮಿ ರೂಪದಿಂದಿದ್ದು ಕಾಪಾಡುತ್ತಿರುವನೊ ಅಂಥ ಸರ್ವ ನಿಯಾಮಕನಾದ ಈಶ್ವರನು ಹೃದಯಕಮಲದಲ್ಲಿರುತ್ತಾನೆ.

ಹೀಗೆ ಶ್ರೀ ಕೃಷ್ಣನು ಯಾವಾಗಲೂ ತನ್ನ ಹೃದಯಕಮಲದಲ್ಲಿ ತನ್ನಿಂದ ಉಪಾಸಿಸಲ್ಪಡುತ್ತಿರುವ ಶಿವರೂಪ ವಸ್ತುವನ್ನು ಅರ್ಜುನನಿಗೆ ಬೋಧಿಸಿರುತ್ತಾನೆ. ಮತ್ತು ಇಲ್ಲಿ ಶಿವನೋರ್ವನಲ್ಲಿ ರೂಢವಾಗಿರುವ ಈಶ್ವರ ಎಂಬ ಪದವನ್ನು ಶ್ರೀ ಕೃಷ್ಣನು ಪ್ರಯೋಗಿಸಿರುವುದರಿಂದಲೂ, ಈ ಈಶ್ವರ ಶಬ್ದವು "ಈಶ್ವರಶ್ಶರ್ವಈಶಾನ" ಎಂಬ ನಿಘಂಟುವಿನ ಪ್ರಮಾಣದಿಂದ ಶಿವನಲ್ಲಿಯೇ ಶಕ್ತಿಯುಳ್ಳದುದರಿಂದಲೂ ಶ್ರುತಿಯಲ್ಲಿ ತೋರಿಸಿದ "ದಹರಂ ವಿಪಾಪ್ಮಂ........ತದುಪಾಸಿತವ್ಯಂ" ಎಂಬ ತೈತ್ತಿರೀಯಲ್ಲಿ ಹೇಳಲ್ಪಟ್ಟ ದಹರೋಪಾಸನೆಗೆ ಆಶ್ರಯವಾದ ಹೃದಯಕಮಲವಾದರೋ ನಾರಾಯಣನ ಹೃದಯಕಮಲವೆಂದೇ ಸಿದ್ಧವಾಗುವುದರಿಂದ ಶಿವನೇ ಉಪಾಸ್ಯನೆಂದೂ ನಾರಾಯಣನೇ ಉಪಾಸಕನೆಂದೂ ಸ್ಪಷ್ಟವಾಗುತ್ತದೆ.

**ಶಂಕೆ :**—ಆದರೆ ಶಿವನು ಉಪಾಸ್ಯವಸ್ತುವೆಂದು ಸಿದ್ಧವಾದರೂ ಆ ಶಿವನು ಲಿಂಗರೂಪನಾಗಿರುವನೆಂಬುದು ಸ್ಪಷ್ಟವಾಗಲಿಲ್ಲ, ಆದುದರಿಂದ ಉಪಕ್ರಮಿಸಿದ ಅಂತರ್ಲಿಂಗಧಾರಣವೇ ಸಿದ್ಧಿಯಾಗಲಿಲ್ಲ.

**ಸಮಾಧಾನ :**—ಹಿಂದೆ ಉದಾಹರಿಸಿದ "**ಮುರಾರಿರ್ಲಿಂಗಮ್ಮೆಶ್ವರಂ**" ಎಂದು ವಾಮನಪುರಾಣೋಕ್ತಿಯಿಂದಲೇ ಶಿವನಿಗೆ ಲಿಂಗರೂಪತ್ವವು ಸಿದ್ಧಿಸುವುದಲ್ಲದೆ ಹಂಸೋಪನಿಷತ್ತು, ಶಿವಾಗಮ, ಪುರಾಣಾದಿಗಳಲ್ಲಿ ಶಿವನು ಲಿಂಗರೂಪನಾಗಿರುತ್ತಾನೆಂದು ಸ್ಪಷ್ಟವಾಗಿ ಹೇಳಿರುತ್ತದೆ.

**ಏಷೋಽಸೌ ಪರಮೋ ಹಂಸೋ ಭಾನುಕೋಟಿಪ್ರತೀಕಾಶೋ ಏನೇದಂ ವ್ಯಾಪ್ತಮ್ । ತಸ್ಯಾಷ್ಟಧಾ ವೃತ್ತಿರ್ಭವತಿ ಪೂರ್ವದಲೇ ಪುಣ್ಯವೃತ್ತಿಃ ॥ ಆಗ್ನೇಯೇ ನಿದ್ರಾಲಸ್ಯಾದಯೋ ಭವಂತಿ । ಯಾಮ್ಯೇ ಕ್ರೌರ್ಯಮತಿಃ । ನೈಋತೇ ಪಾಪೇ ಮನಿಷಾ । ವಾರುಣ್ಯಾಂಕ್ರೀಡಾ । ವಾಯವ್ಯೇ ಗಮನಾದಾ ಬುದ್ಧಿಃ ।**

**ಸೌಮ್ಯೇ ರತಿಪ್ರೀತಿಃ । ಐಶಾನ್ಯೇ ದ್ರವ್ಯಾದಾನಂ । ಮಧ್ಯೇ ವೈರಾಗ್ಯಮ್ ।**

**ಕೇಸರೇ ಜಾಗ್ರದವಸ್ಥಾ । ಕರ್ಣಿಕಾಯಾಂ ಸ್ವಪ್ನಃ ।**

**ಲಿಂಗೇ ಸುಷುಪ್ತಿಃ । ಪದ್ಮತ್ಯಾಗೇ ತುರೀಯಂ । ಯದಾ ಹಂಸೋ**

**ನಾದೇ ವಿಲೀನೋ ಭವತಿ ತದಾ ತತ್ತುರ್ಯಾತೀತಮಪಿ ॥**

(ಹಂಸೋಪನಿಷತ್ತು)

ಅನ್ವಯಾರ್ಥ—ಯೇನ-ಯಾವ ಹೃದಯಕಮಲದಲ್ಲಿರುವ ಈಶ್ವರ ನಿಂದ, ಇದಂ-ಚೇತನಾಚೇತನಾತ್ಮಕವಾದೀ ಜಗತ್ತು, ವ್ಯಾಪ್ತಂ-ವ್ಯಾಪಿಸಲ್ಪಟ್ಟಿರುತ್ತದೆಯೋ, ಏಷಃ-ಇಂಥ, ಅಸೌ-ಈ ಪರಮೇಶ್ವರನು, ಪರಮಃ-ನಿರತಿಶಯವಾದ ಉತ್ಕೃಷ್ಟತೆಯುಳ್ಳವನು, ಹಂಸಃ – ಹಾಲು ಮತ್ತು ನೀರನ್ನು ಬೇರ್ಪಡಿಸುವ ಹಂಸಪಕ್ಷಿಯೋಪಾದಿಯಲ್ಲಿ ವಿವೇಚನೆ, ನಿರ್ಮಲತೆ ಮುಂತಾದ ಸದ್ಗುಣಗಳಿಂದ ಮಂಡಿತನಾಗಿಹನು, ತಸ್ಯ-ಅಂಥ ಪರಮಹಂಸ ರೂಪಿಯಾಗಿರುವ ಶಿವನ ವಾಸಸ್ಥಾನವಾಗಿರುವ ಆ ಹೃದಯಕಮಲಕ್ಕೆ, ಅಷ್ಟಧಾ-ಎಂಟು ವಿಧಗಳಾದ, ವೃತ್ತಿಃ-ದಳಗಳಿರುತ್ತವೆ. ಆ ದಳಗಳಲ್ಲಿ ಸಂಚರಿಸುವ ಆತ್ಮನು, ಪೂರ್ವದಳೇ-ಪೂರ್ವದಳಕ್ಕೆ ಬರಲು ಪುಣ್ಯ ಕರ್ಮವನ್ನು ಮಾಡಬೇಕೆಂಬ ಬುದ್ಧಿಯುಂಟಾಗುತ್ತದೆ. ಆಗ್ನೇಯೇ, ಅಗ್ನಿದಿಕ್ಕಿನ ದಳಕ್ಕೆ ಬರಲು, ನಿದ್ರಾಲಸ್ಯಾದಯಃ-ನಿದ್ರೆ ಜಾಡ್ಯಮಾಂದ್ಯಾದಿ ದೋಷಗಳು, ಭವಂತಿ-ಹುಟ್ಟುತ್ತವೆ. ಯಾಮ್ಯೇ-ದಕ್ಷಿಣದಿಕ್ಕಿಗೆ ಬರಲು, ಕ್ರೌರ್ಯಮತಿಃ – ಕ್ರೂರಬುದ್ಧಿಯುದಯಿಸುವುದು. ನೈಋತ್ಯೇ – ನೈಋತ್ಯ ದಿಕ್ಕಿಗೆ ಬರಲು ಪಾಪೇ-ಪಾಪಕರ್ಮವನ್ನು ಮಾಡಬೇಕೆಂಬ, ಮನೀಷಾ-ಬುದ್ಧಿಯುದಯಿಸುವುದು. ವಾರುಣ್ಯಾಂ-ಪಶ್ಚಿಮದಿಕ್ಕಿಗೆ ಬರಲು, ಕ್ರೀಡಾ-ವಿಹರಿಸಬೇಕೆಂಬ ಇಚ್ಛೆಯುಂಟಾಗುವುದು, ವಾಯವ್ಯೇ-ವಾಯವ್ಯದಿಕ್ಕಿಗೆ ಬರಲು ಗಮನಾದೌ-ಹೋಗುವುದು, ಬರುವುದು, ಮುಂತಾದುದರಲ್ಲಿ, ಬುದ್ಧಿಃ-ಇಚ್ಛೆಯುಂಟಾಗುವುದು. ಸೌಮ್ಯೇ – ಉತ್ತರಕ್ಕೆ ಬರಲು ರತಿಪ್ರೀತಿಃ – ಕಾಮೇಚ್ಛೆಯುಂಟಾಗುವುದು. ಐಶಾನ್ಯೇ-ಈಶಾನ್ಯದಿಕ್ಕಿಗೆ ಬರಲು, ದ್ರವ್ಯಾದಾನಂ-ಹಣವನ್ನು ಗಳಿಸಬೇಕೆಂಬ ಇಚ್ಛೆಯುಂಟಾಗುವುದು. ಮಧ್ಯೇ-ಮಧ್ಯ

ಭಾಗದಲ್ಲಿರಲು ವೈರಾಗ್ಯಂ-ವಿಷಯದಲ್ಲಿ ವಿರಕ್ತಿಹುಟ್ಟುವುದು. ಕೇಸರೇ-ಕಿಂಜಲ್ಕದಲ್ಲಿ ನಿಲ್ಲಲು, ಜಾಗ್ರದವಸ್ಥಾ-ಜಾಗರಣೆಯುಂಟಾಗುವುದು. ಕರ್ಣಿಕಾಯಾಂ - ಕಮಲಮಧ್ಯದ ಕರ್ಣಿಕೆಯಲ್ಲಿರಲು, ಸ್ವಪ್ನಃ - ಸ್ವಪ್ನಾವಸ್ಥೆಯುಂಟಾಗುವುದು. ಲಿಂಗೇ-ಲಿಂಗದಲ್ಲಿ ನಿಲ್ಲಲು ಸುಷುಪ್ತ್ಯಾವಸ್ಥೆಯುಂಟಾಗುವುದು. ಪದ್ಮತ್ಯಾಗೇ - ಆ ಹೃದಯಕಮಲವನ್ನೇ ಬಿಡಲು, ತುರೀಯಂ-ತುರೀಯಾವಸ್ಥೆಯೂ, ಯದಾ - ಯಾವಾಗ, ಹಂಸಃ - ಹಂಸಪಕ್ಷಿಯಂತೆ ಗುಣದೋಷಗಳ ವಿವೇಚನೆಯುಳ್ಳ ಆತ್ಮನು, ನಾದೇ - ನಾದ ಸ್ವರೂಪ ಬ್ರಹ್ಮದಲ್ಲಿ, ವಿಲೀನಃ-ಸೇರಿದವನಾಗಿ, ಭವತಿ ಆಗುತ್ತಾನೆಯೋ, ತದಾ-ಆಗ, ತತ್-ಅದು, ತುರ್ಯಾತೀತಂ-ತುರೀಯಾತೀತಾವಸ್ಥೆಯೆನಿಸುವುದು.

ಹೃದಯಕಮಲದಲ್ಲಿ ಸಂಚರಿಸುವ ಹಂಸರೂಪಿಯಾದ ಆತ್ಮನು ಆ ಕಮಲದ ಯಾವ ಯಾವ ದಳದಲ್ಲಿ ಸಂಚರಿಸುವನೋ ಆಯಾಯ ವೃತ್ತಿಗಳು ಉದಯವಾಗುವುವು. ಕಮಲಮಧ್ಯದ ಕೇಸರದಲ್ಲಿ ಸಂಚರಿಸುವಾಗ ಆತ್ಮನು ಜಾಗ್ರದವಸ್ಥೆಯಿಂದೊಡಗೂಡುವನು. ಕರ್ಣಿಕೆಯಲ್ಲಿ ಸೇರಲು ಸ್ವಪ್ನಾವಸ್ಥೆಯಿಂದೊಡಗೂಡುವನು. ಲಿಂಗದಲ್ಲಿ ಸೇರಲು ಸುಷುಪ್ತ್ಯಾವಸ್ಥೆಯಿಂದೊಡಗೂಡುವನು. ಆ ಹೃದಯಸ್ಥಾನವನ್ನೇ ತ್ಯಜಿಸಲು ತುರೀಯಾವಸ್ಥೆಯಿಂದೊಡಗೂಡುವನು. ಬ್ರಹ್ಮದಲ್ಲಿ ಲೀನವಾಗಲು ತುರೀಯಾತೀತಾವಸ್ಥೆಯಿಂದೊಡಗೂಡುವನು. ಅಂದರೆ ಮುಖದಲ್ಲಿ ಜಾಗ್ರದವಸ್ಥೆಯೂ, ಹೃದಯದಲ್ಲಿ ಸ್ವಪ್ನಾವಸ್ಥೆಯೂ, ನಾಭಿಯಲ್ಲಿ ಸುಷುಪ್ತ್ಯವಸ್ಥೆಯೂ, ವಸ್ತಿಯಲ್ಲಿ ತುರಿಯಾವಸ್ಥೆಯೂ, ಲಿಂಗದಲ್ಲಿ ತುರೀಯಾತೀತಾವಸ್ಥೆಯೂ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತವೆ. ಅವುಗಳಲ್ಲಿ ತ್ವಕ್, ರಸನಾ, ಘ್ರಾಣ, ಚಕ್ಷುಃ, ಶ್ರೋತ್ರಗಳೆಂಬ ಪಂಚಜ್ಞಾನೇಂದ್ರಿಯಗಳೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚ ತನ್ಮಾತ್ರೆಗಳೂ, ವಾಕ್, ಪಾಣಿ, ಪಾದ, ಪಾಯು, ಉಪಸ್ಥೆಗಳೆಂಬ ಪಂಚಕರ್ಮೇಂದ್ರಿಯಗಳೂ, ವಚನ, ಆದಾನ, ಗಮನ, ರೇಚನ, ವಿಸರ್ಜನ ಎಂಬ ಪಂಚವಿಷಯಗಳೂ, ದಶವಾಯುಗಳೂ, ಮನೋ ಬುದ್ಧಿ ಅಹಂಕಾರ ಚಿತ್ತಗಳೆಂಬ ಅಂತಃಕರಣಚತುಷ್ಟಯ ಮತ್ತು ಕ್ಷೇತ್ರಜ್ಞ ಎಂಬ ಮುವತ್ತೈದು ತತ್ತ್ವಗಳು ಜಾಗ್ರದವಸ್ಥೆಯಲ್ಲಿರುವುವು. ಶಬ್ದಾದಿ ತನ್ಮಾತ್ರೆಗಳೈದು, ವಚನಾದಿ ಪಂಚ ವಿಷಯಗಳು, ಪ್ರಾಣಾದಿ ದಶವಾಯುಗಳು,

ಅಂತಃಕರಣ ಚತುಷ್ಟಯ, ಕ್ಷೇತ್ರಜ್ಞ ಈ ಇಪ್ಪತ್ತೈದು ತತ್ತ್ವಗಳು ಸ್ವಪ್ನಾವಸ್ಥೆಯಲ್ಲಿರುತ್ತವೆ. ಜಾಗ್ರದವಸ್ಥೆಯಲ್ಲಿ ವಿಷಯಗಳ ಅನುಭವವುಂಟು. ಸ್ವಪ್ನಾವಸ್ಥೆಯಲ್ಲಿ ಆ ವಿಷಯಗಳ ಸ್ಫೂರ್ತಿ ಮಾತ್ರವುಂಟು. ಸುಷುಪ್ತ್ಯವಸ್ಥೆಯಲ್ಲಿ ಪ್ರಾಣ, ಚಿತ್ತ, ಕ್ಷೇತ್ರಜ್ಞ ಎಂಬ ಮೂರು ತತ್ತ್ವಗಳು ಮಾತ್ರವುಂಟು. ತುರೀಯಾವಸ್ಥೆಯಲ್ಲಿ ಪ್ರಾಣ, ಆತ್ಮ ಎಂಬ ಎರಡು ತತ್ತ್ವಗಳು ಮಾತ್ರ ವುಂಟು. ತುರೀಯಾತೀತಾವಸ್ಥೆಯಲ್ಲಿ ಆತ್ಮ ಮಾತ್ರ ವುಂಟೆಂದು ತಿಳಿಯಬೇಕು. ಹೀಗೆ ಈ ಐದು ಅವಸ್ಥೆಗಳು ಮಲಸಂಬಂಧಿಯಾದ ಆತ್ಮನಿಗುಂಟಾಗುತ್ತವೆ. ಅನಂತರದಲ್ಲಿ ನಿರ್ಮಲಾತ್ಮಸ್ವರೂಪಕ್ಕೆ ಶಿವನೊಡನೆ ಪರಮಸಾಮ್ಯಾಪತ್ತಿಯೆಂಬ ಶಿವತ್ವಪ್ರಾಪ್ತಿಯುಂಟಾಗುವುದು, ಇಂಥ ಆತ್ಮಸ್ವರೂಪಕ್ಕೆ **ಸಮಲಜಾಗ್ರದಾದ್ಯವಸ್ಥೆ**ಗಳಿಲ್ಲದಿದ್ದರೂ **ಅಮಲಜಾಗ್ರದಾದ್ಯವಸ್ಥೆ**ಗಳುಂಟಾಗುತ್ತವೆ. ಬೀಜಾಕ್ಷರದ ಉಚ್ಚಾರಣೆಯೇ ಜಾಗ್ರದವಸ್ಥೆಯು. ಬಿಂದು ಪರಿಗ್ರಹವೇ ಸ್ವಪ್ನಾವಸ್ಥೆಯು. ನಾದಸಂಯೋಗವೇ ಸುಷುಪ್ತ್ಯವಸ್ಥೆಯು. ಶಕ್ತಿಸಮಾಗಮವೇ ತುರೀಯಾವಸ್ಥೆಯು. ಪರಶಿವ ತೇಜಸ್ಸಿನಲ್ಲಿ ಶಾಂತನಾಗಿ ಪರಮಸಾಮ್ಯಾಪತ್ತಿಯೆಂಬ ಲಯವನ್ನು ಪಡೆಯುವಿಕೆಯೇ ತುರೀಯಾತೀತಾವಸ್ಥೆಯು. ಇಲ್ಲಿ ಮೊದಲು ಎಂಟು ದಳಗಳೆಂದು ಹೇಳಿ ಹದಿನಾರು ಭಾಗಗಳನ್ನು ತೋರಿಸಿರುವುದನ್ನು ನೋಡಿದರೆ ಮೊದಲಿನ ಎಂಟು ಭಾಗಗಳನ್ನು ಮಾತ್ರ ದಳಗಳೆಂದು ತಿಳಿಯಬೇಕು.

ಈ ಮಂತ್ರದಲ್ಲಿ "**ಲಿಂಗೇ ಸುಷುಪ್ತಿಃ**" ಎಂಬ ವಾಕ್ಯವಿರುವುದರಿಂದ ಇಂಥ ಹೃದಯಕಮಲದಲ್ಲಿ ಮಧ್ಯಭಾಗ, ಕೇಸರ, ಕರ್ಣಿಕೆ ಇವುಗಳ ಹೊರತು ನಾಲ್ಕನೆಯದಾದ ಮತ್ತೊಂದು ಭಾಗವು ಇಲ್ಲದುದರಿಂದ "**ಲಿಂಗೇ ಸುಷುಪ್ತಿಃ**" ಎಂಬ ವಾಕ್ಯವೇ ವ್ಯರ್ಥವಾಗಬೇಕಾಗುವುದು. ಆದುದರಿಂದ ಲಿಂಗಶಬ್ದಕ್ಕೆ ಶಿವನೆಂದು ಅರ್ಥಮಾಡುವುದೇ ಸಾಧುವಾದುದು. ಇದರಿಂದ ಶಿವನಿಗೆ ಲಿಂಗರೂಪತ್ವವು ಸಿದ್ಧವಾಯಿತು. ಈ ವಿಷಯದಲ್ಲಿ ಅನೇಕ ಶಿವಾಗಮವಾಕ್ಯಗಳಿರುತ್ತವೆ.

ಆಧಾರೇ ಕನಕಪ್ರಖ್ಯಂ ಹೃದಯೇ ವಿದ್ರುಮಪ್ರಭಮ್ ।
ಭ್ರೂಮಧ್ಯೇ ಸ್ಫಟಿಕಪ್ರಖ್ಯಂ ಲಿಂಗಂ ಯೋಗೀ ವಿಭಾವಯೇತ್ ॥

ನಿರುಪಾಧಿಕಮಾಖ್ಯಾತಂ ಲಿಂಗಸ್ಯಾಂತರಧಾರಣಮ್ ।
ವಿಶಿಷ್ಟಂ ಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರಣಾತ್ ॥
ಯೇ ಧಾರಯಂತಿ ಹೃದಯೇ ಲಿಂಗಂ ಚಿದ್ರೂಪಮೈಶ್ವರಂ ।
ನ ತೇಷಾಂ ಪುನರಾವೃತ್ತಿರ್ಘೋರೇ ಸಂಸಾರಮಂಡಲೇ ॥

ಶಿವಧ್ಯಾನಾಸಕ್ತನಾದ ಶಿವಯೋಗಿಯು ಲಿಂಗಶಬ್ದವಾಚ್ಯನಾದ ಶಿವನನ್ನು ಆಧಾರದಲ್ಲಿ ಬಂಗಾರದಂತೆ ಹೊಳೆಯುವವನನ್ನಾಗಿಯೂ, ಅನಾಹತಚಕ್ರದಲ್ಲಿ ಹವಳದಂತೆ ಹೊಳೆಯುವವನನ್ನಾಗಿಯೂ, ಆಜ್ಞಾ ಚಕ್ರದಲ್ಲಿ ಸ್ಫಟಿಕಮಣಿಯಂತೆ ಬೆಳಗುವವನನ್ನಾಗಿಯೂ, ಧ್ಯಾನಿಸಬೇಕು. ಯಾರು ಶಿವಲಿಂಗವನ್ನು ಹೃದಯದಲ್ಲಿ ಧರಿಸುತ್ತಾರೆಯೋ ಅವರು ಭವ ಸಾಗರವನ್ನು ದಾಟುತ್ತಾರೆಂದು ಶಿವಾಗಮಗಳು ಹೇಳುತ್ತವೆ. ಇದರಿಂದ ಹೃದಯಪುಂಡರೀಕ ಮಧ್ಯದಲ್ಲಿರುವ ಗಗನಶಬ್ದವಾಚ್ಯನಾದ ಶಿವನು ಲಿಂಗ ರೂಪನೆಂದು ಸ್ಪಷ್ಟವಾಗುತ್ತದೆ.

ಶಂಕೆ:—"ನಾರಾಯಣಪರಂ ಬ್ರಹ್ಮ" "ತತ್ತ್ವಂ ನಾರಾಯಣಃ ಪರಃ" 'ನಾರಾಯಣನೇ ಪರಬ್ರಹ್ಮವು ನಾರಾಯಣನೇ ಪರತತ್ತ್ವವು' ಎಂಬ ತೈತ್ತಿರೀಯ ವಾಕ್ಯಗಳಿಗೆ ಅರ್ಥವೇ ಇಲ್ಲದಂತಾಯಿತಲ್ಲವೆ?

ಸಮಾಧಾನ:—ನಾರಾಯಣನು ಸಕಲ ದೇವಮಾನವರಿಗಿಂತಲೂ ಶಿವೋಪಾಸನೆ ಮಾಡುವುದರಲ್ಲಿ ಶ್ರೇಷ್ಠನಾದುದರಿಂದ ನಿರವಧಿಕವಾದ ಧ್ಯಾನ ಪರಂಪರೆಯಿಂದ ತನ್ನ ಹೃದಯಸ್ಥಾನದಲ್ಲಿರುವ ಜ್ಯೋತಿರ್ಲಿಂಗಕ್ಕೂ ತನಗೂ ಧಾರಾಕಾರವಾದ ಅಹಂಗ್ರಹೋಪಾಸನಾಬುದ್ಧಿಯುಂಟಾಗಿ ಸರ್ವತ್ರ ಶಿವ ಭಾವನೆಯು ನೆಲಸಿದುದರಿಂದ "**ನಾರಾಯಣಪರಂಬ್ರಹ್ಮ**" ಎಂದು ಶಿವನಾರಾಯಣರಿಗೆ ಅಭೇದವು ಹೇಳಲ್ಪಟ್ಟಿರುತ್ತದೆ. ಹಾಗೆ ಅಭೇದಾರ್ಥ ಸ್ವೀಕಾರಮಾಡಲು ಇಷ್ಟವಿಲ್ಲದಿದ್ದರೆ "**ನಾರಾಯಣಪರಂಬ್ರಹ್ಮ**" ಎಂಬಲ್ಲಿ "**ನಾರಾಯಣಾತ್ ಪರಂಬ್ರಹ್ಮ**" ಎಂದು ಪಂಚಮೀ ತತ್ಪುರುಷಸಮಾಸವನ್ನಾಶ್ರಯಿಸಿ ಪರಬ್ರಹ್ಮವು ನಾರಾಯಣನಿಗಿಂತಲೂ ಭಿನ್ನವಹುದೆಂದು ಅರ್ಥಮಾಡಲೂಬಹುದು. ಹಾಗೆ ಪರಬ್ರಹ್ಮತ್ವವು ನಾರಾಯಣನಿಗೇ ಇರುವ ಪಕ್ಷದಲ್ಲಿ ಶ್ರುತಿಯಲ್ಲಿ "**ನಾರಾಯಣಃ ಪರಂ**

ಬ್ರಹ್ಮ" ಎಂದು ಭಿನ್ನ ಭಿನ್ನ ಪದಗಳೇ ಇರಬೇಕಾಗಿದ್ದಿತು. ಹಾಗಿಲ್ಲ ದಿದ್ದರೆ ಆ ನಾರಾಯಣಪದಕ್ಕೆ "ನರಾಣಾಂ ಸಮೂಹಂ ನಾರಂ ಅಯನಂ ಅಸ್ಯ" ಎಂದು ಬಹುವ್ರೀಹಿ ಸಮಾಸವನ್ನಾಶ್ರಯಿಸಿ ಆ ನಾರಾ ಯಣಪದವನ್ನು ಶಿವನಿಗೆ ವಿಶೇಷಣವನ್ನಾಗಿ ಮಾಡಿ ಏಕವಾಕ್ಯತೆಯನ್ನು ಕಲ್ಪಿಸಬೇಕು. ಇದರಿಂದ ಪ್ರಕರಣವಿರೋಧವೂ ಪರಿಹಾರವಾಗುತ್ತದೆ, ಹೀಗೆ ತೈತ್ತಿರೀಯದಲ್ಲಿರುವ ಮಂತ್ರಾರ್ಥವಿಚಾರದಿಂದ ಅಂತರ್ಲಿಂಗಧಾರಣ ವನ್ನು ಸಿದ್ಧಮಾಡಿ ಮುಂದೆ ಬರುವ "ಸರ್ವಲಿಂಗಗ್ಗ್‍ಂ ಸ್ಥಾಪಯತಿ" ಎಂಬ ಮಂತ್ರಾಧಾರದಿಂದ ಬಾಹ್ಯಲಿಂಗಧಾರಣವನ್ನು ಸಾಧಿಸುವೆವು.

## ಬಹಿರ್ಲಿಂಗ (ಇಷ್ಟಲಿಂಗ) ಧಾರಣ ನಿರೂಪಣ

ನಿಧನಪತಯೇ ನಮಃ। ನಿಧನಪತಾಂತಿಕಾಯ ನಮಃ
ಊರ್ಧ್ವಾಯ ನಮಃ। ಊರ್ಧ್ವಲಿಂಗಾಯ ನಮಃ
ಹಿರಣ್ಯಾಯ ನಮಃ। ಹಿರಣ್ಯಲಿಂಗಾಯ ನಮಃ
ಸುವರ್ಣಾಯ ನಮಃ। ಸುವರ್ಣಲಿಂಗಾಯ ನಮಃ
ದಿವ್ಯಾಯ ನಮಃ। ದಿವ್ಯಲಿಂಗಾಯ ನಮಃ
ಭವಾಯ ನಮಃ। ಭವಲಿಂಗಾಯ ನಮಃ
ಶರ್ವಾಯ ನಮಃ। ಶರ್ವಲಿಂಗಾಯ ನಮಃ
ಶಿವಾಯ ನಮಃ। ಶಿವಲಿಂಗಾಯ ನಮಃ
ಜ್ವಲಾಯ ನಮಃ। ಜ್ವಲಲಿಂಗಾಯ ನಮಃ
ಆತ್ಮಾಯ ನಮಃ। ಆತ್ಮಲಿಂಗಾಯ ನಮಃ
ಪರಮಾಯ ನಮಃ। ಪರಮಲಿಂಗಾಯ ನಮಃ
ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಗ್‍ಂ
ಸ್ಥಾಪಯತಿ ಪಾಣಿಮಂತ್ರಂ ಪವಿತ್ರಮ್ ॥

(ತೈ. ಉ. ೪-೧೬-೩೩, ೩೪)

ನಿಧನಪತಯೇ – ಕಾಲರೂಪನಾದ ಶಿವನಿಗೆ, ನಮಃ – ನಮಸ್ಕಾರವು, ನಿಧನಪತಾಂತಿಕಾಯ – ಮರಣ ಶಯನದಲ್ಲಿರುವ ಜನಗಳಿಗೆ, ಅಂತಿಕಾಯ – ಸಮೀಪದಲ್ಲಿದ್ದು ರಕ್ಷಿಸುತ್ತಿರುವ ಶಿವನಿಗೆ, ನಮಃ–ನಮಸ್ಕಾರವು, ಊರ್ಧ್ವಾಯ–ಶಿವಾದಿ ಭೂವ್ಯಂತವಾದ ಮೂವತ್ತಾರು ತತ್ತ್ವಗಳ ಮೇಲಿರುವ ಶಿವನಿಗೆ, ನಮಃ–ನಮಸ್ಕಾರವು. ಊರ್ಧ್ವಲಿಂಗಾಯ–ಅವಕ್ಕಿಂತಲೂ ಮೇಲಿರುವ ಶೂನ್ಯಲಿಂಗಕ್ಕೆ, ನಮಃ-ನಮಸ್ಕಾರವು, ಹಿರಣ್ಯಾಯ-ಶೋಭನವರ್ಣವುಳ್ಳ ಅಥವಾ ಸುವರ್ಣಸ್ವರೂಪನಾದ ಶಿವನಿಗೆ, ನಮಃ–ನಮಸ್ಕಾರವು – ಹಿರಣ್ಯಲಿಂಗಾಯ ನಮಃ - ಸುವರ್ಣಮಯವಾದ ಅಥವಾ ಶೋಭನಾಕ್ಷರಗಳಿಂದೊಡಗೂಡಿದ ಲಿಂಗಕ್ಕೆ ನಮಸ್ಕಾರವು. ದಿವ್ಯಾಯ ನಮಃ-ಪ್ರಕಾಶಸ್ವರೂಪನಾದ ಲಿಂಗಕ್ಕೆ ನಮಸ್ಕಾರವು, ಭವಾಯನಮಃ-ಪ್ರಾಣಿಗಳುತ್ಪತ್ತಿಯ ಕರ್ತೃವಿಗೆ ನಮಸ್ಕಾರವು, ಭವಲಿಂಗಾಯ ನಮಃ - ಜನ್ಮಧಾರಿಗಳ ಪ್ರಾಣಸ್ವರೂಪವಾದ ಲಿಂಗಕ್ಕೆ ನಮಸ್ಕಾರವು, ಶರ್ವಾಯ ನಮಃ-ಸಕಲ ಸಂಹಾರಕನಿಗೆ ನಮಸ್ಕಾರವು. ಶರ್ವಲಿಂಗಾಯ ನಮಃ - ಸಂಹಾರಕನಿಗಾಧಾರವಾದ ಲಿಂಗಕ್ಕೆ ನಮಸ್ಕಾರವು, ಶಿವಾಯ ನಮಃ - ಸತ್ಪುರುಷರ ಮನಸ್ಸಿನಲ್ಲಿ ವಾಸಿಸಿರುವವನಿಗೆ ನಮಸ್ಕಾರವು, ಶಿವಲಿಂಗಾಯ ನಮಃ-ಸಕಲ ಮಂಗಲಗಳ ಚಿಹ್ನಸ್ವರೂಪವಾದ ಲಿಂಗಕ್ಕೆ ನಮಸ್ಕಾರವು, ಜ್ವಲಾಯ ನಮಃ-ಅಗ್ನಿಸ್ವರೂಪನಿಗೆ ನಮಸ್ಕಾರವು, ಜ್ವಲಲಿಂಗಾಯ ನಮಃ-ಅಗ್ನಿಯೊಳಗಿರುವ ಲಿಂಗಕ್ಕೆ ನಮಸ್ಕಾರವು, ಆತ್ಮಾಯ ನಮಃ - ಜೀವಾತ್ಮಸ್ವರೂಪನಿಗೆ ನಮಸ್ಕಾರವು, ಆತ್ಮಲಿಂಗಾಯ ನಮಃ - ಜೀವಾಂತರ್ಗತವಾದ ಲಿಂಗರೂಪ ಪರಮಾತ್ಮನಿಗೆ ನಮಸ್ಕಾರವು, ಪರಮಾಯ ನಮಃ-ಉತ್ಕೃಷ್ಟ ಗುಣಗಳಿಂದ ಶೋಭಿಸುವವನಿಗೆ ನಮಸ್ಕಾರವು, ಪರಮಲಿಂಗಾಯ ನಮಃ - ಉತ್ಕೃಷ್ಟ ಗುಣವುಳ್ಳವರಲ್ಲಿ ಜ್ಞಾನರೂಪನಾದವನಿಗೆ ನಮಸ್ಕಾರವು, ಸೋಮಸ್ಯ-ಉಮಾಸಹಿತನಾದ, ಸೂರ್ಯಸ್ಯ - ಸೂರ್ಯಮಂಡಲಾಂತರ್ವರ್ತಿಯಾದ ಪರಶಿವನ, ಸರ್ವಲಿಂಗಂ-ವಿಶ್ವಾತ್ಮಕನಾದ, ಪಾಣಿಮಂತ್ರಂ-ಹಸ್ತಕಮಲವನ್ನು ಪರಿಶುದ್ಧಿಗೊಳಿಸುವ, ಪವಿತ್ರಂ - ಸರ್ವಪಾವನಸ್ವರೂಪನಾದ, ಏತತ್-ಈ ಇಷ್ಟಲಿಂಗವನ್ನು, ಸ್ಥಾಪಯತಿ - ಶಿರಸ್ಸು, ಕಂಠ ಮುಂತಾದ ಉತ್ತಮಾಂಗಗಳಲ್ಲಿ ಧರಿಸತಕ್ಕದ್ದು.

**ಶಂಕೆ :**—ಈ ಮಂತ್ರದಲ್ಲಿ "ಸ್ಥಾಪಯತಿ" ಎಂದು ಲಡಂತವಾದ ಕ್ರಿಯಾಪದವಿರುತ್ತದೆ. ಲಿಂಗ್‌ಲೋಟ್‌ತವ್ಯಪ್ರತ್ಯಯಾದಿಗಳು ಯಾವ ಕ್ರಿಯೆಯಲ್ಲಿರುತ್ತವೆಯೋ ಅಂಥ ಕ್ರಿಯಾಪದಗಳಿಗೆ ವಿಧ್ಯರ್ಥವನ್ನು ಹೇಳುವುದು ಶಾಸ್ತ್ರಮರ್ಯಾದೆಯಾಗಿರುತ್ತದೆ. 'ಸ್ಥಾಪಯೇತ್ - ಸ್ಥಾಪಯಿತವ್ಯಂ' ಎಂದು ಹೇಳಿದ್ದರೆ ಸರ್ವಶಿವಭಕ್ತರೂ ಕಂಠಹಸ್ತಾದ್ಯಂಗಗಳಲ್ಲಿ ಶಿವಲಿಂಗವನ್ನು ಧರಿಸಬೇಕೆಂದು ಸಿದ್ಧವಾಗುತ್ತಿತ್ತು. 'ಸ್ಥಾಪಯತಿ' ಎಂಬುದು ವಿಧ್ಯರ್ಥಬೋಧಕವಾದ ಕ್ರಿಯಾಪದವಲ್ಲವಾದುದರಿಂದ ಲಿಂಗಧಾರಣವು ಸಿದ್ಧವಾಗುವುದಿಲ್ಲ.

**ಸಮಾಧಾನ :**—ಪೂರ್ವಮೀಮಾಂಸೆಯ "ವ್ರೀಹೀನ್ ಪ್ರೋಕ್ಷತಿ" "ವ್ರೀಹೀನ್ ಅವಹಂತಿ" ಎಂಬ ವಾಕ್ಯಗಳಲ್ಲಿ **ಪ್ರೋಕ್ಷತಿ, ಅವಹಂತಿ** ಎಂದು ಲಡಂತವಾದ ಪ್ರಯೋಗಗಳಿದ್ದರೂ, ಇತರ ವಾಕ್ಯಗಳಲ್ಲೆಲ್ಲಿಯೂ ಇಂಥ ವ್ರೀಹಿಕರ್ಮಕಪ್ರೋಕ್ಷಣವಾಗಲಿ, ಅವಹನನವಾಗಲಿ ಬರದಿರುವುದರಿಂದ ಅಪ್ರಾಪ್ತತ್ವ ರೂಪವಾದ ವಿಧಿಪ್ರಯೋಜಕ ರೂಪವನ್ನು ಅಂಗೀಕಾರ ಮಾಡಿ ಲಡಂತಗಳಾದ **ಪ್ರೋಕ್ಷತಿ, ಅವಹಂತಿ** ಎಂಬ ವಾಕ್ಯಗಳನ್ನು ವಿಧಿವಾಕ್ಯಗಳನ್ನಾಗಿ ಅಂಗೀಕರಿಸಿರುವಂತೆ "**ಸರ್ವಲಿಂಗಂ ಸ್ಥಾಪಯತಿ**" ಎಂಬುವ ವಾಕ್ಯದಲ್ಲಿರುವ ಲಡಂತವಾದ ಸ್ಥಾಪಯತಿ ಎಂಬ ಕ್ರಿಯಾಪದಕ್ಕೆ ಇನ್ನಾವ ಶ್ರುತಿವಾಕ್ಯಗಳಲ್ಲಿ ಲಿಂಗಧಾರಣವು ಹೇಳಲ್ಪಡದಿರುವುದರಿಂದ ವಿಧ್ಯರ್ಥವನ್ನಂಗೀಕಾರ ಮಾಡುತ್ತೇವೆ–ಎಂದು ಹೇಳಿದರೂ ಅದು ಸರಿಹೋಗುವುದಿಲ್ಲ. ಏಕಂದರೆ–ಪ್ರೋಕ್ಷತಿ, ಅವಹಂತಿ ಎಂಬಲ್ಲಿ ಪ್ರಮಾಣಾಂತರಗಳಿಂದ ಅಪ್ರಾಪ್ತತ್ವವಿದ್ದಂತೆ ಇಲ್ಲಿ ಇರುವುದಿಲ್ಲ.

> **ವಿಧಿರಂತ್ಯತಮಪ್ರಾಪ್ತೇ ನಿಯಮಃ ಪಾಕ್ಷಿಕೇ ಸತಿ ।**
> **ತತ್ರಚಾನ್ಯತ್ರ ಚ ಪ್ರಾಪ್ತೌ ಪರಿಸಂಖ್ಯೇತಿ ಗೀಯತೇ ॥**

ಎಂಬ ಪ್ರಮಾಣದಿಂದ ವಿಧಿಯು **ಅಪೂರ್ವವಿಧಿಯೆಂತಲೂ, ನಿಯಮವಿಧಿಯೆಂತಲೂ ಪರಿಸಂಖ್ಯಾವಿಧಿಯೆಂತಲೂ**, ಮೂರು ವಿಧವಾಗಿದೆ. ಇವುಗಳಲ್ಲಿ ಒಂದು ವಾಕ್ಯದಲ್ಲಿ ಹೇಳಿದ ಅರ್ಥವು ಮತ್ತೊಂದು ವಾಕ್ಯದಲ್ಲಿ ಹೇಳದಿರುವುದೇ ಅಪೂರ್ವವಿಧಿಯ ಲಕ್ಷಣ. ವ್ರೀಹಿ(ಭತ್ತ)ಯು

ಪ್ರೋಕ್ಷಣೆಯು ಇತರ ವಾಕ್ಯಗಳಲ್ಲೆಲ್ಲಿಯೂ ಬರದಿರುವುದರಿಂದ ಲಡಂತ ವಾದ ಪ್ರೋಕ್ಷತಿ ಎಂಬುವಲ್ಲಿ ಅಪೂರ್ವವಿಧಿಯನ್ನು ಅಂಗೀಕರಿಸಿರು ವುದೇ ಇದಕ್ಕೆ ಉದಾಹರಣೆಯು "ಇದರಿಂದ ಈ ಕಾರ್ಯವನ್ನು ಮಾಡ ಬೇಕೊ, ಮತ್ತೊಂದರಿಂದ ಮಾಡಬೇಕೊ" ಎಂದು ಎರಡು ಪಕ್ಷವುಂಟಾಗಿ "ಇದರಿಂದಲೇ ಮಾಡಬೇಕೆಂದು" ಹೇಳುವುದೇ ನಿಯಮವಿಧಿಯ ಲಕ್ಷಣವು. "ವ್ರೀಹೀನ್ ಅವಹಂತಿ" ಎಂಬವಲ್ಲಿ ಉಗುರಿನಿಂದ ಅಕ್ಕಿಯ ಮೇಲಿನ ಹೊಟ್ಟನ್ನು ತೆಗೆಯಬೇಕೊ, ಒನಿಕೆಯ ಪೆಟ್ಟನಿಂದ ಹೊಟ್ಟನ್ನು ತೆಗೆಯ ಬೇಕೋ ಎಂದು ಎರಡು ವಿಕಲ್ಪಗಳುಂಟಾಗಿ ಒನಿಕೆಯ ಪೆಟ್ಟನಿಂದಲೇ ಹೊಟ್ಟನ್ನು ತೆಗೆಯಬೇಕೆಂದು ನಿಯಮಮಾಡುವುದೇ ಇದಕ್ಕೆ ಉದಾಹರಣೆ ಯಾಗಿದೆ. ಅಲ್ಲಿಯೂ, ಇಲ್ಲಿಯೂ ಎಂದು ಸಮುಚ್ಚಯವುಂಟಾಗಿ ಒಂದರಲ್ಲಿ ಪ್ರವೃತ್ತಿಯನ್ನುಂಟುಮಾಡಿ ಒಂದನ್ನು ನಿಷೇಧಿಸುವುದೇ ಪರಿಸಂಖ್ಯಾ ವಿಧಿಯ ಲಕ್ಷಣವು. "**ಶಶಕಶ್ಶಲ್ಯಕೋ ಗೋಧಾ ಖಡ್ಗೀಕೂರ್ಮಸ್ತು ಪಂಚಮಃ**" ಎಂಬ ಪ್ರಮಾಣವಚನದಿಂದ ಶಶಕ, ಶಲ್ಯಕ, ಗೋಧಾ, ಖಡ್ಗಿ, ಕೂರ್ಮ ಎಂದು ಐದು ಜಾತಿಯ ಮೃಗಗಳಿಗೂ ಐದು ಐದು ಉಗುರುಗಳಿರು ತ್ತವೆ. ಇಂಥ ಐದು ಉಗುರುಗಳುಳ್ಳ, ಈ ಐದು ಮೃಗಗಳನ್ನು ಭಕ್ಷಿಸಬೇಕೊ, ಅಥವಾ ಐದು ಉಗುರುಳ್ಳ ಇನ್ನಾವ ಮೃಗಗಳನ್ನಾದರೂ ಭಕ್ಷಿಸಬೇಕೋ ಎಂದು ವಿಕಲ್ಪವುಂಟಾಗಿ ಈ ಶಶಕಾದಿ ಪಂಚ ಮೃಗಗಳನ್ನೇ ಭಕ್ಷಿಸಬೇಕಲ್ಲದೆ ಇತರ ಮೃಗಗಳನ್ನು ಭಕ್ಷಿಸಲಾಗದೆಂದು ನಿಷೇಧಿಸಿರುವುದೇ ಉದಾಹರಣೆ ಯಾಗಿದೆ."**ಸರ್ವಲಿಂಗಗ್ಂಸ್ಥಾಪಯತಿ**" ಎಂಬ ವಾಕ್ಯದಿಂದ ಹೇಳಲ್ಪಟ್ಟ ಲಿಂಗಧಾರಣವು. ಈ ಮೂರು ವಿಧಿಗಳಲ್ಲಿ ಯಾವ ವಿಧಿಯಿಂದಲೂ ಸಿದ್ಧ ವಾಗುವುದಿಲ್ಲ. **ಅಪೂರ್ವವಿಧಿಯಿಂದ** ಈ ಲಿಂಗಧಾರಣವನ್ನು ಸಾಧಿ ಸುತ್ತೇವೆಂದರೆ ಈ ತೈತ್ತಿರೀಯವಾಕ್ಯದ ಹೊರತು ಇನ್ನಾವ ಉಪನಿಷ ದ್ವಾಕ್ಯಗಳಲ್ಲಿಯೂ ಲಿಂಗಧಾರಣವು ಹೇಳಲ್ಪಡದಿರಬೇಕು. ಇಲ್ಲಿ ಇನ್ನೂ ಅನಂತಶ್ರುತಿಗಳು ಈ ಲಿಂಗಧಾರಣವನ್ನು ವಿಧಿಸುತ್ತವೆ. ಹೇಗಂದರೆ–

**ಸರ್ವಾನನ ಶಿರೋಗ್ರೀವಃ ಸರ್ವಭೂತಗುಹಾಶಯಃ ।**
**ಸರ್ವವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಶ್ಶಿವಃ ॥**

(ಶ್ವೇತಾಶ್ವತರೊಪನಿಷತ್ ಅ. ೩. ಶ್ಲೊ ೧೧)

ಶಿವಃ-ಲಿಂಗರೂಪನಾದ ಶಿವನು, ಸರ್ವ-ಸಮಸ್ತ ಶಿವಭಕ್ತರ, ಆನನ-ಮುಖವಲ್ಲಿಯೂ, ಶಿರಃ-ತಲೆಯಲ್ಲಿಯೂ, ಗ್ರೀವಃ - ಕಂಠದಲ್ಲಿಯೂ ಇಷ್ಟ ಲಿಂಗರೂಪದಿಂದ ಧರಿಸಲ್ಪಡಲು ಅರ್ಹನಾಗಿರುವನು, ಸರ್ವಭೂತಗುಹಾ ಶಯಃ - ಸರ್ವಭೂತ – ಸಮಸ್ತ ಪ್ರಾಣಿಗಳ, ಗುಹ – ಹೃದಯಕಮಲ ದಲ್ಲಿ, ಶಯಃ – ಪ್ರಾಣಲಿಂಗರೂಪದಿಂದಿರುವನು, ಚ – ಮತ್ತು ಸರ್ವ ವ್ಯಾಪೀ – ವಸ್ತುಪರಿಚ್ಛೇದ, ಕಾಲಪರಿಚ್ಛೇದ, ದೇಶಪರಿಚ್ಛೇದಗಳಿಲ್ಲ ದವನು, ತಸ್ಮಾತ್ – ಆದುದರಿಂದ, ಭಗವಾನ್ – ಅಣಿಮಾದಿ ಐಶ್ವರ್ಯ ವುಳ್ಳವನು, ಸರ್ವಗತಃ – ಆಕಾಶದಂತೆ ಎಲ್ಲಾ ವಸ್ತುಗಳಲ್ಲಿಯೂ ಇರುವನು.

ಆಕ್ಷೇಪ—ಈ ವಾಕ್ಯದಲ್ಲಿರುವ "ಸರ್ವಾನನ ಶಿರೋಗ್ರೀವಃ" ಎಂಬುವಲ್ಲಿ "ಸರ್ವೇಷಾಂ ಶಿವಭಕ್ತಾನಾಂ ಆನನಶಿರೋಗ್ರೀವಂ ಅಧಿಕರಣಂ ಯಸ್ಯ" ಎಂದು ಅಧಿಕರಣ ಬಹುವ್ರೀಹಿ ಸಮಾಸಾಶ್ರಯದಿಂದ ಕಂಠದಲ್ಲಿ ಇಷ್ಟಲಿಂಗಧಾರಣವೂ "ಸರ್ವಭೂತಗುಹಾಶಯಃ" ಎಂಬುವಲ್ಲಿ, "ಸರ್ವೇಷಾಂ ಭೂತಾನಾಂ ಗುಹಾಯಾಂ ಶೇತೇ" ಎಂದು ಸಪ್ತಮೀತತ್ಪು ರುಷ ಸಮಾಸಾಶ್ರಯದಿಂದ ಪ್ರಾಣಲಿಂಗಧಾರಣವೂ, "ಸರ್ವವ್ಯಾಪೀ ಚ" ಎಂಬುವಲ್ಲಿ "ಸರ್ವಂ ವ್ಯಾಪ್ನೋತೀತಿ" ಎಂದು ದ್ವಿತೀಯಾತತ್ಪುರುಷ ಸಮಾಸಾಶ್ರಯದಿಂದ ಭಾವಲಿಂಗಧಾರಣವೂ, ಹೀಗೆ ತ್ರಿವಿಧಲಿಂಗಧಾರ ಣವು ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ಶ್ರೀ ರೇಣುಕ ಭಗವತ್ಪಾದರು

ತನುತ್ರಯಗತಾನಾದಿಮಲತ್ರಯಮಸೌ ಗುರುಃ ।
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್ ॥

ಸಿದ್ಧಾಂತಶಿಖಾಮಣಿ

ಶ್ರೀ ಗುರುವು ವೇಧಾ, ಕ್ರಿಯಾ, ಮನು ಎಂಬ ಮೂರು ದೀಕ್ಷೆ ಗಳಿಂದ ಮೂರು ದೇಹದಲ್ಲಿರುವ ಆಣವ, ಮಾಯೀಯ, ಕಾರ್ಮಿಕ ಎಂಬ ಮೂರು ಮಲಗಳನ್ನು ನಿವಾರಿಸಿ ಇಷ್ಟ, ಪ್ರಾಣ, ಭಾವ ಎಂಬ ಮೂರು ಲಿಂಗಗಳನ್ನು ಧರಿಸಿದನು ಎಂದು ಅನುಜ್ಞೆ ಯಿತ್ತಿರುತ್ತಾರೆ! ಇದರಿಂದ ತೈತ್ತಿ ರೀಯದ "ಸರ್ವಲಿಂಗಗ್ಂ ಸ್ಥಾಪಯತಿ" ಎಂಬ ವಾಕ್ಯದಿಂದ ಹೇಳಿ ರುವ ಇಷ್ಟಲಿಂಗಧಾರಣವು ಪುನಃ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಹೇಳಿರುವುದರಿಂದ ಲಿಂಗಧಾರಣವು ಪ್ರಮಾಣಾಂತರದಿಂದಲೂ ಸಿದ್ಧವಾಗು

ತ್ತದೆ. ಆದ್ದರಿಂದ ಅಪ್ರಾಪ್ತತ್ವರೂಪವಾದ ಅಪೂರ್ವವಿಧಿಯನ್ನು ಹೇಳಲವಕಾಶವಿಲ್ಲ. "ಸರ್ವಾನನ........ಸರ್ವಗತಃ ಶಿವಃ" ಈ ಮಂತ್ರದ ಅಂತ್ಯದಲ್ಲಿರುವ ಶಿವಪದವು ವಿಶೇಷ್ಯವಾಗಿರುತ್ತದೆ. ಮಿಕ್ಕ ಪದಗಳೆಲ್ಲವೂ ವಿಶೇಷಣಗಳಾಗಿರುತ್ತವೆ. ವಿಶೇಷ್ಯಪದಕ್ಕೆ ವಿಶೇಷಣಗಳೆಲ್ಲವೂ ಅಧೀನಗಳಾಗಿರಬೇಕು. ವಿಶೇಷ್ಯವಿಶೇಷಣಪದಗಳು ಒಂದೇ ವಿಭಕ್ತಿಯುಳ್ಳವುಗಳಾಗಿದ್ದರೆ ಅಭೇದವನ್ನಂಗೀಕರಿಸಬೇಕೆಂದು ಶಾಸ್ತ್ರನಿಯಮವಿರುತ್ತದೆ. ಇಲ್ಲಿ ಒಂದೇ ವಿಭಕ್ತಿಯುಳ್ಳ ಸರ್ವಾನನಶಿರೋಗ್ರೀವಪದಕ್ಕೂ ಶಿವಪದಕ್ಕೂ ಅಭೇದವನ್ನಂಗಿಕರಿಸುವುದಾದರೆ ಆಧಾರ ಆಧೇಯಭಾವವನ್ನು ಬಲಪಡಿಸುವ ಅಧಿಕರಣಬಹುವ್ರೀಹಿಸಮಾಸವನ್ನಾಶ್ರಯಿಸಲಾಗುವುದಿಲ್ಲ. ಆಗ "ಸರ್ವಾನನಶಿರೋಗ್ರೀವಃ" ಎಂಬ ಪದವು ಇಷ್ಟಲಿಂಗಧಾರಣಪರವೆಂದು ಹೇಳಲವಕಾಶವೇ ಇಲ್ಲವು.

**ಸಮಾಧಾನ**—ಸಮಾನವಿಭಕ್ತಿಯುಳ್ಳ ಸ್ಥಲದಲ್ಲಿಯೂ ಪೂರ್ವಾಚಾರ್ಯರು ಅಧಿಕರಣಾರ್ಥವನ್ನು ಸ್ವೀಕರಿಸಿರುತ್ತಾರೆ. ಬ್ರಹ್ಮಸೂತ್ರಭಾಷ್ಯಕರ್ತೃಗಳಾದ ನೀಲಕಂಠಶಿವಾಚಾರ್ಯರು "ಆನಂದ ಮಯೋಽಭ್ಯಾಸಾತ್" ಎಂಬ ಬ್ರಹ್ಮಸೂತ್ರದಲ್ಲಿ ಆತ್ಮನು ಅಭ್ಯಾಸಾತ್–ನಿರಂತರಲಿಂಗೋಪಾಸನೆಯಿಂದ, ಆನಂದಮಯಃ-ಆನಂದಪ್ರಚುರನಾಗುವನು, ಇಲ್ಲಿ ಆನಂದಶಬ್ದದ ಮುಂದೆ ಮಯಟ್ ಪ್ರತ್ಯಯವು ಬಂದಿರುತ್ತದೆ. ಈ ಪ್ರತ್ಯಯಕ್ಕೆ ವಿಕಾರಾರ್ಥವನ್ನಾಗಲಿ, ಪ್ರಾಚುರ್ಯಾರ್ಥವನ್ನಾಗಲಿ ಹೇಳಬಹುದು. ಈ ಎರಡು ಅರ್ಥಗಳಲ್ಲಿ ನೀಲಕಂಠಶಿವಾಚಾರ್ಯರು ಆನಂದಕ್ಕೂ ಬ್ರಹ್ಮಕ್ಕೂ ಗುಣಗುಣಿಭಾವವನ್ನು ಹೇಳುವುದರಿಂದ ವಿಕಾರಾರ್ಥವನ್ನು ಖಂಡಿಸಿ ಪ್ರಾಚುರ್ಯಾರ್ಥವನ್ನು ಒಪ್ಪಿರುವರು. ಇದರಿಂದ ಶಿವಯೋಗಾಭ್ಯಾಸದಿಂದ ಅಂಗಪದವಾಚ್ಯನಾದ ಜೀವಾತ್ಮನು ಆನಂದಪ್ರಚುರನಾಗುವನೆಂದು ಅರ್ಥವು ಸಿದ್ಧವಾಗುವುದು. ಇದಕ್ಕಾಗಿ ಅದೇ ಆನಂದಾಧಿಕರಣದಲ್ಲಿ "ವಿಕಾರಶಬ್ದಾನ್ನೇತಿಚೇನ್ನ ಪ್ರಾಚುರ್ಯಾತ್" ಅಂದರೆ ಮಯಟ್‌ಪ್ರತ್ಯಯಕ್ಕೆ ವಿಕಾರಾರ್ಥವನ್ನು ಸ್ವೀಕರಿಸುವುದಾದರೆ ಮೃಣ್ಮಯವಾದ ಘಟವು ಮೃದ್ವಿಕಾರವೇ ಆಗುವಂತೆ ಆನಂದಮಯನಾದ ಆತ್ಮನು ಆನಂದವಿಕಾರವೇ ಆಗುತ್ತಾನೆಂದು ಹೇಳಬೇಕಾಗುವದು. ಪರಮೇಶ್ವರ

ನಿಗೆ ಅಂಥ ವಿಕಾರಗಳನ್ನು ಹೇಳಲು ಅವಕಾಶವಿಲ್ಲವಾದುದರಿಂದ ಜೀವಾತ್ಮ ನೆಂದೇ ಹೇಳುತ್ತೇವೆಂದರೆ ಅದೂ ಸಂಭವಿಸುವುದಿಲ್ಲ. ಇಲ್ಲಿ ಆನಂದಶಬ್ದದ ಮುಂದಿರುವ ಮಯಟ್‌ಪ್ರತ್ಯಯಕ್ಕೆ ನಾವು ಪ್ರಾಚುರ್ಯಾರ್ಥವನ್ನೇ ಅಂಗೀಕರಿಸುತ್ತೇವೆ. ಆದುದರಿಂದ—

" ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನ
ಮಯಾನಂದ ಮಯಾ ಮೇ ಶುಧ್ಯಂತಾಮ್ "

(ತೈತ್ತಿರೀಯ ಆ. ೨. ೭–೫೧)

ಎಂದು ತೈತ್ತಿರೀಯದಲ್ಲಿ ಅನ್ನಮಯಶಬ್ದ ಮೊದಲ್ಗೊಂಡು ಮನೋ ಮಯಪರ್ಯಂತವೂ ಮಯಟ್‌ಪ್ರತ್ಯಯಗಳಿಗೆ ವಿಕಾರಾರ್ಥವನ್ನಂಗೀಕರಿಸಿ ಮುಂದಿರುವ ವಿಜ್ಞಾನಮಯ, ಆನಂದಮಯ ಪದಗಳಿಗೆ ಪ್ರಾಚುರ್ಯಾರ್ಥ ವನ್ನಂಗೀಕರಿಸಿ ವಿಜ್ಞಾನಪ್ರಚುರನಾದ ಜೀವನೆಂದೂ ಆನಂದಪ್ರಚುರನಾದ ಈಶ್ವರನೆಂದೂ ಅರ್ಥಮಾಡಿದ್ದಾರೆ. ಇದರಂತೆ "ಅನ್ನಮಯೋಯಜ್ಞಃ" ಅಂಶುಮಯಸ್ಸೂರ್ಯಃ " ವಿಪ್ರಮಯೋ ಗ್ರಾಮಃ " ವಿಹಂಗಮ ಯೋ ವೃಕ್ಷಃ " ಇತ್ಯಾದಿ ಅನೇಕಸ್ಥಲಗಳಲ್ಲಿ ಪ್ರಾಚುರ್ಯಾರ್ಥವು ಹೇಳ ಲ್ಪಟ್ಟಿರುತ್ತದೆ. ಹೀಗೆ ಹೇಳಿರುವುದರಿಂದ ಪರಶಿವನು ಭೂತಭವಿಷ್ಯದ್ವರ್ತ ಮಾನಕಾಲಗಳಲ್ಲಿ ಉಂಟಾಗುವ ದುಃಖಗಳೊಂದರಸಂಬಂಧವಿಲ್ಲದೆ ಸತ್ಯ ಪ್ರಕಾಶಮಯನಾಗಿರುತ್ತಾನೆಂಬ ತತ್ತ್ವಾರ್ಥವು ಸಿದ್ಧವಾಗುತ್ತದೆ. ತಾಪ ತ್ರಯಗ್ರಸ್ತನಾದ ಜೀವಾತ್ಮನಲ್ಲಿ ಅಂಥ ನಿತ್ಯಾನಂದವೈಶಿಷ್ಟ್ಯವು ಸಿದ್ಧಿಸು ವುದಿಲ್ಲ. ಇದರಿಂದ ಆನಂದಬ್ರಹ್ಮಗಳಿಗೆ ಧರ್ಮಧರ್ಮಿಭಾವವು ಸಿದ್ಧ ವಾಯಿತು. ಹಾಗಾದರೆ " ಆನಂದೋ ಬ್ರಹ್ಮೇತಿ ವ್ಯಜಾನಾತ್ " ನಿತ್ಯಂ ವಿಜ್ಞಾನಮಾನಂದಂ ಬ್ರಹ್ಮ" ಇತ್ಯಾದಿ ಅನಂತಶ್ರುತಿವಾಕ್ಯಗಳಲ್ಲಿ ಒಂದೇ ವಿಭಕ್ತಿಯುಳ್ಳವಾಕ್ಯಗಳು ಒಂದಿರುವುದರಿಂದ ಅಂಥ ಆನಂದ–ಬ್ರಹ್ಮ ಗಳಿಗೆ ಅಭೇದವನ್ನಂಗೀಕರಿಸುವುದನ್ನು ಬಿಟ್ಟು ಭೇದಪ್ರತಿಪಾದಕವಾದ ಧರ್ಮಧರ್ಮಿಭಾವವನ್ನು ಹೇಳಲವಕಾಶವಿಲ್ಲವೆಂದು ಆಕ್ಷೇಪಿಸಲಾಗಿ " ಆನಂದೋ ಬ್ರಹ್ಮಣೋ ರೂಪಂ " ಇತ್ಯಾದಿ ಶ್ರುತಿಗಳಲ್ಲಿ ಷಷ್ಠ್ಯಂತ ವಾದ ಬ್ರಹ್ಮಪದವಿರುವುದರಿಂದ ಆನಂದಕ್ಕೂ ಬ್ರಹ್ಮಕ್ಕೂ ಅತ್ಯಂತ ಭೇದವೇ

ತೋರುವುದರಿಂದ ಇಂಥ ಭೇದವಾಕ್ಯಗಳಿಗೆ ವಿರೋಧವು ಸಂಭವಿಸಬೇಕಾಗಿರುವುದರಿಂದ "ಆನಂದೋ ಬ್ರಹ್ಮ" ಎಂಬ ಸಮಾನವಿಭಕ್ತಿಕವಾದ ಆನಂದಪದಕ್ಕೆ ಅಧಿಕರಣಾರ್ಥಕತ್ವವನ್ನಂಗೀಕರಿಸಿ "ಆನಂದಾಧಿಕರಣಂ ಬ್ರಹ್ಮ" ಎಂದು ಸಮರ್ಥನೆಗೊಳಿಸಿದರೆ "ಆನಂದೋ ಬ್ರಹ್ಮಣೋ ರೂಪಂ" ಇತ್ಯಾದಿ ಭಿನ್ನವಿಭಕ್ತಿವಾಕ್ಯಗಳಿಗೂ, ಸಮಾನವಿಭಕ್ತಿವಾಕ್ಯಗಳಿಗೂ ವಿರೋಧವಿಲ್ಲದಂತೆ ಸಮನ್ವಯವುಂಟಾಗುವುದೆಂದು ಹೇಳಿರುತ್ತಾರೆ. ಮತ್ತು ಈ ವಿಷಯದಲ್ಲಿ

"ಯಸ್ಸರ್ವಜ್ಞಸ್ಸರ್ವವಿತ್, ಯಸ್ಯ ಜ್ಞಾನಮಯಂ ತಪಃ" ಯಾವನು ಸರ್ವಜ್ಞನೋ, ಸರ್ವವೇತೃವೋ, ಯಾವನ ತಪಸ್ಸು ಜ್ಞಾನಮಯವಾಗಿದೆಯೋ ಇತ್ಯಾದಿ ಭಿನ್ನವಿಭಕ್ತಿಕಗಳಾದ ಶ್ರುತಿವಾಕ್ಯಗಳು ಭೇದವನ್ನು ತೋರಿಸುತ್ತವೆ.

"ವಿಜ್ಞಾನಂ ಬ್ರಹ್ಮ" "ಆನಂದಂ ಬ್ರಹ್ಮ"

ಇತ್ಯಾದಿ ಸಮಾನವಿಭಕ್ತಿಕಗಳಾದ ಶ್ರುತಿವಾಕ್ಯಗಳು ಅಭೇದವನ್ನು ತೋರಿಸುತ್ತವೆ. ಹೀಗೆ ಶ್ರುತಿವಾಕ್ಯಗಳಲ್ಲಿ ಒಂದಕ್ಕೊಂದು ವಿರೋಧವು ತೋರಿಬರುವುದರಿಂದ ಸಮಾನವಿಭಕ್ತಿಕಗಳಾದ ಆನಂದವಿಜ್ಞಾನಪದಗಳಿಗೆ ಅಧಿಕರಣಾರ್ಥಸ್ವೀಕಾರಮಾಡಿ ಎಲ್ಲ ವಾಕ್ಯಗಳಿಗೂ ಸಮನ್ವಯಗೊಳಿಸಿ ವಿರೋಧಪರಿಹಾರಮಾಡುವುದುತ್ತಮವೆಂದು ಜೀವಬ್ರಹ್ಮರಿಗೆ ಭೇದವನ್ನು ಹೇಳುವ ಶ್ರೀ ಆನಂದತೀರ್ಥರು ಸಮಾನವಿಭಕ್ತಿಕಸ್ಥಲದಲ್ಲಿ ಅಧಿಕರಣಾರ್ಥವನ್ನು ಸ್ವೀಕರಿಸಿರುತ್ತಾರೆ. ಇದರಂತೆ "ಸರ್ವಾನನಶಿರೋಗ್ರೀವಃ" ಎಂಬ ಪ್ರಥಮಾಂತ ಪದವು "ಸರ್ವಗತಶ್ಶಿವಃ" ಎಂಬ ಮುಂದಿರುವ ಪ್ರಥಮಾಂತವಾದ ಶಿವಪದಕ್ಕೆ ವಿಶೇಷಣವಾಗಿರುತ್ತದೆ. ಈ ವಿಶೇಷಣಪದಕ್ಕೆ ಸಮಸ್ತ ಶಿವಭಕ್ತರ ಶಿರಃಕಂಠಾದಿಸ್ಥಾನಗಳೇ ಅಧಿಕರಣ (ಆಶ್ರಯ) ವಾಗುಳ್ಳವನೆಂದು ಭಿನ್ನಾರ್ಥವನ್ನು ತೋರಿಸುವ ವ್ಯಧಿಕರಣ ಬಹುವ್ರೀಹಿಸಮಾಸವನ್ನಾಶ್ರಯಿಸಿ ಕಂಠದಲ್ಲಿ ಇಷ್ಟಲಿಂಗವನ್ನು ಧರಿಸತಕ್ಕುದೆಂದು ನಿರ್ಣಯಿಸಬೇಕು.

ಆಕ್ಷೇಪ—ಆದರೆ ಹೀಗೆ "ಸರ್ವಾನನಶಿರೋಗ್ರೀವ" ಎಂಬ ಪದಕ್ಕೆ ಪರಿಚ್ಛಿನ್ನತ್ವವನ್ನು ಬೋಧಿಸುವ ಅಧಿಕರಣಾರ್ಥಸ್ವೀಕಾರಮಾಡಿ

ಶಿವಭಕ್ತರು ತಮ್ಮ ಕಂಠಾದಿಗಳಲ್ಲಿ ಶಿವಲಿಂಗವನ್ನು ಧರಿಸತಕ್ಕದೆಂದು ಅರ್ಥಮಾಡುವುದಾದರೆ ಮುಂದಿರುವ ಅಪರಿಚ್ಛಿನ್ನತ್ವವನ್ನು ಬೋಧಿಸುವ "ಸರ್ವಗತಶ್ಶಿವಃ" ಎಂಬ ವಾಕ್ಯಕ್ಕೆ ವಿರೋಧವು ಸಂಭವಿಸುತ್ತದೆ. ಒಂದು ವಸ್ತುವಿನಲ್ಲಿ ಭೇದವೂ, ಅಭೇದವೂ ಎರಡೂ ಇರಲಾರವು. ಆದುದರಿಂದ ಇಷ್ಟಲಿಂಗಧಾರಣಸಿದ್ಧಿಗಾಗಿ "ಸರ್ವಾನನ ಶಿರೋಗ್ರೀವಃ" ಎಂಬ ವಾಕ್ಯಕ್ಕೆ ಅಧಿಕರಣಾರ್ಥವನ್ನು ಸ್ವೀಕರಿಸಕೂಡದು.

ಸಮಾಧಾನ— ಪರಶಿವನು ಅಪರಿಚ್ಛಿನ್ನವಸ್ತುವೆಂದು ಎಲ್ಲಾ ಸಿದ್ಧಾಂತಿಗಳು ಒಪ್ಪಲೇಬೇಕು. ಆದರೂ ಅಂಥ ಪರಶಿವನು ಉಪಾಸಕರಾದ ಭಕ್ತರನ್ನುದ್ಧರಿಸುವುದಕ್ಕಾಗಿ ಉಪಾಧಿರೂಪವಾದ ಇಷ್ಟಲಿಂಗರೂಪದಿಂದ ಶಿವಭಕ್ತರ ಮುಖದಲ್ಲಿಯೂ, ಮಸ್ತಕದಲ್ಲಿಯೂ, ಕಂಠದಲ್ಲಿಯೂ ವಾಸಮಾಡಿಕೊಂಡಿರುತ್ತಾನೆ. ಜ್ಯೋತಿರ್ಲಿಂಗರೂಪದಿಂದ ಭಕ್ತರ ಹೃದಯ ಪುಂಡರೀಕದಲ್ಲಿ ವಾಸವಾಗಿರುತ್ತಾನೆ. ಹೀಗೆ ಒಂದೊಂದು ಕಲ್ಪಿತರೂಪದಿಂದ ಭಕ್ತರ ಹೃದಯದಲ್ಲಿ ವಾಸಮಾಡಿದ್ದರೂ ತಾನು ಮಾತ್ರ ಆಕಾಶದಂತೆ ಸರ್ವವ್ಯಾಪಕನಾಗಿಯೇ ಇರುವನೆಂಬ ತಾತ್ಪರ್ಯವನ್ನು ಪುಷ್ಟಿಗೊಳಿಸುವುದಕ್ಕಾಗಿ "ಸರ್ವಾನನಶಿರೋಗ್ರೀವಃ", "ಸರ್ವಭೂತಗುಹಾಶಯಃ", "ಸರ್ವವ್ಯಾಪೀ ಚ ಭಗವಾನ್" ಎಂದು ಮೂರು ವಾಕ್ಯಗಳೂ ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳನ್ನು ತೋರಿಸುವುದರಿಂದ ಪರಿಚ್ಛಿನ್ನತ್ವ ಅಪರಿಚ್ಛಿನ್ನತ್ವಗಳಿಗೆ ವಿರೋಧವು ಸಂಭವಿಸುವುದಿಲ್ಲ. ಮತ್ತು ಭಕ್ತರ ಉಪಾಸನಾ ಸೌಕರ್ಯಾರ್ಥವಾಗಿ ಶಿವನಿಗೆ ಮೊದಲು ಕಲ್ಪಿತರೂಪವನ್ನು ಹೇಳಿ ಅನಂತರ ನಿಜಸ್ವರೂಪವೆನಿಸಿದ ಅಪರಿಚ್ಛಿನ್ನತ್ವವನ್ನು ತೋರಿಸಬೇಕೆಂಬ ಉದ್ದೇಶದಿಂದಲೆ ಈ ಶ್ರುತಿಯು ಅಂತ್ಯದಲ್ಲಿ "ಸರ್ವವ್ಯಾಪೀ ಚ" ಎಂದು ಸಮುಚ್ಚಯಾರ್ಥವಾದ 'ಚ' ಕಾರವನ್ನು ಸಹ ಹೇಳಿರುವುದರಿಂದ "ಸರ್ವಾನನಶಿರೋಗ್ರೀವಃ" ಎಂಬ ಪದವು ಇಷ್ಟಲಿಂಗಧಾರಣಪರವೆಂದು ನಿರಾತಂಕವಾಗಿ ಹೇಳಬಹುದು.

ಈ ವಿಷಯದಲ್ಲಿ—

ಉತ್ತಮಾಂಗೇ ಗಳೇ ವಾಪಿ ಕುಕ್ಷೌ ವಕ್ಷಸ್ಥಲೇsಪಿ ವಾ ।
ತಥಾ ಹಸ್ತತಲೇ ವಾಪಿ ಪ್ರಾಣಲಿಂಗಂ ಧರೇತ್ಸುಧೀಃ ॥ ಸಿದ್ಧಾಂತಶಿಖಾಮಣಿ.

ದೀಕ್ಷಿತನಾದ ಶಿವಭಕ್ತನು ಗುರುವಿನಿಂದ ಅನುಗ್ರಹಿಸಲ್ಪಟ್ಟ ಪಂಚ ಸೂತ್ರಘಟಿತರಾದ ಶಿವಲಿಂಗವನ್ನು ಶಿರಸ್ಸಿನಲ್ಲಾಗಲಿ, ಕಂಠದಲ್ಲಾಗಲಿ, ಎದೆಯ ಮೇಲಾಗಲಿ, ಕುಕ್ಷಿಯಲ್ಲಾಗಲಿ, ಭುಜದಲ್ಲಾಗಲಿ ಧರಿಸಬೇಕೆಂದು ಶ್ರೀ ರೇಣುಕ ಭಗವತ್ಪಾದರು ಅನುಜ್ಞೆಯಿತ್ತಿರುವರು. ಮತ್ತು

ಕೃತ್ವಾ ನಿಧೇಹಿ ಸತತಂ ಲಿಂಗಂ ವಸ್ತ್ರೇಣ ವೇಷ್ಟಿತಂ ।
ಮಸ್ತಕೇ ಕಂಧರೇ ಕುಕ್ಷೌ ವಕ್ಷಸ್ಯಥ ಕರಸ್ಥಲೇ ॥

(ಶಂಕರಸಂಹಿತೆ)

ತಲೆ, ಕುತ್ತಿಗೆ, ಎದೆ, ಹೊಟ್ಟೆ, ಹಸ್ತ ಈ ಐದು ಸ್ಥಲಗಳಲ್ಲಿ ಶಿವ ಲಿಂಗವನ್ನು ಧರಿಸಬೇಕೆಂದು ವ್ಯಾಸಮಹರ್ಷಿಪ್ರಣೀತವಾದ ಸ್ಕಾಂದ ಪುರಾಣದಲ್ಲಿ ಹೇಳಿರುತ್ತದೆ.

ಆಕ್ಷೇಪ—ಆದರೆ ಈ "ಸರ್ವಾನನ ಶಿರೋಗ್ರೀವಃ" ಎಂಬ ವಾಕ್ಯದಲ್ಲಿ ಮುಖ, ಶಿರಸ್ಸು, ಕಂಠ ಈ ಮೂರು ಸ್ಥಾನಗಳು ಹೇಳಲ್ಪಟ್ಟಿದ್ದರೂ ಮೇಲೆ ಹೇಳಿದ ಪ್ರಮಾಣಾನುಸಾರವಾಗಿ ಉಪಲಕ್ಷಣವಿಧಿಯಿಂದ ಕುಕ್ಷಿ, ವಕ್ಷಸ್ಥಲ, ಕರ ಈ ಮೂರನ್ನು ಗ್ರಹಣಮಾಡಬೇಕು. ಈ ಮಂತ್ರದಲ್ಲಿ "ಸರ್ವಾನನ" ಎಂದು ಆನನಪದವೊಂದು ಸೇರಿದೆ. ಶಿವಲಿಂಗವನ್ನು ಕರಕಂಠಾದಿ ಪಂಚಸ್ಥಾನಗಳಲ್ಲಿ ಧರಿಸಲು ಸಾಧ್ಯವಾದಂತೆ ಆನನ (ಬಾಯಿ) ದಲ್ಲಿ ಧರಿಸಲು ಸಾಧ್ಯವಿಲ್ಲದುದರಿಂದ ಸಮಂಜಸವಾಗಲಾರದು.

ಸಮಾಧಾನ :—

ಮನನಾತ್ತ್ರಾಯತೇ ಯಸ್ಮಾತ್ತಸ್ಮಾನ್ಮಂತ್ರೋಽಯಮೀರಿತಃ ।
ವಾಚ್ಯವಾಚಕರೂಪೇಣ ದ್ವಿಧಾ ಮಂತ್ರಃ ಪ್ರಕೀರ್ತಿತಃ ॥
ವಾಚಕೋ ವರ್ಣರೂಪಸ್ಸ್ಯಾತ್ ವಾಚ್ಯಶ್ಚ ಪರಮಶ್ಶಿವಃ ।
ಮನುದೇವತಯೋರೈಕ್ಯಂ ತಸ್ಮಾದಾಹುರ್ಮಹರ್ಷಯಃ ॥

(ಸ್ಕಾಂದಪುರಾಣ)

"ಮನನಾತ್ ತ್ರಾಯತೆ" ಮೇಲಿಂದ ಮೇಲೆ ಯುಕ್ತಿಯಿಂದ ಧ್ಯಾನಿಸುವುದಕ್ಕೆ ಮನನವೆಂದು ಹೆಸರು. ಇಂಥ ಮನನದಿಂದ ರಕ್ಷಿಸಲು ಯೋಗ್ಯವಾಗಿರುವುದರಿಂದ ಮಂತ್ರವೆನಿಸಿಕೊಳ್ಳುವುದು. ಆ ರಕ್ಷಣೀಯವಾದ ಮಂತ್ರವು ವಾಚಕ(ಶಬ್ದ)ವೆಂತಲೂ, ವಾಚ್ಯ(ಅರ್ಥ)ವೆಂತಲೂ

ಎರಡು ವಿಧವಾಗಿದೆ. ಇವುಗಳಲ್ಲಿ ಅಕ್ಷರಮಯವಾದುದೇ ವಾಚಕಮಂತ್ರ ವೆಂತಲೂ, ಅರ್ಥ (ಲಿಂಗ) ರೂಪವಾದುದೇ ವಾಚ್ಯಮಂತ್ರವೆಂತಲೂ ಹೇಳಿಸಿ ಕೊಳ್ಳುತ್ತದೆ. ಅಂಥ ಅಕ್ಷರರೂಪವಾದ (ನಮಶ್ಶಿವಾಯ) ಎಂಬ ವಾಚ ಕಕ್ಕೂ ಅರ್ಥರೂಪ (ಪರಶಿವ) ವಾದ ವಾಚ್ಯಕ್ಕೂ ಮಹರ್ಷಿಗಳು ಅಭೇದ ವನ್ನು ಒಪ್ಪಿರುತ್ತಾರೆ.

ನಮಃ ಪೀಠಮಿತಿ ಪ್ರೋಕ್ತಂ ಶಿಕಾರಂ ಮಧ್ಯಮೀರಿತಂ ।
ವಾಕಾರಂ ಗೋಮುಖಂ ವೃತ್ತಂ ಯಕಾರಂ ಗೋಳಕಂ ಸ್ಮೃತಮ್ ॥
ಓಂಕಾರಂ ಲಿಂಗಸಾಖ್ಯಾತಂ ಷಡ್ವರ್ಣಂ ಲಿಂಗಮುಚ್ಯತೇ ॥
(ಸಿದ್ಧಾಂತ ಸಾರಾವಲೀ)

ತಾತ್ಪರ್ಯ—ಮಹಾಮಂತ್ರದಲ್ಲಿರುವ ಮೊದಲನೆಯ 'ನಮಃ' ಎಂಬೆರಡು ಅಕ್ಷರಗಳೇ ಶಿವಲಿಂಗದ ಪೀಠವಾಗಿರುವುವು. "ಶಿ" ಎಂಬ ಅಕ್ಷರವೇ ಆ ಲಿಂಗದ ಮಧ್ಯಭಾಗವಾಗಿದೆ. "ವಾ" ಎಂಬ ಅಕ್ಷರವೇ ಆ ಲಿಂಗದ ಗೋಮುಖವಾಗಿದೆ. "ಯ" ಏಂಬ ಅಕ್ಷರವೇ ಗೋಲಕ-ವಾಗಿದೆ. "ಓಂ" ಎಂಬ ಅಕ್ಷರವೇ ಲಿಂಗವಾಗಿದೆ. ಪೀಠ, ಮಧ್ಯ, ಗೋಮುಖ, ವೃತ್ತ, ಗೋಲಕಗಳೆಂಬ ಐದು ಸೂತ್ರಗಳಿಂದೊಡಗೂಡಿದ ಲಿಂಗಕ್ಕೂ ವರ್ಣಮಯವಾದ ಪಂಚಾಕ್ಷರೀ ಮಂತ್ರಕ್ಕೂ ಅಭೇದವನ್ನಂಗೀ ಕಾರಮಾಡಿರುತ್ತಾರೆ.

ಆದುದರಿಂದ ವಾಚಕರೂಪವಾದ ಮಂತ್ರವನ್ನು ಬಾಯಿಯಲ್ಲಿಯೂ, ವಾಚ್ಯರೂಪವಾದ ಮಂತ್ರ (ಇಷ್ಟಲಿಂಗ)ವನ್ನು ಹಸ್ತಕಂಠಾದಿಗಳಲ್ಲಿಯೂ ಧರಿಸತಕ್ಕುದೆಂಬ ಗೂಢಾರ್ಥವನ್ನು ತೋರಿಸುವುದಕ್ಕಾಗಿ ಶ್ರುತಿಯು "ಸರ್ವಾನನಶಿರೋಗ್ರೀವಃ" ಎಂದು ಬೋಧಿಸಿರುವುದು.

ಶಂಕೆ:—ಈ ಸರ್ವಾನನ ವಾಕ್ಯದಿಂದ ಕಂಠ, ಶಿರಸ್ಸು, ಕುಕ್ಷ್ಯಾದಿ ಐದು ಸ್ಥಾನಗಳು ಲಿಂಗವನ್ನು ಧರಿಸುವ ಸ್ಥಾನಗಳೆಂದು ಹೇಳಿದಮೇಲೆ ಈ ಐದು ಸ್ಥಾನಗಳಲ್ಲಿಯೂ ಪ್ರತ್ಯೇಕವಾಗಿ ಒಂದೊಂದು ಲಿಂಗವನ್ನು ಧರಿಸಬೇಕೊ? ಅಥವಾ ಯಾವುದಾದರೊಂದು ಸ್ಥಲದಲ್ಲಿ ಒಂದೇ ಲಿಂಗ ವನ್ನು ಧರಿಸಬೇಕೊ?

ಸಮಾಧಾನ :—

"ವ್ರೀಹಿಭಿರ್ಯಜೇತ" "ಯವೈರ್ಯಜೇತ"

(ಪೂರ್ವಮೀಮಾಂಸಾ)

'ಭತ್ತದಿಂದ ಯಜ್ಞವನ್ನು ಮಾಡಬೇಕು, ಜವೆಯಿಂದ ಯಜ್ಞಮಾಡಬೇಕು' ಎಂದು ಎರಡು ವಾಕ್ಯಗಳು ಹೇಳಲ್ಪಟ್ಟಿರುತ್ತವೆ. ಇವೆರಡು ವಾಕ್ಯಗಳಿಗೂ ಪುರೋಡಾಶನಿಷ್ಪಾದನರೂಪವಾದ ಪ್ರಯೋಜನವು ಮಾತ್ರ ಒಂದೇ ಆಗಿರುತ್ತದೆ. ವ್ರೀಹಿಧಾನ್ಯಗಳಿಂದ ಯಾಗವನ್ನು ಮಾಡಿದಮೇಲೆ ಯವಧಾನ್ಯಗಳಿಂದ ಮಾಡಬೇಕಾಗಿಲ್ಲ. ಯವಧಾನ್ಯಗಳಿಂದ ಯಾಗ ಮಾಡಿದ ಬಳಿಕ ವ್ರೀಹಿಧಾನ್ಯಗಳಿಂದ ಮಾಡಬೇಕಾಗಿಲ್ಲವೆಂದು ನಿರ್ಣಯಿಸಿರುವಂತೆ ಇಲ್ಲಿ ಇಷ್ಟಲಿಂಗಧಾರಣದಿಂದ ಮೋಕ್ಷರೂಪವಾದ ಮಹಾಫಲವು ದೊರೆಯುವುದರಿಂದ ಅಂಥ ಲಿಂಗವನ್ನು ಶಿರಸ್ಸಿನಲ್ಲಿ ಧರಿಸಲಿ ಅಥವಾ ಕಂಠದಲ್ಲಿ ಧರಿಸಲಿ, ಎದೆಯಲ್ಲಿ ಧರಿಸಲಿ ಯಾವ ಸ್ಥಾನಲ್ಲಿ ಧರಿಸಿದರೂ ಮೋಕ್ಷರೂಪವಾದ ಪ್ರಯೋಜನವೊಂದೇ ಆಗಿರುವುದರಿಂದ ಈ ಐದು ಸ್ಥಲಗಳಲ್ಲಿ ಯಾವುದಾದರೂ ಒಂದು ಸ್ಥಲದಲ್ಲಿ ಧರಿಸಬೇಕಲ್ಲದೆ ಎಲ್ಲಾ ಸ್ಥಲಗಳಲ್ಲಿಯೂ ಧರಿಸಬೇಕಾಗಿಲ್ಲ. ಮತ್ತು

"ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ತಸ್ಯಾಭಿ
ಧ್ಯಾನಾದ್ಯೋಜನಾತ್ತತ್ತ್ವಭಾವಾತ್ ಭೂಯಸ್ಯಾಂತೇ
ವಿಶ್ವಮಾಯಾನಿವೃತ್ತಿಃ"

(ಶ್ವೇತಾಶ್ವತರೋಪನಿಷತ್ ಅ. ೧ ಶ್ಲೋ. ೧೦)

ಪ್ರಧಾನಂ–ಸತ್ವರಜಸ್ತಮೋಗುಣಗಳ ಸ್ವರೂಪವೆನಿಸಿದ ಮಾಯೆಯು ಕ್ಷರಂ–ನಾಶವಾಗತಕ್ಕುದು. ಹರಃ–ಪರಶಿವನು ಅಮೃತ–ನಾಶರಹಿತನು, ಅಕ್ಷರಂ - ವಿಕಾರಶೂನ್ಯನು, ತಸ್ಯ - ಅಂಥ ದಿವ್ಯಜ್ಯೋತಿಸ್ವರೂಪವಾದ ಪರಶಿವ ಲಿಂಗವನ್ನು, ಅಭಿಧ್ಯಾನಾತ್ - ಪ್ರಾಣಲಿಂಗರೂಪದಿಂದ ಸೂಕ್ಷ್ಮಶರೀರದಲ್ಲಿ ಧರಿಸುವದರಿಂದಲೂ, ಯೋಜನಾತ್ - ಇಷ್ಟಲಿಂಗರೂಪದಿಂದ ಸ್ಥೂಲಶರೀರದಲ್ಲಿ ಧರಿಸುವುದರಿಂದಲೂ, ತತ್ವಭಾವಾತ್ - ಭಾವಲಿಂಗರೂಪದಿಂದ ಕಾರಣಶರೀರದಲ್ಲಿ ಧರಿಸುವುದರಿಂದಲೂ ಭೂಯಃ - ನಿಶ್ಚಯವಾಗಿ, ಅಂತೇ- ದೇಹಾವಸಾನದಲ್ಲಿ, ವಿಶ್ವಮಾಯಾನಿವೃತ್ತಿಃ - ಜನನಮರಣರೂಪವಾದ ದುಃಖದಿಂದ ಬಿಡುಗಡೆಯಾಗುವನು.

ಈ ವಾಕ್ಯದಲ್ಲಿ "ಯೋಜನಾತ್" ಎಂಬ ಪದವು ದೇಹದಲ್ಲಿ ಇಷ್ಟ ಲಿಂಗಧಾರಣವನ್ನು ಮಾತ್ರ ತೋರಿಸಿರುತ್ತದೆ. ಯಾವ ಸ್ಥಲದಲ್ಲಿ ಧರಿಸ ಬೇಕೆಂಬುದನ್ನು ಸ್ಪಷ್ಟಪಡಿಸಿಲ್ಲ. ಅಂಥ ಸ್ಥಲವನ್ನು ಸ್ಪಷ್ಟಪಡಿಸುವುದಕ್ಕಾಗಿ ಮುಂದೆ 'ಸರ್ವಾನನಶಿರೋಗ್ರೀವಃ' ಎಂಬ ವಾಕ್ಯವು ಹೊರಟಿರುತ್ತದೆ. ಇದಲ್ಲದೆ 'ಸರ್ವಭೂತಗುಹಾಶಯಃ' ಎಂಬ ವಾಕ್ಯವು ಪ್ರಾಣಲಿಂಗ ಧಾರಣಸ್ಥಲವನ್ನು ತೋರಿಸಿ ಇಷ್ಟಲಿಂಗಧಾರಣ ಸ್ಥಲವನ್ನು ತೋರಿಸದೆ ಹೋದರೆ ಪ್ರಕರಣಕ್ಕೆ ವಿರೋಧವುಂಟಾಗುತ್ತದೆ. ಈ ವಿಷಯದಲ್ಲಿ—

ಲಿಂಗಧಾರಣಮಾಖ್ಯಾತಂ ದ್ವಿಧಾ ಸರ್ವಾರ್ಥಸಾಧಕೈಃ ।
ಬಾಹ್ಯಮಾಭ್ಯಂತರಂ ಚೇತಿ ಮುನಿಭಿರ್ಮೋಕ್ಷಕಾಂಕ್ಷಿಭಿಃ ॥
ಆಧಾರೇ ಹೃದಯೇ ವಾಪಿ ಭ್ರೂಮಧ್ಯೇ ವಾ ನಿರಂತರಂ ।
ಜ್ಯೋತಿರ್ಲಿಂಗಾನುಸಂಧಾನಮಾಂತರಂ ಲಿಂಗಧಾರಣಂ ॥
ಅಂತರ್ಧಾರಯಿತುಂ ಲಿಂಗಮಶಕ್ತಃ ಶಕ್ತ ಏವ ವಾ ।
ಬಾಹ್ಯಂ ಚ ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್ ॥

(ಸಿದ್ಧಾಂತಶಿಖಾಮಣಿ ಪರಿ. ೬.)

ತಾತ್ಪರ್ಯ—ಮುಕ್ತಿಕಾಂಕ್ಷಿಗಳಾದ ಮುನಿಗಳು, ಲಿಂಗಧಾರಣವು ಬಾಹ್ಯಲಿಂಗಧಾರಣವೆಂದೂ, ಅಂತರ್ಲಿಂಗಧಾರಣವೆಂದೂ ಎರಡು ಪ್ರಕಾರ ವಾಗಿ ಹೇಳುವರು. ಇವುಗಳಲ್ಲಿ ಆಧಾರಸ್ಥಾನದಲ್ಲಾಗಲಿ, ಹೃದಯ ಸ್ಥಾನದಲ್ಲಾಗಲಿ, ಭ್ರೂಮಧ್ಯದಲ್ಲಿಯಾಗಲಿ ಜ್ಯೋತಿರ್ಲಿಂಗವನ್ನು ಅನವರತ ಧ್ಯಾನಿಸುತ್ತಿರುವುದೇ ಅಂತರ್ಲಿಂಗಧಾರಣವು. ಅಂತರ್ಲಿಂಗಧಾರಣಶಕ್ತಿಯು ಇದ್ದರೂ ಅಥವಾ ಇಲ್ಲದಿದ್ದರೂ ಹೊರಗಣ ಇಷ್ಟಲಿಂಗವನ್ನು ಮಾತ್ರ ಆ ಅಂತರ್ಲಿಂಗಸ್ವರೂಪವೇ ಎಂದು ಭಾವಿಸಿ ಹಸ್ತಕಂಠಾದಿ ಉತ್ತಮಾಂಗ ಗಳಲ್ಲಿ ಯಾವಾಗಲೂ ಧರಿಸಬೇಕೆಂದು ಶ್ರೀ ರೇಣುಕಭಗವತ್ಪಾದರು ಅನುಜ್ಞೆಯಿತ್ತಿರುವರು.

ಶಂಕೆ—'ಸರ್ವಾನನ ಶಿರೋಗ್ರೀವಃ' ಎಂಬ ಪದವು ಶಿವಪದಕ್ಕೆ ವಿಶೇಷಣವಾಗಿರುವುದರಿಂದ ಶಿವನು ಆನನ, ಶಿರೋಗ್ರೀವಾದಿಗಳಿಗೆ ಅಭಿನ್ನ ನಾಗಿರುವನೋ ಅಥವಾ ಭಿನ್ನನಾಗಿರುವನೋ? ಎಂಬ ಎರಡು ವಿಕಲ್ಪಗಳುಂ ಟಾಗುತ್ತವೆ. ಅಭೇದವನ್ನಂಗೀಕಾರ ಮಾಡಿದರೆ 'ಸರ್ವಂ ವಾಕ್ಯಂ

ಸಾವಧಾರಣಂ' ಎಂಬ ನ್ಯಾಯದಿಂದ ಶಿವನು ಆನನ, ಶಿರೋಗ್ರೀವಗಳಿಗೆ ಮಾತ್ರ ಅಭಿನ್ನನೆಂದು ಹೇಳಬೇಕಾಗುವುದು. ಆಗ ಸರ್ವೋಹ್ಯೇಷ ರುದ್ರಃ' ಶಿವನು ಎಲ್ಲಾ ಕಡೆಯಲ್ಲಿರುವನು ಎಂಬ ಶ್ರುತಿ ವಾಕ್ಯಕ್ಕೆ ವಿರೋಧವುಂಟಾಗುವುದು. ಬೇಧವನ್ನಂಗೀಕಾರ ಮಾಡಿದರೆ. "ವಾಮೇನ ಅಕ್ಷ್ಣಾ ಪಶ್ಯತಿ" ಎಡಗಣ್ಣಿನಿಂದ ನೋಡುತ್ತಾನೆ. "ಅಸ್ಮಿನ್ ಗ್ರಾಮೇ ಕ್ಷತ್ರಿಯೋ ಧನಿಕಃ" ಈ ಗ್ರಾಮದಲ್ಲಿ ಕ್ಷತ್ರಿಯನು ಧನಿಕನಾಗಿರುತ್ತಾನೆ. ಮುಂತಾದ ಸ್ಥಲಗಳಲ್ಲಿ ಅವಧಾರಣಾತ್ಮಕವಾದ ಏವಕಾರಾದಿಗಳಿಲ್ಲದಿದ್ದರೂ ಎಡಗಣ್ಣಿನಿಂದಲೇ ನೋಡುತ್ತಾನೆ. ಈಗ್ರಾಮದಲ್ಲಿರುವ ಕ್ಷತ್ರಿಯನೊಬ್ಬನೇ ಧನಿಕನಾಗಿರುತ್ತಾನೆಂದು ನಿರ್ಣಯಿಸುವಂತೆ ಶಿವನು ಆನನ ಶಿರೋಗ್ರೀವಗಳಲ್ಲಿ ಮಾತ್ರ ಇರುವನೇ ಹೊರತು ಇತರ ಸ್ಥಲದಲ್ಲಿಲ್ಲವೆಂದು ಹೇಳಬೇಕಾಗುವುದು. ಹಾಗಾದರೆ—'ಸರ್ವಾನನ' ವಾಕ್ಯದ ಅಂತ್ಯದಲ್ಲಿರುವ 'ಸರ್ವಗತಶ್ಶಿವಃ' ಶಿವನು ಎಲ್ಲಾ ಕಡೆಯಲ್ಲಿಯೂ ಇರುತ್ತಾನೆಂಬ ಪದವೇ ವ್ಯರ್ಥವಾಗುವುದಲ್ಲದೆ ಸರ್ವವ್ಯಾಪಕವಾದ ಆ ಬ್ರಹ್ಮಲಿಂಗವನ್ನು ಹಸ್ತಕಂಠಾದಿ ಕೆಲವು ಸ್ಥಲಗಳಲ್ಲಿ ಮಾತ್ರ ಇರುವನೆಂದು ಹೇಳುವುದು ಬ್ರಹ್ಮಕ್ಕೆ ಸಂಕೋಚವನ್ನು ಕಲ್ಪಿಸಿದಂತಾಗುವುದು. ಆದುದರಿಂದ 'ಸರ್ವಾನನ' 'ಸರ್ವಭೂತ' 'ಸರ್ವಗತ' ಎಂಬ ಮೂರು ವಾಕ್ಯಗಳು ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಪರಗಳೆಂದು ಹೇಳುವುದೇ ಉತ್ತಮಪಕ್ಷವಾಗಿರುತ್ತದೆ. ಇದೇ ಅರ್ಥವನ್ನು

'ಜೀವಮುಖ್ಯಪ್ರಾಣಲಿಂಗಾನ್ನೇತಿಚೇನ್ನೋಪಾಸಾ
ತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ॥

(ಬ್ರ. ಸೂ. ಅ. ೧.)

ಎಂಬ ಬ್ರಹ್ಮಸೂತ್ರವು ಸ್ಪಷ್ಟಪಡಿಸುತ್ತದೆ, ವೀರಶೈವ ಭಾಷ್ಯಕರ್ತರಾದ ಶ್ರೀಪತಿ ಪಂಡಿತರು ಈ ಸೂತ್ರಾರ್ಥವನ್ನು ತ್ರಿವಿಧಲಿಂಗೋಪಾಸನಾ ಪರವಾಗಿ ವಿವರಿಸಿರುತ್ತಾರೆ.

ಶಂಕೆ—'ಸರ್ವಾನನ ಶಿರೋಗ್ರೀವಃ' ಎಂಬ ವಾಕ್ಯದಲ್ಲಿ ಅಧಿಕರಣಾರ್ಥವನ್ನು ಬೋಧಿಸುವ ಪದವಿರುವುದಾದರೆ ಇಷ್ಟಲಿಂಗಧಾರಣ ಪರವೆಂದು ಹೇಳಬಹುದು. ಅಂಥ ಪದವಾವುದೂ ಕಂಡುಬರುವುದಿಲ್ಲವಾದುದರಿಂದ ಆ ವಾಕ್ಯವೇ ವ್ಯರ್ಥವಾಗುವುದಿಲ್ಲವೇ?

ಸಮಾಧಾನ—ಈ ವಾಕ್ಯದಲ್ಲಿ ಸ್ಪಷ್ಟವಾಗಿ ಅಧಿಕರಣಾರ್ಥವುಳ್ಳ ಪದವು ಇಲ್ಲದಿದ್ದರೂ 'ಸರ್ವೇಷಾಂ ಆನನಶಿರೋಗ್ರೀವಾಃ ಅಧಿಕರಣತ್ವೇನ ಅಸ್ಯ ಸಂತೀತಿ' ಎಂದು ಮತ್ವರ್ಥೀಯ ಅಚ್ ಪ್ರತ್ಯಯಮಾಡಿ ಆ ವಾಕ್ಯವನ್ನು ಸಾರ್ಥಕಗೊಳಿಸುತ್ತೇವೆ. ಏಕೆಂದರೆ—

ವರಂ ಹಿ ವಾಕ್ಯವೈಯರ್ಥ್ಯಾತ್ಪದಮಾತ್ರಸ್ಯ ಲಕ್ಷಣಾ' ಒಂದು ವಾಕ್ಯವನ್ನೇ ವ್ಯರ್ಥಗೊಳಿಸುವುದಕ್ಕಿಂತ ಆ ವಾಕ್ಯದಲ್ಲಿರುವ ಒಂದು ಪದಕ್ಕೆ ಲಕ್ಷಣಾಸ್ವೀಕಾರಮಾಡಿ ಆ ವಾಕ್ಯವನ್ನು ಸಫಲಗೊಳಿಸುವುದು ನ್ಯಾಯವಾದುದೆಂದು ಶಾಸ್ತ್ರಜ್ಞರ ಆಶಯವಿರುವುದರಿಂದ.

'ಸರ್ವತೋಕ್ಷಿ ಶಿರೋಮುಖಂ' 'ಸಹಸ್ರ ಶೀರ್ಷಾ ಪುರುಷಃ'
" ಸರ್ವತಃ ಪಾಣಿಪಾದಂ "

ಇತ್ಯಾದಿ ಸ್ಥಳಗಳಂತೆ ವ್ಯಧಿಕಾರಣಬಹುವ್ರೀಹಿಸಮಾಸಾಶ್ರಯದಿಂದ 'ಸರ್ವಾನನ ಶಿರೋಗ್ರೀವ' ಎಂಬ ವಾಕ್ಯವನ್ನು ಸಫಲಗೊಳಿಸುವುದು ಉತ್ತಮವಾಗಿದೆ.

'ಏಕಾದಶಪಶೋರವದಾನಾನಿ ತಾನಿ ದ್ವಿರವದ್ಯತಿ'

(ಪೂರ್ವಮೀಮಾಂಸೆ)

ಪಶುವಿನ ಹನ್ನೊಂದು ಅಂಗಗಳಲ್ಲಿ ಪ್ರತ್ಯೇಕವಾಗಿ ಒಂದೊಂದು ಅವಯವದಿಂದ ಎರಡೆರಡುಸಾರಿ ಅವದಾನ ಮಾಡಬೇಕೆಂದು (ಹವಿಸ್ಸಿನ ಅವಯವವನ್ನು ತೆಗದುಕೊಳ್ಳುವುದು) ಪಶುವಿಶಸನರೂಪವಾದ ಯಾಗದಲ್ಲಿ ಹೇಳಲ್ಪಟ್ಟಿರುತ್ತದೆ. ಪಶುಯಾಗವು ಸೋಮಯಾಗದ ವಿಕೃತಿಯಾಗವು. 'ಪ್ರಕೃತಿವದ್ವಿಕೃತಿಃ ಕರ್ತವ್ಯಾ' ಪ್ರಕೃತಿಯಾಗವನ್ನು ಮಾಡುವಂತೆ ವಿಕೃತಿಯಾಗವನ್ನು ಮಾಡಬೇಕೆಂದು ಚೋದನಾ (ಪ್ರೇರಣಾ) ವಾಕ್ಯವಿರುವುದರಿಂದ ಅಂಗಿ (ಪ್ರಧಾನ) ಯಾದ ಸೋಮಯಾಗದಲ್ಲಿ ಹೇಳಿದ ವಾಕ್ಯದಿಂದಲೇ ಪಶು ಸಂಬಂಧವಾದ ಹವಿಸ್ಸಿನಲ್ಲಿ ದ್ವಿರವದಾನವು ಸಿದ್ಧವಾಗುವಲ್ಲಿ ಪುನಃ ಈ ಅಂಗಭೂತವಾದ ಪಶುಯಾಗದಲ್ಲಿ 'ದ್ವಿರವದ್ಯತಿ' ಎಂದು ಏಕೆ ಹೇಳಬೇಕಾಗಿತ್ತು? ಆದುದರಿಂದ 'ದ್ವಿರವದ್ಯತಿ' ಎರಡುಸಾರಿ ಅವದಾನಮಾಡಬೇಕೆಂದು ಹೇಳುವ ವಾಕ್ಯವೇ ವ್ಯರ್ಥವಾಗುವುದೆಂಬ ಆ ಶಂಕೆಯುಂಟಾಗಿ

**'ಚತುರವತ್ತೀ ಯಜಮಾನಃ ಪಂಚಾ
ವತ್ತೈವ ವಪಾ ಕಾರ್ಯಾ'**

(ಪೂರ್ವ ಮೀಮಾಂಸೆ)

ಎಂದು ಯಾಗೀಯ ಪಶುವಿನ ಹೃದಯದಲ್ಲಿರುವ ವಪೆ (**ಮಾಂಸ ವಿಶೇಷ**) ಯಿಂದ ಐದುಸಾರಿ ಅವದಾನಮಾಡಬೇಕೆಂದು ಹೇಳಿದೆ. ಇಲ್ಲಿ ಆಜ್ಯಕ್ಕೆ ಉಪಸ್ತರಣಾರ್ಥವಾಗಿ ಒಂದು ಅವದಾನವು, ಬಳಿಕ ಹವಿಸ್ಸಿಗೆ ಮೂರು ಅವದಾನಗಳು, ಪುನಃ ಆಜ್ಯಕ್ಕೆ ಅಭಿಘಾರಾರ್ಥವಾಗಿ ಒಂದು ಅವದಾನವು, ಹೀಗೆ ಐದು ಅವದಾನಗಳು ಪೂರ್ಣವಾಗುವುವು. **'ತಾನಿ ದ್ವಿರವದ್ಯತಿ'** ಎಂಬ ವಾಕ್ಯವು ವ್ಯರ್ಥವಾಗದೆ ಇರುವುದಕ್ಕಾಗಿ ವಪಾ ಪದಕ್ಕೆ ಪಶುಸಂಬಂಧವಾದ **ಹವಿಸ್ಸಾಮಾನ್ಯದಲ್ಲಿ** ಲಕ್ಷಣಾ ಸ್ವಿಕಾರವಮಾಡುವುದರಿಂದ ಪಶುವಿನ ಹೃದಯಾದಿಸ್ಥಳಗಳಲ್ಲಿರುವ ಹವಿಸ್ಸು ಗಳಲ್ಲಿ ಪಂಚಾವದಾನವು ಸಿದ್ಧಿಸುತ್ತದೆ. ಇಲ್ಲಿ ಉಪಸ್ತರಣ ಅಭಿಘಾರ ಎಂಬ ಎರಡು ಅವದಾನಗಳು ಪಶುವಿನ ಹೃದಯಾದಿಸ್ಥಲಗಳಲ್ಲಿ ಮೂರು ಅವದಾನಗಳು ಹೀಗೆ ಐದು ಅವದಾನಗಳು ಸಿದ್ಧಿಸುವುದರಿಂದ ವಾಕ್ಯಾರ್ಥಕ್ಕೆ ಬಾಧೆ ಬರುವುದರಿಂದ **'ತಾನಿ ದ್ವಿರವದ್ಯತಿ'** ಎಂದು ಹೇಳಲ್ಪಟ್ಟಿರುತ್ತದೆ. ಹೀಗೆ ಹೇಳುವುದರಿಂದ ಹವಿಸ್ಸಿಗೆ ಮೂರು ಅವದಾನಗಳು ದ್ವಿತ್ವವಿಧಾಯಕ ವಾಕ್ಯದಿಂದ ಬಾಧಿಸಲ್ಪಡುವುವು. **'ಪಂಚಾವತ್ತೈವ ವಪಾ ಕಾರ್ಯಾ'** ಎಂಬಲ್ಲಿ ಉಪಸ್ತರಣಾರ್ಥವಾದ ಎರಡು ಅವದಾನಗಳು ಸೇರಿ ಪಂಚ-ಸಂಖ್ಯೆಯು ಪೂರ್ತಿಯಾಗುವುದೆಂದು ಸಿದ್ಧಾಂತಮಾಡಲ್ಪಟ್ಟಿರುವುದು. ಇದರಿಂದ **'ತಾನಿ ದ್ವಿರವದ್ಯತಿ'** ಎಂಬ ವಾಕ್ಯಕ್ಕೆ ಉಂಟಾದ ವೈಯರ್ಥ್ಯ ವನ್ನು ಪರಿಹರಿಸುವುದಕ್ಕಾಗಿ ವಪಾಪದಕ್ಕೆ ಹವಿಸ್ಸಾಮಾನ್ಯದಲ್ಲಿ ಲಕ್ಷಣಾಸ್ವೀಕಾರ ಮಾಡಿರುವುದು ಮೀಮಾಂಸಾ ಶಾಸ್ತ್ರದಲ್ಲಿ ಪ್ರಸಿದ್ಧವಾಗಿ ರುವಂತೆ.

**'ಸರ್ವಾನನ'** ವಾಕ್ಯದಲ್ಲಿ ಅಧಿಕರಣಬೋಧಕ ಪದವಿಲ್ಲದ ಪ್ರಯುಕ್ತ ಈ ವಾಕ್ಯವನ್ನೇ ವ್ಯರ್ಥಗೊಳಿಸುವುದಕ್ಕಿಂತ ಒಂದು ಪದಕ್ಕೆ ಲಕ್ಷಣಾವೃತ್ತಿಯಿಂದ ಅಧಿಕರಣಾರ್ಥವನ್ನು ಸ್ವೀಕಾರಮಾಡಿ ಶಿವನು ಇಷ್ಟಲಿಂಗದೊಳಿರುವುದರಿಂದ ಛತ್ರ ಆನನ ಶಿರಸ್ಸು ಗ್ರೀವಾದಿಗಳ ಆಶ್ರಯವುಳ್ಳ

ವನೆಂದು ಹೇಳುವುದುಉತ್ತಮಪಕ್ಷವಾಗಿದೆ. ಹೀಗೆ ಶ್ವೇತಾಶ್ವತರೋಪನಿಷತ್ತಿನಿಂದಲೂ ಲಿಂಗಧಾರಣವು ಸಿದ್ಧಿಸುವುದರಿಂದ 'ಸರ್ವಲಿಂಗಗ್ಂ ಸ್ಥಾಪಯತಿ' ಎಂಬುವಲ್ಲಿ ಅಪೂರ್ವವಿಧಿಯ ನಿಯಮಾನುಸಾರವಾಗಿ ಲಿಂಗಧಾರಣವು ಸಿದ್ಧಿಸಲಿಲ್ಲ. ಮತ್ತು ಇದೇ 'ಸರ್ವಲಿಂಗ' ಮಂತ್ರದಲ್ಲಿ 'ಪಾಣಿಮಂತ್ರಂ ಪವಿತ್ರಂ' ಎಂಬ ಎರಡು ವಿಶೇಷಣಗಳು ಬಂದಿರುತ್ತವೆ. 'ಪ್ರಾಣೌ ಮಂತ್ರಂ ಪೂಜನಂ ಯಸ್ಯ' ಎಂಬ ವ್ಯುತ್ಪತ್ತಿಯಿಂದಲೂ 'ಪೂಯತ ಇತಿ ಪವಿತ್ರಂ' ಎಂಬ ವ್ಯುತ್ಪತ್ತಿಯಿಂದಲೂ ಇಷ್ಟಲಿಂಗವನ್ನು ಹಸ್ತದಲ್ಲಿ ಪೂಜಿಸಬೇಕೆಂಬ ಅರ್ಥವನ್ನೂ, ಶುಚ್ಯಶುಚಿ ಕಾಲಗಳಲ್ಲಿ ಲಿಂಗವು ಪರಿಶುದ್ಧವಾಗಿರುವುದೆಂಬ ಅರ್ಥವನ್ನೂ, ಅವೆರಡು ವಿಶೇಷಣಗಳು ಬೋಧಿಸುತ್ತವೆ. ದೇಹದಲ್ಲಿ ಅಂಥ ಲಿಂಗವನ್ನು ಧರಿಸದ ಹೊರತು ಹಸ್ತದಲ್ಲಿಯೇ ಪೂಜಿಸುವುದು ಸಾಧ್ಯವಿಲ್ಲದುದರಿಂದ ಆ ವಾಕ್ಯದಲ್ಲಿ ಸ್ಪಷ್ಟವಾಗಿ ಲಿಂಗಧಾರಣವು ಹೇಳಲ್ಪಡದಿದ್ದರೂ ಅರ್ಥಾಪತ್ತಿ ಪ್ರಮಾಣದಿಂದ ಅಂದರೆ 'ಪೀನೋ ದೇವದತ್ತಃ ದಿವಾ ನ ಭುಂಕ್ತೇ' "ದೇವದತ್ತನು ಪುಷ್ಟವಾಗಿರುತ್ತಾನೆ. ಹಗಲು ಊಟವನ್ನೇ ಮಾಡುವುದಿಲ್ಲ" ಎಂಬವಾಕ್ಯದಲ್ಲಿ ಭೋಜನಕ್ಕೂ ಪುಷ್ಟಿಗೂ ಕಾರ್ಯಕಾರಣ ಭಾವವಿರುತ್ತದೆ. ಭೋಜನವಿಲ್ಲದಿದ್ದರೆ ದೇಹವು ಪುಷ್ಟವಾಗುವದಿಲ್ಲ. ಇಲ್ಲಿ ದೇವದತ್ತನಲ್ಲಿ ಸ್ಥೂಲತ್ವವೂ ಕಂಡುಬರುವುದರಿಂದ ಇವನು ಹಗಲು ಊಟಮಾಡದಿದ್ದರೂ ರಾತ್ರಿಭೋಜನವನ್ನು ಮಾಡುವನೆಂದು ಕಲ್ಪಿಸುವಂತೆ ದೇಹದಲ್ಲಿ ಲಿಂಗಧಾರಣವು ಅರ್ಥಾತ್ ಕಲ್ಪಿಸಲ್ಪಡುವುದು. ಇದರಿಂದಲೂ ಪ್ರಮಾಣಾಂತರದಿಂದ ಪ್ರಾಪ್ತತ್ವವೇ ಸಿದ್ಧವಾಯಿತಲ್ಲದೆ ಅಪ್ರಾಪ್ತವು ಸಿದ್ಧಿಸಲಿಲ್ಲವೆಂದು ಪೂರ್ವಾಚಾರ್ಯರು ಸರ್ವಲಿಂಗ ಎಂಬ ಮಂತ್ರದಲ್ಲಿರುವ 'ಪಾಣಿಮಂತ್ರಂ ಪವಿತ್ರಂ' ಎಂಬುವ ವಾಕ್ಯಗಳಿಂದಲೇ ಅಪೂರ್ವ ವಿಧಿಯನ್ನು ನಿಷೇಧಿಸಿದರು.

ಹಾಗಾದರೆ ನಿಯಮವಿಧಿಯನ್ನು ಅಂಗೀಕಾರ ಮಾಡುತ್ತೇವೆ. ಹೇಗೆಂದರೆ 'ಯಾಜನಾಧ್ಯಾಪನಪ್ರತಿಗ್ರಹೈರ್ಬ್ರಾಹ್ಮಣೋ ಧನಮಾರ್ಜಯೇತ್' ಬ್ರಾಹ್ಮಣನಾದವನು ಪೂಜೆಮಾಡಿಸುವುದು, ದಾನತೆಗೆದುಕೊಳ್ಳುವುದು, ಓದಿಸುವುದು ಇವುಗಳಿಂದಲೇ ಧನವನ್ನಾರ್ಜಿಸಬೇಕಲ್ಲದೆ

ಇನ್ನಾವುದರಿಂದಲೂ ಆರ್ಜಿಸಕೂಡದೆಂದು ಧರ್ಮಶಾಸ್ತ್ರದಲ್ಲಿ ನಿಯಮವಿಧಿಯನ್ನು ಅಂಗೀಕಾರಮಾಡಿರುವಂತೆ ಮುಮುಕ್ಷುವಾದ ಪುರುಷನು ಇಷ್ಟಲಿಂಗಧಾರಣದಿಂದಲೇ ಮುಕ್ತಿಪಡೆಯುವನಲ್ಲದೆ ಮತ್ತಾವುದರಿಂದಲೂ ಪಡೆಯನು. ಎಂದು ನಿಯಮವಿಧಿಯನ್ನಾದರೂ ಅಂಗೀಕರಿಸುವೆವೆಂದರೆ.

'ಭಸ್ಮಚ್ಛನ್ನೋ ಭಸ್ಮಶಯ್ಯಾಶಯಾನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ'

—ಶಾತಾತಪ ಸ್ಮೃತಿ

ವಿಭೂತಿಯನ್ನು ಧರಿಸುವವನೂ, ವಿಭೂತಿಯ ಹಾಸಿಗೆಯಲ್ಲಿ ಮಲಗುವವನೂ, ರುದ್ರಾಧ್ಯಯನಮಾಡುವವನೂ ಸರ್ವಪಾಪಗಳಿಂದ ಬಿಡುಗಡೆಯಾಗಿ ಮೋಕ್ಷವನ್ನು ಪಡೆಯುವನು ಎಂದು ಹೇಳಿರುತ್ತದೆ. ಇಲ್ಲಿ ಲಿಂಗಧಾರಣದಿಂದ ಮೋಕ್ಷವನ್ನು ಪಡೆಯಬೇಕೊ? ಅಥವಾ ಭಸ್ಮರುದ್ರಾಕ್ಷಧಾರಣದಿಂದ ಮೋಕ್ಷವನ್ನು ಪಡೆಯಬೇಕೊ? ಎಂಬ ಎರಡು ವಿಕಲ್ಪಗಳುಂಟಾಗುವುವು. ನಿಯಮವಿಧಿಗನುಸಾರವಾಗಿ ಇವೆರಡರಲ್ಲಿ ಒಂದಕ್ಕೆ ನಿಷೇಧವನ್ನು ಹೇಳಬೇಕಾಗುವುದು. ಲಿಂಗಧಾರಣವೇ ಮುಕ್ತಿಗೆ ಕಾರಣವೆಂದು ಹೇಳಿದರೆ ಭಸ್ಮರುದ್ರಾಕ್ಷಧಾರಣವು ಕಾರಣವಲ್ಲವೆಂದು ಹೇಳಬೇಕಾಗುವುದು; ಇಷ್ಟಲಿಂಗಧಾರಿಗಳಾದ ವೀರಶೈವರಿಗೆ ಲಿಂಗಧಾರಣವೂ ಭಸ್ಮರುದ್ರಾಕ್ಷಧಾರಣವೂ ಆವಶ್ಯಕಗಳಾಗಿವೆ. ಇವುಗಳಲ್ಲಿ ಯಾವುದನ್ನು ನಿಷೇಧಿಸಿದರೂ ಅನಿಷ್ಟದಾಯಕವೇ ಆಗುವುದು.

ಪ್ಹಿಂಡತಾ ಪಿಂಡವಿಜ್ಞಾನಂ ಸಂಸಾರಗುಣಹೇಯತಾ ।
ದೀಕ್ಷಾಲಿಂಗಧೃತಿಶ್ಚೈವ ವಿಭೂತೇರಪಿ ಧಾರಣಂ ॥
ರುದ್ರಾಕ್ಷಧಾರಣಂ ಚೈವ ಪಂಚಾಕ್ಷರಜಪಸ್ತಥಾ ।
ಭಕ್ತಮಾರ್ಗಕ್ರಿಯಾ ಚೈವ ಗುರೋರ್ಲಿಂಗಸ್ಯ ಚಾರ್ಚನಂ ॥
ಜಂಗಮಸ್ಯ ತಥಾಹ್ಯೇಷಾಂ ಪ್ರಸಾದಸ್ವೀಕೃತಿಸ್ತಥಾ ।
ಅತ್ರದಾನತ್ರಯಂ ಪ್ರೋಕ್ತಂ ಸೋಪಾಧಿ ನಿರುಪಾಧಿಕಮ್ ॥
ಸಹಜಂ ಚೇತಿ ನಿರ್ದಿಷ್ಟಂ ಸಮುಸ್ತಾಗಮಪಾರಗೈಃ ।
ಏತಾನಿ ಶಿವಭಕ್ತಸ್ಯ ಕರ್ತವ್ಯಾನಿ ಪ್ರಯತ್ನತಃ ॥

ಸಿದ್ಧಾಂತಶಿಖಾಮಣಿ (ಪರಿ ೫)

ಅರ್ಥ—ಪಿಂಡಸ್ಥಲ (ಶುದ್ಧಜೀವ), ಪಿಂಡಜ್ಞಾನಸ್ಥಲ, (ಶರೀರ ಜೀವರ ವಿವೇಕ), ಸಂಸಾರಗುಣಹೇಯಸ್ಥಲ, ಗುರುಕಾರುಣ್ಯಸ್ಥಲ, (ದೀಕ್ಷೆ) ಲಿಂಗಧಾರಣಸ್ಥಲ, ಭಸ್ಮಧಾರಣಸ್ಥಲ, ರುದ್ರಾಕ್ಷಧಾರಣಸ್ಥಲ, ಪಂಚಾಕ್ಷರಜಪಸ್ಥಲ, ಭಕ್ತಮಾರ್ಗಕ್ರಿಯಾಸ್ಥಲ, ಉಭಯಸ್ಥಲ, ತ್ರಿವಿಧ ಸಂಪತ್ತಿಸ್ಥಲ, ಪ್ರಸಾದಸ್ವೀಕಾರಸ್ಥಲ, ಸೋಪಾಧಿದಾನಸ್ಥಲ, ನಿರುಪಾಧಿ ದಾನಸ್ಥಲ, ಸಹಜದಾನಸ್ಥಲ, ಎಂದು ಹದಿನೈದು ಸ್ಥಲಗಳಿರುತ್ತವೆ. ಇವುಗಳು ಶಿವಭಕ್ತರಿಂದ ಪ್ರಯತ್ನಪೂರ್ವಕವಾಗಿ ಸಂಗ್ರಹಿಸಲ್ಪಡತಕ್ಕ ವುಗಳೆಂದು ಶ್ರೀ ರೇಣುಕಭಗವತ್ಪಾದರು ಅನುಜ್ಞೆಯಿತ್ತಿರುವುದರಿಂದ ಲಿಂಗಧಾರಣದಂತೆ ಭಸ್ಮರುದ್ರಾಕ್ಷಧಾರಣವೂ ಅತ್ಯಾವಶ್ಯಕವೆಂದು ಸ್ಪಷ್ಟ ವಾಗುತ್ತಿದೆಯಾದುದರಿಂದ **'ಸರ್ವಲಿಂಗಗ್ಂ ಸ್ಥಾಪಯತಿ"** ಎಂಬ ವಾಕ್ಯವು ನಿಯಮವಿಧಿಯಲ್ಲಿಯೂ ಸೇರುವುದಿಲ್ಲ.

ಹಾಗಾದರೆ ಮೂರನೆಯದಾದ **ಪರಿಸಂಖ್ಯಾವಿಧಿಯನ್ನು** ಅಂಗೀಕರಿಸುವೆವು. **ಚಯನಪ್ರಕರಣದಲ್ಲಿ** ಯಜ್ಞದ ಜಗುಲಿಯನ್ನು ಕಟ್ಟುವುದಕ್ಕಾಗಿ ಗಾಡಿಗೆ ಒಂದುಕಡೆ ಕುದುರೆಯನ್ನು ಮತ್ತೊಂದು ಕಡೆಯಲ್ಲಿ ಗಾರ್ದಭವನ್ನು ಕಟ್ಟಿ ಇಟ್ಟಿಗೆಗಳನ್ನು ತರುವುದಕ್ಕಾಗಿ ಅರಣ್ಯಕ್ಕೆ ಹೋಗಿರುವಾಗ **'ಇಮಾಮಗೃಭ್ಣನ್ರಶನಾಂ'** ಎಂಬ ಮಂತ್ರದಲ್ಲಿ ಹೇಳಿರುವಂತೆ ರಶನಾಗ್ರಹಣಮಾಡ (ಹಗ್ಗವನ್ನು ಹಿಡಿದುಕೊಳ್ಳ)ಬೇಕೆಂದು ಸಾಮಾನ್ಯವಾಗಿ ಹೇಳಿರುವುದರಿಂದ ಇಲ್ಲಿ ಕುದುರೆಯ ಹಗ್ಗ ಮತ್ತು ಗಾರ್ದಭದ ಹಗ್ಗ ಈ ಎರಡಕ್ಕೂ ಸಮುಚ್ಚಯವಿದ್ದರೂ **'ಇಮಾಮಗೃಭ್ಣನ್'** ಎಂಬೀ ಮಂತ್ರವನ್ನುಚ್ಚರಿಸುತ್ತ ಅವೆರಡರಲ್ಲಿ ಕುದುರೆಯ ಹಗ್ಗವನ್ನು ಮಾತ್ರ ಹಿಡಿದೆಳೆಯುತ್ತ ಗಾರ್ದಭದ ಹಗ್ಗವನ್ನು ಹಿಡಿಯದೆ ಮಂತ್ರವನ್ನೂ ಸಹ ಉಚ್ಚರಿಸದೆ ಇರಬೇಕೆಂಬುದೇ **ಪರಿಸಂಖ್ಯಾವಿಧಿಗೆ** ಉದಾಹರಣೆಯಾಗಿರುತ್ತದೆ. ಮತ್ತು **'ಪಂಚ-ಪಂಚ-ನಖಾ ಭಕ್ಷ್ಯಾಃ'** ಎಂಬುವುದೂ ಉದಾಹರಣೆಯಾಗಿರುತ್ತದೆ. ಇಲ್ಲಿ ಲಿಂಗಧಾರಣ ಭಸ್ಮಧಾರಣಾದಿಗಳ ಕರ್ತವ್ಯತ್ವ ಮತ್ತು ಅಕರ್ತವ್ಯತ್ವಗಳೆರಡಕ್ಕೂ ಒಂದೇ ಸಾರಿ ಸಮುಚ್ಚಯವಿಲ್ಲದುದರಿಂದ ಪರಿಸಂಖ್ಯಾವಿಧಿಯನ್ನೂ ಸಹ ಹೇಳಲಾಗುವುದಿಲ್ಲ. ಹೀಗೆ ಲಿಂಗ ಧಾರಣೆಯು ನಿತ್ಯವಾಗಿದ್ದರೂ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಹೇಳಿದ

ಈ ಮೂರು ವಿಧಿಗಳಲ್ಲಿ ಯಾವ ವಿಧಿಯಲ್ಲಿಯೂ ಸೇರದಿರುವದರಿಂದ ಅವೈದಿಕವೆಂದೇ ತಿಳಿಯುತ್ತೇವೆ.

'ಸಮಾಧಾನ—ಈ ಮೂರು ವಿಧಗಳಿಂದಲೂ ಲಿಂಗಧಾಣವು ಸಿದ್ಧವಾಗುತ್ತದೆ. ಮೊದಲನೆಯದಾದ ಒಂದು ವಾಕ್ಯದಿಂದ ವಿಧಿಸಲ್ಪಟ್ಟ ಅರ್ಥವು ಮತ್ತೊಂದು ವಾಕ್ಯದಿಂದ ವಿಧಿಸಲ್ಪಡಕೂಡದೆಂಬ ಅಪೂರ್ವ ವಿಧಿಯ ಲಕ್ಷಣಕ್ಕೆ ಬಾಧೆ ಬರುತ್ತದೆಂದು ಮಾಡಿದ ಪೂರ್ವಪಕ್ಷವು ಇಲ್ಲಿ ನಿಲ್ಲುವುದಿಲ್ಲ. ಏಕೆಂದರೆ 'ಸರ್ವಾನನ ಶಿರೋಗ್ರೀವಃ' ಎಂಬ ವಾಕ್ಯವು ಇಷ್ಟಲಿಂಗವನ್ನು ಧರಿಸಲರ್ಹವಾದ ಕಂಠ ಶಿರಸ್ಸು ಮುಂತಾದ ಸ್ಥಾನ (ಆಧೇಯ) ಗಳನ್ನು ತೋರಿಸುವುದು. 'ಸರ್ವಲಿಂಗಗ್ಂ ಸ್ಥಾಪಯತಿ' ಎಂಬ ವಾಕ್ಯವು ಶರೀರದಲ್ಲಿ ಸಾಮಾನ್ಯವಾಗಿ—ಇಷ್ಟಲಿಂಗಧಾರಣವನ್ನು ವಿಧಿಸಿದ ಮೇಲೆ ಅಂಥ ಲಿಂಗವನ್ನು ಧರಿಸುವ ವಿಶೇಷಸ್ಥಾನಗಳನ್ನು ಹೇಳದೆ ಹೋದರೆ ಆ ವಾಕ್ಯವೇ ಪೂರ್ಣವಾಗುವುದಿಲ್ಲ. ಆದುದರಿಂದ 'ಸರ್ವಲಿಂಗಗ್ಂ ಸ್ಥಾಪಯತಿ' ಎಂಬ ವಾಕ್ಯವು ಸಾಮಾನ್ಯವಾಗಿ ಲಿಂಗಧಾರಣವನ್ನು ವಿಧಿಸಿ 'ಸರ್ವಾನನ ಶಿರೋಗ್ರೀವಃ' ಎಂಬ ಮಂತ್ರವು ಆ ಲಿಂಗಧಾರಣೆಯ ವಿಶೇಷಸ್ಥಾನಗಳನ್ನು ತೋರಿಸಿತೆಂದು ಹೇಳುತ್ತೇವೆ. ಇದರಿಂದ 'ಸರ್ವಲಿಂಗ' ವಾಕ್ಯವನ್ನು ಉಪಜೀವ್ಯ (ಪ್ರಧಾನ) ವಾಕ್ಯವನ್ನಾಗಿಯು 'ಸರ್ವಾನನ' ವಾಕ್ಯವನ್ನು ಉಪಜೀವಕ (ಪೋಷಕ) ವಾಕ್ಯವನ್ನಾಗಿಯೂ ಮಾಡುವುದರಿಂದ ಇವೆರಡು ವಾಕ್ಯಗಳು ಸೇರಿ ಒಂದೇ ವಾಕ್ಯವಾಗುತ್ತದೆಯಾದುದರಿಂದ ಅಪೂರ್ವ ವಿಧಿಯನ್ನು ಹೇಳಲು ಯಾವ ಬಾಧಕವೂ ಇಲ್ಲ.

ಎರಡನೆಯದಾಗಿ ಬೆಂಕಿಯಲ್ಲಿ ಕಾಯಿಸಲ್ಪಟ್ಟ ಲಿಂಗ, ಶೂಲ, ಡಮರು, ಶಂಖ, ಚಕ್ರಾದಿಮುದ್ರೆಗಳನ್ನು ನಿಷೇಧಿಸಿ ವೇದೋಕ್ತಗಳಾದ ಶಿವಲಿಂಗ, ಭಸ್ಮ, ರುದ್ರಾಕ್ಷಾದಿ ಧಾರಣವನ್ನು ವಿಧಿಸುವುದರಿಂದ ನಿಯಮ ವಿಧಿಯಿಂದಲೂ, ಪರಿಸಂಖ್ಯಾವಿಧಿಯಿಂದಲೂ ಲಿಂಗಧಾರಣೆಯು ಸಿದ್ಧಿಸುತ್ತದೆ.

ಶಂಕೆ—'ಸರ್ವಲಿಂಗಂ' ಎಂಬವಾಕ್ಯವು ತೈತ್ತಿರೀಯ ವಾಕ್ಯವು 'ಸರ್ವಾನನ' ಎಂಬ ವಾಕ್ಯವು ಶ್ವೇತಾಶ್ವತರೋಪನಿಷತ್ತಿನ ವಾಕ್ಯವು

ಹೀಗೆ ಭಿನ್ನಭಿನ್ನಗಳಾದ ಶ್ರುತಿವಾಕ್ಯಗಳಿಗೆ ಉಪಜೀವ್ಯ ಉಪಜೀವಕ ಭಾವದಿಂದ ಏಕವಾಕ್ಯತೆಯನ್ನು ಅಂಗೀಕಾರಮಾಡುವುದಕ್ಕಿಂತಲೂ ಅದೇ ಶ್ವೇತಾಶ್ವತರದ 'ಸರ್ವಾನನ' ವಾಕ್ಯದ ಸಮೀಪದಲ್ಲಿರುವ ಲಿಂಗಧಾರಣ ವನ್ನು ವಿಧಾನಮಾಡುವ 'ತಸ್ಯಾಭಿಧ್ಯಾನಾದ್ಯೋಜನಾತ್' ಎಂಬ ವಾಕ್ಯಕ್ಕೂ 'ಸರ್ವಾನನ' ಎಂಬ ವಾಕ್ಯಕ್ಕೂ ಏಕವಾಕ್ಯತೆಯನ್ನು ಅಂಗೀಕರಿಸುವುದು ಉತ್ತಮವಲ್ಲವೆ?

**ಸಮಾಧಾನ**–ದೂರ ದೂರದಲ್ಲಿರುವ ಎರಡು ವಾಕ್ಯಗಳಿಗೆ ಉಪಜೀವ್ಯ ಉಪಜೀವಕಭಾವವನ್ನು ಅಂಗೀಕರಿಸುವುದಕ್ಕಿಂತ ಸಮೀಪದಲ್ಲಿರುವ ವಾಕ್ಯಗಳಿಗೆ ಉಪಜೀವ್ಯೋಪಜೀವಕ ಭಾವವನ್ನಂಗೀಕರಿಸುವುದುತ್ತಮ ಪಕ್ಷವೆಂದು ಒಪ್ಪಿದರೂ ಇಲ್ಲಿ ಅಂಥ ಉಪಜೀವ್ಯ ಉಪಜೀವಕಭಾವವನ್ನು ಈ ಎರಡು ವಾಕ್ಯಗಳಿಗೆ ಹೇಳಲಾಗುವುದಿಲ್ಲ. 'ತಸ್ಯಾಭಿಧ್ಯಾನಾದ್ಯೋಜನಾತ್ ತತ್ತ್ವಭಾವಾತ್' ಎಂಬ ವಾಕ್ಯಗಳು ಅರ್ಥಾತ್ ಇಷ್ಟಲಿಂಗ, ಪ್ರಾಣ ಲಿಂಗ, ಭಾವಲಿಂಗ ಎಂಬ ಮೂರು ಲಿಂಗಗಳ ಧಾರಣೆಯನ್ನು ಹೇಳುವ ವಾಕ್ಯಗಳಾಗಿದ್ದರೂ 'ತಸ್ಯ' ಎಂಬ ಪದಕ್ಕೆ ಹಿಂದಿನ ವಾಕ್ಯಗಳ ಪರ್ಯಾಲೋಚನೆಯಿಂದ ಸಾವಕಾಶವಾಗಿ ಶಿವಲಿಂಗವೆಂದು ಅರ್ಥಮಾಡಬೇಕಾಗುವುದೇ ಹೊರತು ವಾಚ್ಯಾರ್ಥದಿಂದಲೇ ಸ್ಪಷ್ಟವಾಗಿ ಲಿಂಗಧಾರಣ ಪರವೆಂದು ಹೇಳಲಾಗುವುದಿಲ್ಲ. 'ಸರ್ವಲಿಂಗಗ್‍ಂ ಸ್ಥಾಪಯತಿ' ಎಂಬ ಶ್ರುತಿವಾಕ್ಯವು ಬೇರೆ ಶ್ರುತಿಯಾಗಿದ್ದರೂ ಇದರಲ್ಲಿ ಶಿವನ ಹೊರತು ಇನ್ನಾವ ದೇವತೆಗಳಲ್ಲಿ ಪ್ರಯೋಗಿಸಲ್ಪಡದ ಶಿವನೊಬ್ಬನಲ್ಲಿಯೇ ನಿಯಮದಿಂದ ಯೋಗರೂಢವಾಗಿರುವ ಲಿಂಗವೆಂಬ ಪದವಿರುವುದರಿಂದಲೂ ಧಾರಣವಿಧಾಯಕವಾದ 'ಸ್ಥಾಪಯತಿ' ಎಂಬ ಪದವಿರುವುದರಿಂದಲೂ ಹಸ್ತದಲ್ಲಿಟ್ಟು ಪೂಜಿಸಬೇಕೆಂಬ ಅರ್ಥವನ್ನು ಮಾಡುವ "ಪಾಣಿಮಂತ್ರಂ" ಎಂಬ ಪದವಿರುವುದರಿಂದಲೂ "ಸರ್ವಾನನ ಶಿರೋಗ್ರೀವಃ" ಎಂದು ದೂರದಲ್ಲಿರುವ ವಾಕ್ಯದೊಡನೆ ಉಪಜೀವ್ಯ, ಉಪಜೀವಕಭಾವವನ್ನು ಹೇಳುವುದೇ ನ್ಯಾಯವಾದುದು—

**ಶಂಕೆ:**—ಲೋಕವೇದಾಧಿಕರಣ ನ್ಯಾಯದಿಂದ "ಸರ್ವಲಿಂಗಗ್‍ಂ ಸ್ಥಾಪಯತಿ" ಎಂಬ ವಾಕ್ಯಕ್ಕೆ "ಸರ್ವಾನನ ಶಿರೋಗ್ರೀವಃ" ಎಂಬ

ವಾಕ್ಯವು ಸಾಪೇಕ್ಷಕವಾಗಿದ್ದರೂ "ಸರ್ವಲಿಂಗಗ್ಂ ಸ್ಥಾಪಯತಿ" ಎಂಬ ವಾಕ್ಯವು ವಿಧಿವಾಕ್ಯವೆಂದೇ ಹೇಳಬೇಕು. ಏಕೆಂದರೆ—ಮೀಮಾಂಸಾ ಶಾಸ್ತ್ರದ ಪ್ರಥಮಾಧ್ಯಾಯದ ಮೂರನೆಯ ಪಾದದಲ್ಲಿ ವೈದಿಕ ಲೌಕಿಕ ಶಬ್ದ ಗಳಿಗೆ ಏಕಾರ್ಥಕತ್ವವು ನಿರ್ಣಯಿಸಲ್ಪಟ್ಟದೆ. ಎಂದರೆ ಲೌಕಿಕಶಬ್ದಗಳಿಗೂ ವೈದಿಕಶಬ್ದಗಳಿಗೂ ಬಹಳ ವ್ಯತ್ಯಾಸಗಳು ಕಂಡುಬರುತ್ತವೆ. ಲೋಕ ವ್ಯವಹಾರದಲ್ಲಿ "ದೇವಾಃ" ಎಂದು ಹೇಳಿದರೆ ವೇದದಲ್ಲಿ "ದೇವಾಸಃ" ಎಂದು ಹೇಳಿದೆ. ಲೋಕದಲ್ಲಿ "ಭವತಿ" ಎಂದು ವ್ಯವಹರಿಸಿದರೆ ವೇದವು "ಭವಾತಿ" ಎಂದು ಹೇಳುತ್ತದೆ. ಲೋಕದಲ್ಲಿ "ಕರ್ಣೈಃ" ಎಂದರೆ ವೇದವು "ಕರ್ಣೇಭಿಃ" ಎಂದು ಹೇಳುತ್ತದೆ. ಹೀಗೆ ಲೌಕಿಕ ಪ್ರಯೋಗ ಕ್ಕಿಂತಲೂ ವೈದಿಕಪ್ರಯೋಗಗಳು ವಿಲಕ್ಷಣವಾಗಿರುವುದರಿಂದ ಲೌಕಿಕ ಶಬ್ದಗಳಿಗೆ ಅರ್ಥವೇ ಬೇರೆ, ವೈದಿಕಶಬ್ದಗಳಿಗೆ ಅರ್ಥವೇ ಬೇರೆಯೆಂದು ಪೂರ್ವಪಕ್ಷವುಂಟಾಗಲಾಗಿ-ಹಾಗೆ ಲೌಕಿಕಶಬ್ದಗಳಿಗೂ ವೈದಿಕಶಬ್ದಗಳಿಗೂ ಬೇರೆ ಬೇರೆ ಅರ್ಥವನ್ನು ಹೇಳುವುದಾದರೆ ಈ ಶಬ್ದಗಳಿಗೆ ಈ ಅರ್ಥದಲ್ಲಿಯೇ ಶಕ್ತಿಯುಂಟೆಂದು ವ್ಯಾಕರಣಾದಿಗಳಿಂದ ತಿಳಿದುಬರುವ ಶಕ್ತಿಜ್ಞಾನವೇ ಇಲ್ಲದಂತಾಗುವುದು. ಯಾವಾಗ ಶಬ್ದದಲ್ಲಿ ಶಕ್ತಿಯನ್ನಂಗೀಕಾರಮಾಡ ಲಿಲ್ಲವೊ ಆಗ ಅರ್ಥಬೋಧವೇ ಆಗದೆ ಹೋಗಬೇಕಾಗುವುದರಿಂದ ಎಲ್ಲಾ ವಾಕ್ಯಗಳೂ ವ್ಯರ್ಥವಾಗಿ ಹೋಗಬೇಕಾಗುವುವು. ಆದುದರಿಂದ ಶಕ್ತಿ ಗ್ರಾಹಕವಾದ ವ್ಯಾಕರಣಸಾಪೇಕ್ಷೆಯಿಂದ ವೈದಿಕಶಬ್ದಗಳಿಗೂ ಲೌಕಿಕ ಶಬ್ದಗಳಿಗೂ ಒಂದೇ ಅರ್ಥವನ್ನಂಗೀಕರಿಸಬೇಕಲ್ಲದೆ ಬೇರೆ ಬೇರೆ ಅರ್ಥ ವನ್ನಂಗೀಕರಿಸಲಾಗದು. ಹೇಗೆಂದರೆ "ಪಶುನಾ ಯಜೇತ" ಎಂಬಲ್ಲಿ ಪಶುನಾ ಎಂಬ ತೃತೀಯಾನಿಷ್ಠ ಶಕ್ತಿಯೂ, ಯಜೇತ ಎಂಬಲ್ಲಿ ಯಜನಿಷ್ಠ ಶಕ್ತಿಯೂ, ಲಿಂಗ್‌ನಿಷ್ಠ ಶಕ್ತಿಯೂ ವ್ಯಾಕರಣನಿಯಮಾನುಸಾರವಾಗಿ ಹೇಳಲ್ಪಡುವುದರಿಂದ "ಪಶುನಾ ಯಜೇತ" ಎಂಬ ವೈದಿಕವಾಕ್ಯಕ್ಕೆ ವ್ಯಾಕರಣಾದಿಗಳ ಸಾಪೇಕ್ಷೆ ಇದ್ದರೂ ವಿಧಿಗೆ ಹೇಗೆ ಲೋಪವಿಲ್ಲವೋ ಅದರಂತೆ "ಸರ್ವಾನನ ಶಿರೋಗ್ರೀವಃ" ಎಂಬ ವಾಕ್ಯಕ್ಕೆ "ಸರ್ವ ಲಿಂಗಗ್ಂ ಸ್ಥಾಪಯತಿ" ಎಂಬ ವಾಕ್ಯದ ಸಾಪೇಕ್ಷೆಯಿದ್ದರೂ ವಿಧಿ ವಾಕ್ಯವನ್ನಾಗಿ ಏಕೆ ಅಂಗೀಕರಿಸಬಾರದೆಂದು ಆಕ್ಷೇಪವುಂಟಾಗುತ್ತದೆ. ಈ

ಆಕ್ಷೇಪವು ವಿಚಾರದೃಷ್ಟಿಯಿಂದ ಸರಿಯಾದುದಲ್ಲ. ಏಕಂದರೆ ವ್ಯಾಕರಣಾದಿಗಳು ಶಕ್ತಿಗ್ರಹವೊಂದರಲ್ಲಿ ಮಾತ್ರ ಉಪಯುಕ್ತಗಳಾಗಿವೆಯಾದುದರಿಂದ "ಪಶುನಾ ಯಜೇತ" ಎಂಬಲ್ಲಿ ಪ್ರಕೃತ ವಾಕ್ಯಾರ್ಥಬೋಧೆಗೆ ಉಪಯುಕ್ತವಾದ, ವೃತ್ತಿಜ್ಞಾನಾಧೀನಪದಜನ್ಯೋಪಸ್ಥಿತ್ಯಾದಿಗಳಿಂದೊಡಗೂಡಿದ ಕಾರಣಕಲಾಪಗಳು ಇರುವುದರಿಂದ ತಾತ್ಪರ್ಯವಿಷಯೀಭೂತ ಜ್ಞಾನವುಂಟಾದಾಗ್ಯೂ ಇತರ ಬೇರೆ ಯಾವದೊಂದು ವಾಕ್ಯದ ಅಪೇಕ್ಷೆಯು ಅದಕ್ಕಿಲ್ಲ. "ಸರ್ವಾನನ ಶಿರೋಗ್ರೀವಃ" ಎಂಬ ವಾಕ್ಯದಿಂದಾದರೋ ಲಿಂಗಧಾರಣಬೋಧಕ ಪದಜನ್ಯೋಪಸ್ಥಿತ್ಯಾದಿಗಳಿಂದೊಡಗೂಡಿದ ಕಾರಣ ಸಮುದಾಯವಿದ್ದರೂ ಲಿಂಗವನ್ನು ಧರಿಸುವ ಸ್ಥಾನ (ಆಧೇಯ) ಗಳನ್ನು ಬೋಧಿಸುವುದಕ್ಕಾಗಿ ಬೇರೆಯಾದ "ಸರ್ವಾನನ" ವಾಕ್ಯದ ಅಪೇಕ್ಷೆಯ ಆವಶ್ಯಕತೆ ಇರುವುದರಿಂದ ಪಶುವಿಧಿಗೆ ವ್ಯಾಕರಣಾದಿ ಸಾಪೇಕ್ಷೆ ಇದ್ದರೂ ಆ ವ್ಯಾಕರಣದೊಡನೆ ಏಕವಾಕ್ಯತೆಯು ಇರುವುದಿಲ್ಲ. "ಸರ್ವಾನನ ಶಿರೋಗ್ರೀವಃ" ಎಂಬುವಲ್ಲಾದರೋ "ಸರ್ವಲಿಂಗ" ವಾಕ್ಯಕ್ಕೂ "ಸರ್ವಾನನ" ವಾಕ್ಯಕ್ಕೂ ಏಕವಾಕ್ಯತೆಯನ್ನು ಆವಶ್ಯವಾಗಿ ಅಂಗೀಕರಿಸಬೇಕಾಗಿರುವುದರಿಂದ ಲಿಂಗೋಪಾಸನಾನುಷ್ಠಾನೋಪಯೋಗಿತ್ವವು ಇರುವುದರಿಂದ ಏಕವಾಕ್ಯತಾನಾಪನ್ನಾಪ್ರಾಪಿತ ಪ್ರಾಪಕತ್ವ ರೂಪದಿಂದ ಅಪೂರ್ವ ವಿಧಿಯೆನಿಸಿಕೊಳ್ಳುವುದರಲ್ಲಿ ಆವ ಬಾಧಕವೂ ಇರಲಾರದು. ಹೀಗೆ ಇವೆರಡು ವಾಕ್ಯಗಳಿಗೆ ಏಕವಾಕ್ಯತೆಯನ್ನಂಗೀಕಾರ ಮಾಡದಿದ್ದಲ್ಲಿ "ಸರ್ವಾನನ" ವಾಕ್ಯವು ವಿಧಿ ವಿಷಯಕವೇ ಆಗದೆ ಹೋಗಬೇಕಾಗುವುದು. ಆದುದರಿಂದ ಈ ಸರ್ವಾನನ ಮತ್ತು ಸರ್ವಲಿಂಗ ವಾಕ್ಯಗಳೆರಡೂ ಬೇರೆ ಬೇರೆಯಾಗಿ ವಿಧಿ ವಿಷಯಕವಾಗಿದ್ದರೂ ಎರಡು ಒಂದೆಡೆಗೆಸೇರಿ ಏಕವಾಕ್ಯತೆಯಿಂದ ವಿಧಿ ವಿಷಯಕತ್ವವನ್ನು ಅಂಗೀಕರಿಸಬೇಕು.

ಇದಲ್ಲದೆ ಇದೇ ಮಂತ್ರದ ಮುಂದೆ "ಸರ್ವವ್ಯಾಪೀ ಚ ಭಗವಾನ್" ಎಂದು ಲಿಂಗಸ್ತುತಿ ಮಾಡಿರುವುದರಿಂದ ಎರಡು ವಾಕ್ಯಗಳನ್ನು ಒಂದೇ ವಾಕ್ಯವನ್ನಾಗಿ ಮಾಡಿದುದರಿಂದ ಆಯಾಯ ಒಂದೊಂದು ಭಾಗವನ್ನು ತೆಗದುಕೊಂಡು ಮತ್ತೊಂದು ಭಾಗಕ್ಕೆ ಅನ್ಯಥಾಸಿದ್ಧಿಯೆಂಬ ದೋಷವನ್ನು ಹೇಳಲು ಅವಕಾಶವಿಲ್ಲ. ಆದರೆ "ಸರ್ವಲಿಂಗಗ್ಂ ಸ್ಥಾಪಯತಿ" ಎಂಬ

ವಾಕ್ಯದ ಮುಂದೆ " ಪಾಣಿಮಂತ್ರಂ ಪವಿತ್ರಂ " ಎಂಬ ವಾಕ್ಯವಿರುವುದಷ್ಟೆ! ಇಲ್ಲಿ 'ಪಾಣಿಮಂತ್ರ' ಎಂದರೆ "ಮಂತ್ರಃ ಅಸ್ಯಾಸ್ತೀತಿ ಮಂತ್ರಂ" ಎಂದು ಮತ್ವರ್ಥೀಯ ಅಚ್-ಪ್ರತ್ಯಯ ಮಾಡಲಾಗಿ ಮಂತ್ರ ಶಬ್ದಕ್ಕೆ ಲಿಂಗವೆಂದು ಅರ್ಥವಾಗುತ್ತದೆ—" ಪಾಣೌ ಮಂತ್ರಂ ಪಾಣಿಮಂತ್ರಂ " ಹಸ್ತದಲ್ಲಿಟ್ಟು ಪೂಜಿಸುವ ಲಿಂಗವೆಂದು ಅರ್ಥವು. ಈ ವಾಕ್ಯದಲ್ಲಿ "ಪಾಣಿಮಂತ್ರಂ" ಎಂಬ ಪದವು " ಸರ್ವಲಿಂಗಗ್ಂ ಸ್ಥಾಪಯತಿ " ಎಂಬ ವಾಕ್ಯಕ್ಕೆ ವಿಶೇಷಣವಾಗಿರುತ್ತದೆ ಇಂಥ ವಿಶೇಷಣದಿಂದ ಹಸ್ತದಲ್ಲಿರುವ ಲಿಂಗವೆಂದು ಅರ್ಥವು ಸಿದ್ಧವಾಗುವುದು. ಮೊದಲು ದೇಹದಲ್ಲಿ ಲಿಂಗವನ್ನು ಧರಿಸದ ಹೊರತ. ಲಿಂಗಕ್ಕೆ ಪಾಣಿ (ಹಸ್ತ) ಸ್ಥತ್ವವು ಸಂಭವಿಸುವುದಿಲ್ಲ. ಆದುದರಿಂದ ಅರ್ಥಾಪತ್ತಿ ಪ್ರಮಾಣದಿಂದಲೇ ಲಿಂಗಧಾರಣವನ್ನು ಕಲ್ಪಿಸುತ್ತೇವೆಯಾದುದರಿಂದ "ಸರ್ವಲಿಂಗಗ್ಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬ ಮಂತ್ರದಿಂದಲೇ ಲಿಂಗಧಾರಣಕ್ಕೆ ವಿಧಿರೂಪತ್ವವು ಸಿದ್ಧಿಸುವಲ್ಲಿ " ಸರ್ವಾನನ ಶಿರೋಗ್ರೀವಃ " ಎಂಬ ವಾಕ್ಯವಾದರೂ ಭಿನ್ನ ಪ್ರಮಾಣವೇ ಆಗುವುದರಿಂದ ಪ್ರಮಾಣಾಂತರದಿಂದ ಲಿಂಗಧಾರಣವು ಪ್ರಾಪ್ತವೇ ಆಗಬೇಕಾಗುವುದರಿಂದ ಅಪ್ರಾಪ್ತತ್ವರೂಪ ವಿಧಿಯ ಲಕ್ಷಣವೇ ಇಲ್ಲದಂತಾಗುವುದೆಂದು ಪುನಃ ಆಕ್ಷೇಪವುಂಟಾಗುವುದು.

ಸಮಾಧಾನ:—" ಪಾಣಿಮಂತ್ರಂ " ಎಂಬ ವಿಶೇಷಣವು "ಸರ್ವಲಿಂಗಂ" ಎಂಬ ವಾಕ್ಯದೊಡನೆ ಸಾಮಾನ್ಯವಾಗಿ ಧಾರಣವಿಧಾನದಲ್ಲಿ ಅಧಿಕರಣ (ಆಶ್ರಯ) ವನ್ನು ತೋರಿಸುತ್ತದೆಯಲ್ಲದೆ ಕಂಠಾದಿ ವಿಶೇಷ ಸ್ಥಾನಗಳನ್ನು ತೋರಿಸುವುದಿಲ್ಲ. ಲಿಂಗದ ಸಾನ್ನಿಧ್ಯವೇ ಇಲ್ಲದ ಮೇಲೆ ಪಾಣ್ಯಾಶ್ರಯತ್ವವು ಸಂಭವಿಸಲಾರದು. ಆದುದರಿಂದ " ಪಾಣಿಮಂತ್ರಂ " ಎಂಬ ವಾಕ್ಯವು ಸಾಧಾರಣವಾದ ಲಿಂಗದ ಸಾನ್ನಿಧ್ಯವನ್ನು ತೋರಿಸುವುದೇ ಹೊರತು ವಿಶೇಷ ರೂಪಗಳಾದ ಶಿರಸ್ಸು ಕಂಠಾದಿ ಸ್ಥಾನಗಳನ್ನು ತೋರಿಸುವುದಿಲ್ಲವಾದುದರಿಂದ " ಸರ್ವಾನನ ಶಿರೋಗ್ರೀವಃ" ಎಂಬುವ ವಾಕ್ಯವೇ ಭಕ್ತರ ಶಿರಸ್ಸು ಹಸ್ತರೂಪಗಳಾದ ವಿಶೇಷ ಸ್ಥಾನಗಳನ್ನು ತೋರಿಸುವುದರಿಂದ " ಸರ್ವಾನನ " ವಾಕ್ಯವು ಉಜ್ಜೀವಕವಾಕ್ಯವೆಂದೂ " ಸರ್ವಲಿಂಗ "

ವಾಕ್ಯವು ಉಜ್ಜೀವ್ಯವಾಕ್ಯವೆಂದು ನಿರ್ಧರಿಸಿಕೊಳ್ಳಬೇಕಾಗಿರುವುದರಿಂದ **ಅಪೂರ್ವ ವಿಧಿಗೆ ಬಾಧಕವು ಇಲ್ಲ**—

> **ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿ**
> **ಮಂತ್ರೇತಿ ಮಂತ್ರತಃ ॥**
>
> (ಲಿಂಗ ಪುರಾಣ ಅ. ೨೧.೧೦೪)

ಗುರುವು ಶಿಷ್ಯನ ಅಂಗವನ್ನು ಶಿವದೀಕ್ಷಾ ಸಂಸ್ಕಾರದಿಂದ ಪರಿಶುದ್ಧಿಗೊಳಿಸಿ "**ನಿಧನಪತಯೇ ನಮಃ .... ಸರ್ವಲಿಂಗಗ್ಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ**" ಎಂಬ ಮಂತ್ರವನ್ನುಚ್ಚರಿಸುತ್ತ ಶಿವಲಿಂಗವನ್ನು ಹಸ್ತ, ಕಂಠ, ಶಿರಸ್ಸು ಮೊದಲಾದ ಯಾವುದಾದರೊಂದು ಸ್ಥಲದಲ್ಲಿ ಧರಿಸತಕ್ಕುದೆಂದು ಸ್ಪಷ್ಟವಾಗಿ ಹೇಳಿರುತ್ತದೆ. ಹೀಗೆ "**ಸರ್ವಲಿಂಗ**" ವಾಕ್ಯಕ್ಕೆ **ಅಪೂರ್ವ ವಿಧಿ**ಯನ್ನು ಹೇಳಿ "**ಪಾಣಿಮಂತ್ರಂ ಪವಿತ್ರಂ**" ಎಂಬ ವಾಕ್ಯಕ್ಕೆ ನಿಯಮವಿಧಿಯನ್ನು ಹೇಳುವೆವು. ಮೀಮಾಂಸಾಶಾಸ್ತ್ರದಲ್ಲಿ "**ಅಗ್ನಿಹೋತ್ರಂ ಜುಹೋತಿ**" ಅಗ್ನಿಹೋತ್ರವೆಂಬ ಯಾಗದಿಂದ ಸ್ವರ್ಗವನ್ನು ಭಾವಿಸಬೇಕು ಎಂಬ ವಾಕ್ಯದಲ್ಲಿ ಸ್ವರ್ಗವನ್ನಪೇಕ್ಷಿಸುವವನು ಅಗ್ನಿಹೋತ್ರ ಯಾಗವನ್ನು ಮಾಡಬೇಕೆಂದು ಅರ್ಥವು ಸಿದ್ಧವಾದರೂ ಈ ಯಾಗವನ್ನು ಎಲ್ಲಿ ಮಾಡಬೇಕೆಂಬ ಒಂದು ಅಧಿಕರಣ ವಿಶೇಷವನ್ನು ಅಪೇಕ್ಷಿಸುತ್ತದೆ. ಸಾಮಾನ್ಯವಾಗಿ "**ಆಹವನೀಯ**" ಎಂಬ ಅಗ್ನಿಯಲ್ಲಿ ಆ ಯಾಗವನ್ನು ಮಾಡಬೇಕೊ, ಅಥವಾ ಬೇರೆ ಇನ್ನಾವುದಾದರೂ ಅಧಿಕರಣದಲ್ಲಿ ಮಾಡಬೇಕೊ ಎಂಬ ವಿಕಲ್ಪಗಳುಂಟಾಗುತ್ತವೆ. "**ಆಹವನೀಯೇ ಜುಹೋತಿ**" ಎಂಬ ವಿಶೇಷವಾಕ್ಯದಿಂದ ಆಹವನೀಯ ಎಂಬ ಅಗ್ನಿಯಲ್ಲಿಯೇ ಸ್ವರ್ಗಕಾಮಿಯು ಅಗ್ನಿಹೋತ್ರಯಾಗವನ್ನು ಮಾಡಬೇಕೇ ಹೊರತು ಮತ್ತೊಂದು ಅಗ್ನಿಯಲ್ಲಿ ಮಾಡಕೂಡದೆಂದು ನಿಯಮವನ್ನು ಅಂಗೀಕರಿಸಿರುವಂತೆ "**ಸರ್ವಲಿಂಗಂ ಸ್ಥಾಪಯತಿ**" ಭಕ್ತರು ಶಿವಲಿಂಗವನ್ನು ಧರಿಸತಕ್ಕುದು ಎಂಬ ವಾಕ್ಯದಲ್ಲಿರುವ "**ಸ್ಥಾಪಯತಿ**" ಎಂಬ ಪದವು ಸಾಮಾನ್ಯವಾಗಿ ಲಿಂಗಧಾರಣವನ್ನು ವಿಧಾನಮಾಡುತ್ತದೆಯಲ್ಲದೆ ಯಾವ ಸ್ಥಳದಲ್ಲಿ ಧರಿಸಬೇಕೆಂಬುದನ್ನು ಸ್ಪಷ್ಟಪಡಿಸದಿರುವುದರಿಂದ ಒಂದು ವಿಶೇಷವಾದ ಅಧಿಕರಣವನ್ನು ಅಪೇಕ್ಷಿಸುವುದರಿಂದ ಲಿಂಗಪೂಜೆಗೆ ದ್ವಾರಾದಿ

ಪೀಠವು ಅಧಿಕರಣವಾಗಿರುವಂತೆ ಹಸ್ತವೂ ಸಹ ಒಂದು ಅಧಿಕರಣವಾಗಿರುವುದರಿಂದ ಆ ಶಿವಲಿಂಗವನ್ನು ದಾರ್ವಾದಿಪೀಠಗಳ ಮೇಲಿಟ್ಟು ಪೂಜಿಸಬೇಕೊ ಅಥವಾ ಹಸ್ತವೆಂಬ ಪೀಠದ ಮೇಲಿಟ್ಟು ಪೂಜಿಸಬೇಕೊ ಎಂದು ಎರಡು ವಿಕಲ್ಪಗಳುಂಟಾಗಲಾಗಿ "**ಸರ್ವಲಿಂಗಂ**" ಎಂಬ ವಾಕ್ಯದ ಸಮೀಪದಲ್ಲಿಯೇ "**ಪಾಣಿ ಮಂತ್ರಂ ಪವಿತ್ರಂ**" ಎಂಬ ವಾಕ್ಯವಿರುವುದರಿಂದ ಶಿವಲಿಂಗವನ್ನು ಪಾಣಿ (ಹಸ್ತ) ಎಂಬ ಅಧಿಕರಣವಿಶೇಷದಲ್ಲಿರಿಸಿಯೇ ಪೂಜಿಸುತ್ತಿರಬೇಕಲ್ಲದೆ ಇನ್ನಾವ ಪೀಠಾದಿಗಳಲ್ಲಿಟ್ಟು ಪೂಜಿಸಕೂಡದೆಂದು ಹೇಳುವುದರಿಂದ **ನಿಯಮವಿಧಿಯಿಂದಲೂ** ಲಿಂಗಧಾರಣವು ಸಿದ್ಧವಾಗುತ್ತದೆ.

**ಶಂಕೆ:—"ಅಗ್ನಿಹೋತ್ರಂ ಜುಹೋತಿ"** ಎಂಬ ವಾಕ್ಯದ ಸಮೀಪದಲ್ಲಿ "**ಆಹವನೀಯೇ ಜುಹೋತಿ**" ಎಂಬ ಸಪ್ತಮ್ಯಂತಪದವಿರುವುದರಿಂದ ಆ ಅಗ್ನಿಹೋತ್ರಯಾಗಕ್ಕೆ ಅಧಿಕರಣತ್ವವು ನಿಶ್ಚಯವಾಗುತ್ತದೆ. ಅದರಂತೆ "**ಪಾಣಿ ಮಂತ್ರಂ**" ಎಂಬ ವಾಕ್ಯದಲ್ಲಿ ಸಪ್ತಮ್ಯಂತವಾದ ಅಂಥ ಪದವು ಕಾಣದೆ ಇರುವುದರಿಂದ ಕರಪೀಠದಲ್ಲಿಯೇ ಪೂಜಿಸಬೇಕೆಂದು ನಿಯಮ ಮಾಡಲು ಆಗುವುದಿಲ್ಲ.

**ಸಮಾಧಾನ:— "ಪಾಣಿಮಂತ್ರಂ"** ಎಂಬುವಲ್ಲಿ "**ಮಂತ್ರಃ ಅಸ್ಯ ಅಸ್ತೀತಿ ಮಂತ್ರಂ ಲಿಂಗಂ, ಪಾಣೌ ಮಂತ್ರಂ ಪಾಣಿಮಂತ್ರಂ**" ಎಂದು ವಿಗ್ರಹಮಾಡಿರುವುದರಿಂದ ಸಮಾಸವಿಧಿಯಿಂದ ಸಪ್ತಮೀವಿಭಕ್ತಿಯು ಲೋಪವಾಗಿರುತ್ತದೆ. ಅರ್ಥಾತ್ ಪಾಣಿ (ಹಸ್ತ) ಯಲ್ಲಿ ಲಿಂಗವನ್ನಿರಿಸಿ ಪೂಜಿಸುತ್ತಿರಬೇಕೆಂದು ಅಧಿಕರಣಪದವು ಸ್ಪಷ್ಟವಾಗಿ ತೋರುತ್ತಿರುವುದರಿಂದ ಅಂಥ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಮತ್ತು "**ಪಾಣಿಮಂತ್ರಂ**" ಎಂಬ ಪದದ ಮುಂದೆ "**ಪವಿತ್ರ**" ಶಬ್ದವೊಂದಿರುವುದರಿಂದ ಶುಚಿ, ಅಶುಚಿ ಸಾಧಾರಣಕಾಲಗಳಲ್ಲಿಯೂ ಶಿವಲಿಂಗವನ್ನು ಧರಿಸಿರಬೇಕೆಂದೂ ಯಾವಾಗಲೂ ಪವಿತ್ರತೆಯೂ ಸಹ ಸಿದ್ಧವಾಗುತ್ತದೆ—

**ಶಂಕೆ:—"ಪಾಣಿಮಂತ್ರಂ"** ಎಂಬ ಪದವು ಪಾಣ್ಯಧಿಕರಣತ್ವವನ್ನೂ "**ಪವಿತ್ರಂ**" ಎಂಬ ಪದವು ಶುಚ್ಯಶುಚಿ ಸಾಧಾರಣ ಕಾಲಗಳಲ್ಲಿ

ಲಿಂಗಧಾರಣದ ಪವಿತ್ರತೆಯನ್ನು ಹೇಳುವುದರಿಂದ ಒಂದು ವಾಕ್ಯದಲ್ಲಿ ಅನೇಕವಿಧಾನವು ಹೇಳಲ್ಪಟ್ಟಿತಾದ ಕಾರಣ ವಾಕ್ಯಭೇದವೆಂಬ ದೋಷ ವುಂಟಾಗುತ್ತದೆ.

ಸಮಾಧಾನ :— ಮೀಮಾಂಸಾಶಾಸ್ತ್ರದಲ್ಲಿ—

" ಆಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ " ಎಂಬ ವಾಕ್ಯದಲ್ಲಿ ಪುರೋಡಾಶವನ್ನುದ್ದೇಶಿಸಿ ಅಗ್ನಿದೇವತಾಕತ್ವವನ್ನು ಅಷ್ಟಕ ಪಾಲ ಸಂಸ್ಕೃತತ್ವವನ್ನೂ ವಿಧಾನಮಾಡಿರುವುದರಿಂದ ವಾಕ್ಯಭೇದದ ಆಕ್ಷೇಪ ವುಂಟಾಗಲಾಗಿ

ಪ್ರಾಪ್ತೇ ಕರ್ಮಣಿ ನಾನೇಕೋ ವಿಧಾತುಂ ಶಕ್ಯತೇ ಗುಣಃ ।
ಅಪ್ರಾಪ್ತೇ ತು ವಿಧೀಯಂತೇ ಬಹವೋಪ್ಯೇಕಯತ್ನತಃ ॥

ಎಂಬ ನ್ಯಾಯದಿಂದ ಅಗ್ನಿದೇವತಾಕತ್ವವಿಶಿಷ್ಟ ಅಷ್ಟಕಪಾಲ ಸಂಸ್ಕೃತತ್ವವಿಶಿಷ್ಟ ಪುರೋಡಾಶಕರಣಕ ಅಮಾವಾಸ್ಯಾ ಕಾಲಿಕಯಾಗವು ವಿಧಾನ ಮಾಡಲ್ಪಡುವುದರಿಂದ ಏಕವಾಕ್ಯವೇ ಆಗುವುದರಿಂದ ವಾಕ್ಯಭೇದವೆಂಬ ದೋಷವನ್ನು ಅಂಗೀಕರಿಸಲಾಗದೆಂದು ನಿರ್ಣಯಗೊಳಿಸಿದಂತೆ " ಪಾಣಿ ಮಂತ್ರಂ ಪವಿತ್ರಂ " ಎಂಬಲ್ಲಿಯೂ ಪಾಣ್ಯಧಿಕರಣಕತ್ವವಿಶಿಷ್ಟ ಪವಿತ್ರತ್ವ ವಿಶಿಷ್ಟ ಲಿಂಗ ಪೂಜೆಯು ವಿಧಾನಮಾಡುವುದರಿಂದ ವಾಕ್ಯಭೇದ ದೋಷ ವಿಲ್ಲವೆಂದು ತಿಳಿಯಬೇಕು.

ಶಂಕೆ :— ಒಂದುವೇಳೆ ವಾಕ್ಯಭೇದ ದೋಷವನ್ನು ಪರಿಹರಿಸಿದರೂ " ಸರ್ವಲಿಂಗಂ ಸ್ಥಾಪಯತಿ " ಎಂಬ ವಾಕ್ಯದಲ್ಲಿ " ಸ್ಥಾಪಯತಿ " ಎಂಬ ಪದವಿರುವುದರಿಂದ ರಂಗವಲ್ಯಾದಿಗಳಿಂದ ಅಲಂಕೃತವಾದ ಭೂಮಿಯ ಮೇಲೆ ಅಕ್ಕಿಯನ್ನು ತುಂಬಿದ ತಾಮ್ರಪಾತ್ರೆಯೆಂಬ ಪೀಠದಲ್ಲಿ ಲಿಂಗವನ್ನಿರಿಸಬೇಕೆಂಬ ಅರ್ಥವು ತೋರುತ್ತದೆ, ಮತ್ತು " ಪಾಣಿಮಂತ್ರಂ ಪವಿತ್ರಂ " ಎಂಬುವ ಮುಂದಿನ ವಾಕ್ಯದಿಂದ ಹಸ್ತಸ್ಪರ್ಶಪೂರ್ವಕವಾಗಿ ಮಂತ್ರವನ್ನುಚ್ಚರಿಸುತ್ತ ಮಂತ್ರ, ವರ್ಣ, ಪದಾದಿ ಷಡಧ್ವಶೋಧನದಿಂದ ಸಂಸ್ಕರಿಸತಕ್ಕುದೆಂದು ಅರ್ಥವಾಗುತ್ತದೆ. ಮತ್ತು ಮುಂದೆ " ಪವಿತ್ರಂ " ಎಂಬ ಶಬ್ದದಿಂದ ಆಗಮೋಕ್ತ ವಿಧಾನವಾಗಿ ಭೂಮಿಯ ಮೇಲೆ ಸಂಸ್ಕರಿಸು

ವುದರಿಂದ ಲಿಂಗವು ಪರಿಶುದ್ಧವಾಗುವುದೆಂದೂ ಅರ್ಥವಾಗುತ್ತದೆ. ಈ ಸಂಪ್ರದಾಯವು ಶೈವಾಗಮಾನುಸಾರವಾಗಿ ಲೋಕಪ್ರಸಿದ್ಧವಾಗಿರುವುದರಿಂದ ಇಂಥ ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ದೇಹದಲ್ಲಿ ಲಿಂಗವನ್ನು ಧರಿಸಬೇಕೆಂತಲೂ ಹಸ್ತದಲ್ಲಿ ಯಾವಾಗಲೂ ಪೂಜಿಸಬೇಕೆಂತಲೂ, ಶುಚ್ಯಶುಚಿ ಕಾಲಗಳಲ್ಲಿ ಶಿವಲಿಂಗವನ್ನು ದೇಹದಲ್ಲಿ ಧರಿಸಬೇಕೆಂತಲೂ ಹೀಗೆ ಅಪ್ರಸಿದ್ಧವಾದ ಅರ್ಥವನ್ನೇಕೆ ಕಲ್ಪಿಸಬೇಕು ?

**ಸಮಾಧಾನ:—" ಸರ್ವಲಿಂಗಂ ಸ್ಥಾಪಯತಿ "** ಎಂಬ ವಾಕ್ಯದಲ್ಲಿರುವ " ಸ್ಥಾಪಯತಿ " ಎಂಬ ಪದವು ಭೂಮಿಯಲ್ಲಾದರೂ ಲಿಂಗವನ್ನು ಪ್ರತಿಷ್ಠಿಸಬಹುದು ಅಥವಾ ಭಕ್ತರ ದೇಹದಲ್ಲಾದರೂ ಪ್ರತಿಷ್ಠಿಸಬಹುದೆಂಬ ಉಭಯಸಾಧಾರಣವಾದ ಅರ್ಥವನ್ನು ಕೊಡುತ್ತದೆ. ಅಲ್ಲದೆ ಭೂಮಿಯಲ್ಲಿಯೇ ಪ್ರತಿಷ್ಠಿಸಬೇಕೆಂಬ ವಿಶೇಷಾರ್ಥವನ್ನು ಕೊಡುವುದಿಲ್ಲ. ಒಂದು ವೇಳೆ **" ಸ್ಥಾಪಯತಿ "** ಎಂಬ ಪದವು ಭೂಮಿಸ್ಥಾಪನಪದವೆಂದೇ ಹೇಳಿದರೆ ವಿಶಾಲವಾದ ಶ್ರುತಿದೇವಿಗೆ ಸಂಕೋಚಭಾವವನ್ನು ಕಲ್ಪಿಸಿದಂತಾಗುವುದು. ಮತ್ತು ಈ ಅರ್ಥದಲ್ಲಿ ಅಂಥ ವಿನಿಗಮನವೇನೂ ಕಂಡುಬರುವುದಿಲ್ಲ. ಆದುದರಿಂದ **" ಸ್ಥಾಪಯತಿ "** ಎಂಬ ಪದಕ್ಕೆ ಲಿಂಗವನ್ನು ಭಕ್ತರ ಶರೀರದಲ್ಲಿ ಸ್ಥಾಪಿಸಬೇಕೆಂದು ಅರ್ಥಮಾಡುವುದರಲ್ಲಿ ಯಾವ ಅಭ್ಯಂತರವೂ ಕಂಡುಬರುವುದಿಲ್ಲ. ಹಾಗಾದರೆ ಶಿವಲಿಂಗವನ್ನು ಭೂಮಿಯಲ್ಲಿ ಸ್ಥಾಪಿಸಬೇಕೊ ಅಥವಾ ದೇಹದಲ್ಲಿ ಸ್ಥಾಪಿಸಬೇಕೊ ಎಂಬ ಸಂದೇಹವನ್ನು **" ಸಂದಿಗ್ಧೇ ತು ವಾಕ್ಯಶೇಷಾತ್ "** ಎಂಬ ಮೀಮಾಂಸಾನ್ಯಾಯದಿಂದ ಪರಿಹರಿಸಬೇಕು. **" ಅಕ್ತಾಃ ಶರ್ಕರಾ ಉಪದಧಾತಿ "** ಎಂಬ ವಾಕ್ಯದಲ್ಲಿ **" ಅಕ್ತಾಃ "** ಎಂಬ ಪದಕ್ಕೆ ಶರ್ಕರೆಯನ್ನು ತುಪ್ಪದಲ್ಲಿ ನೆನೆಯಿಸಬೇಕೊ ಅಥವಾ ಎಣ್ಣೆಯಲ್ಲಿ ನೆನೆಯಿಸಬೇಕೊ ಎಂಬ ಸಂಶಯವುಂಟಾಗಲಾಗಿ ಈ ವಾಕ್ಯದ ಮುಂದೆ **" ತೇಜೋ ವೈ ಘೃತಂ "** ಎಂಬ ವಾಕ್ಯಶೇಷದಿಂದ ಘೃತದಲ್ಲಿಯೇ ನೆನೆಯಿಸಬೇಕು. ತೈಲದಲ್ಲಿ ನೆನೆಯಿಸಬಾರದೆಂದು ನಿರ್ಣಯಿಸಲ್ಪಟ್ಟಿರುವಂತೆ **" ಸರ್ವಲಿಂಗಂ ಸ್ಥಾಪಯತಿ "** ಎಂಬ ವಾಕ್ಯದ ಸಮೀಪದಲ್ಲಿಯೇ ಬಂದಿರುವ **" ಪಾಣಿಮಂತ್ರಂ "** ಎಂಬ ವಾಕ್ಯಶೇಷದಿಂದ ಲಿಂಗವನ್ನು ದೇಹದಲ್ಲಿಯೇ ಧರಿಸ

ಬೇಕಲ್ಲದೆ ಭೂಮಿಯಲ್ಲಿ ಪ್ರತಿಷ್ಠಿಸಬಾರದೆಂಬ ಅರ್ಥವನ್ನು ನಿರ್ಣಯ ಗೊಳಿಸತಕ್ಕದ್ದು. ಇದಲ್ಲದೆ "**ಮನನಾತ್ ಪೂಜನಾತ್ ತ್ರಾಯತೆ ಇತಿ ಮಂತ್ರಂ ಪಾಣೌ ಮಂತ್ರಂ ಪಾಣಿಮಂತ್ರಂ**" ಎಂಬ ವ್ಯುತ್ಪತ್ತಿ ಬಲ ದಿಂದ ಪಾಣಿಪೀಠದಲ್ಲಿರಿಸಿ ಪೂಜೆಮಾಡುವ ವಿಧಾನವು ಭೂಮಿಯಲ್ಲಿ ಪ್ರತಿಷ್ಠಿಸಿದ ಸ್ಥಾವರಲಿಂಗದಲ್ಲಿ ಸಂಭವಿಸದಿರೋಣದರಿಂದ ಈ "**ಸರ್ವ ಲಿಂಗ**" ವಾಕ್ಯವು ದೇಹದಲ್ಲಿ ಧರಿಸಲ್ಪಟ್ಟಿರುವ ಇಷ್ಟಲಿಂಗವಿಷಯಕವೆಂದೇ ನಿರ್ಧರಿಸತಕ್ಕದು.

**ಶಂಕೆ:—** ಇಲ್ಲಿ ಸಪ್ತಮೀತತ್ಪುರುಷ ಸಮಾಸಕ್ಕೆ ಬದಲು "**ಪಾಣಿನಾ ಮನನಾತ್ ತ್ರಾಯತ ಇತಿ ಪಾಣಿಮಂತ್ರಂ**" ಎಂದು ತೃತೀಯಾ ಸಮಾಸವನ್ನು ಆಶ್ರಯಿಸಿ ಹಸ್ತದಲ್ಲಿ ಬಿಲ್ವಪುಷ್ಪಾದಿಗಳನ್ನು ಹಿಡಿದುಕೊಂಡು ಲಿಂಗವನ್ನು ಪೂಜಿಸುತ್ತ ರಕ್ಷಿಸತಕ್ಕುದು ಎಂದು ಅರ್ಥವಾಗುವುದರಿಂದ ಭೂಮಿಯಲ್ಲಿ ಪ್ರತಿಷ್ಠಿತವಾದ ಶಿವಲಿಂಗಪರವೆಂದೇ ಹೇಳುತ್ತೇವೆ.

**ಪರಿಹಾರ:—**ಹಾಗೆ ತೃತೀಯಾಸಮಾಸವನ್ನು ಮಾಡುವುದಾದರೆ "**ಸಮರ್ಥಃ ಪದವಿಧಿಃ**" ಎಂಬ ಪರಿಭಾಷೆಗೆ ಭಂಗವುಂಟಾಗುತ್ತದೆ. "**ಋದ್ಧಸ್ಯ ರಾಜ್ಞಃ ಪುರುಷಃ**" ಎಂದು ವಿಗ್ರಹ ಮಾಡಿದಲ್ಲಿ ರಾಜನ್+ ಙಸ್+ಪುರುಷ+ಸು ಎಂಬುವಲ್ಲಿ ಸಮಾಸವಾರಣೆಗೋಸ್ಕರ "**ಸಾಪೇಕ್ಷಮಸಮರ್ಥವತ್**" ಎಂಬ ವಾರ್ತಿಕದಿಂದ ಸಾಪೇಕ್ಷೆಯುಂಟಾಗಲು ಅಸಾಮರ್ಥ್ಯವು ಬೋಧಿಸಲ್ಪಡುವುದರಿಂದ ಸಮಾಸವಿಧಾಯಕಶಾಸ್ತ್ರವು ಇಲ್ಲಿ ಪ್ರವರ್ತಿಸುವುದಿಲ್ಲ. ಇದರಂತೆ "**ಪಾಣಿನಾ ಮನನಾತ್ ತ್ರಾಯತೆ**" ಎಂದು ವಿಗ್ರಹ ಮಾಡಿದಲ್ಲಿ ಮನನಶಬ್ದಾರ್ಥವು ಪಾಣ್ಯಂಶದಲ್ಲಿ ಸಾಪೇಕ್ಷೆಯುಂಟಾಗಿ ಅಸಾಮರ್ಥ್ಯವು ತೋರುವುದರಿಂದ "**ಸುಪ್‌ಸುಪೇತಿ**" ಸಮಾಸವನ್ನು ಮಾಡ ಕೂಡದೆಂದು ಭಾವವು. ಆದರೆ "**ದೇವದತ್ತಸ್ಯ ಗುರುಕುಲಂ**" "**ಚೈತ್ರಸ್ಯ ದಾಸಭಾರ್ಯಾ**" ಇತ್ಯಾದಿ ಸ್ಥಲಗಳಲ್ಲಿ ಗುರು ಪದಾರ್ಥವು ದೇವದತ್ತಾಂಶ ದಲ್ಲಿಯೂ, ದಾಸಪದಾರ್ಥವು ಚೈತ್ರಪದದಲ್ಲಿಯೂ ಸಾಪೇಕ್ಷತೆಯುಳ್ಳು ದಾದರೂ ಸಮಾಸವನ್ನಂಗೀಕರಿಸುವಂತೆ ಮನನವು ಕ್ರಿಯಾರೂಪವಾದುದ ರಿಂದ ಕಾರಕಾಂಶದಲ್ಲಿ ನಿತ್ಯಸಾಪೇಕ್ಷೆಯುಳ್ಳುದಾದುದರಿಂದ ಸಮಾಸಕ್ಕೆ ತಡೆ

ಯುಂಟಾಗುವುದಿಲ್ಲವೆಂದು ಪುನಃ ಆಶಂಕೆಯುಂಟಾದರೆ ಪಾಣಿಪದವೇ ವ್ಯರ್ಥವಾಗಬೇಕಾಗುವುದರಿಂದ "ಪಾಣಿಮಂತ್ರಂ" ಎಂಬಲ್ಲಿ ಪಾಣಿ ಪದಕ್ಕೆ ಸಪ್ತಮ್ಯಂತವಾಗಿ ವಿಗ್ರಹಮಾಡುವುದರಿಂದ ಅಧಿಕರಣಲಾಭವುಂಟಾಗುವ ಮೂಲಕವಾಗಿ ವಾಕ್ಯವು ಚರಿತಾರ್ಥವಾಗುತ್ತದೆ. ಮತ್ತು "ದೇವಾನ್ ಯಜೇತ" ಎಂಬಲ್ಲಿ ಪೂಜೆಯು ಮಾತ್ರ ವಿಧಾನಮಾಡಲ್ಪಟ್ಟಿದ್ದರೂ ಹಸ್ತಾದಿಗಳಿಗೆ ಕರಣತ್ವವು ತಾನಾಗಿಯೇ ಸಿದ್ಧವಾಗುವಂತೆ ತೃತೀಯಾಸಮಾಸ ಮಾಡದಿದ್ದರೂ ಹಸ್ತಕ್ಕೆ ಸ್ವತಃ ಕರಣತ್ವಲಾಭವುಂಟಾಗಿಯೇ ಉಂಟಾಗುತ್ತದೆಯಾದುದರಿಂದ "ಪಾಣಿಮಂತ್ರಂ" ಎಂಬಲ್ಲಿ ಸಪ್ತಮೀ ಸಮಾಸವನ್ನಾಶ್ರಯಿಸಿ ದೇಹದಲ್ಲಿ ಲಿಂಗಧಾರಣವಿಧಾನವನ್ನು ಬೋಧಿಸುವುದೆಂದು ಹೇಳುವುದೇ ಸಾಧುವಾಗಿರುತ್ತದೆ.

ಶಂಕೆ:—"ಪಾಣಿಮಂತ್ರಂ" ಎಂಬಲ್ಲಿ "ಮನನಾತ್ ತ್ರಾಯತೆ" ಎಂದು ವಿಗ್ರಹಮಾಡಿರುವುದರಿಂದ ಪಾಣಿಯು ಕರಣವಾಗಿರುವಂತೆ ಮನೋವಾಕ್ಕುಗಳೂ ಸಹ ಕರಣಗಳಾಗಿರುತ್ತವೆಯಷ್ಟೆ! ಇಲ್ಲಿ ಹಾಗೆ ಮನೋವಾಕ್ಕುಗಳಿಗೆ ಕರಣತ್ವವುಂಟಾಗದೆ ಪಾಣಿಯೊಂದಕ್ಕೇನೆ ಕರಣತ್ವವು ಸಿದ್ಧಿಸುವುದಕ್ಕಾಗಿ ಪಾಣಿಪದವು ಬಂದಿರುತ್ತದೆಯಾದ್ದರಿಂದ "ಪಾಣಿನಾ ಮಂತ್ರಂ" ಎಂದು ತೃತೀಯಾ ಸಮಾಸವನ್ನಾಶ್ರಯಿಸುವುದೇ ಉತ್ತಮವಲ್ಲವೆ?

ಸಮಾಧಾನ:—"ಶಿವಪೂಜಾದಿಕಂ ಕರ್ಮ ಮನೋವಾಕ್ಕಾಯ ಕರ್ಮಭಿಃ" ಲಿಂಗಪೂಜಾದಿಕರ್ಮಗಳನ್ನು ಮನೋವಾಕ್ಕಾಯಗಳಿಂದ ಮಾಡಬೇಕೆಂಬ ವಚನವಿರುವುದರಿಂದ ಮನಸ್ಸಮಾಗಮವು ಎಲ್ಲಾ ಕರ್ಮಗಳಲ್ಲಿಯೂ ಅವಶ್ಯವಾಗಿರಬೇಕು. ಅದಿಲ್ಲದ ಕರ್ಮಗಳು ಫಲಕಾರಿಗಳಲ್ಲವು. ಆದುದರಿಂದ "ಪಾಣಿನಾ" ಎಂದು ತೃತೀಯಾಸಮಾಸವನ್ನು ಮಾಡಿ ಪಾಣಿಯಿಂದಲೇ ಲಿಂಗವನ್ನು ಪೂಜಿಸಬೇಕೆಂದು ನಿಯಮಮಾಡಬಾರದು. ಒಂದುವೇಳೆ ಮಾನಸಾದಿಗಳಲ್ಲಿ ಬರುವ ಅತಿವ್ಯಾಪ್ತಿದೋಷವನ್ನು ವಾರಣ ಮಾಡುವುದಕ್ಕಾಗಿ ಪಾಣಿಪದವಿರುವುದೆಂದು ಹೇಳುವುದಾದರೆ ಅದು ಸಿದ್ಧಾಂತಕ್ಕೆ ವಿರುದ್ಧವಾಗುತ್ತದೆ. ಮತ್ತು ಏಕದೇಶಾನ್ವಯವೆಂಬ ದೋಷವೂ ಪ್ರಾಪ್ತವಾಗುತ್ತದೆಂದು ತಿಳಿಯಬೇಕು. ಹಾಗಾದರೆ "ಪಾಣೌ ಮಂತ್ರಂ ಪಾಣಿಮಂತ್ರಂ" ಎಂದು ಸಪ್ತಮೀ ತತ್ಪುರುಷ ಸಮಾಸವನ್ನೇ ಮಾಡಿ

ದರೂ ಅದೇ ದೋಷವು ಉಂಟಾಗುವುದೆಂಬ ಆಶಂಕೆಯುಂಟಾದರೆ ಪಾಣಿ ಪದಕ್ಕೆ ಸ್ವಸಿದ್ಧಾಂತದಲ್ಲಿ ಉಪಾಸಕನ ಪಾಣಿಯಲ್ಲಿ ಪೂಜಿಸಲ್ಪಡುವ ಶಿವಲಿಂಗ ಕರ್ತೃಕವಾದ ತ್ರಾಣಕ್ರಿಯೆಯಲ್ಲಿ ಉಪಾಸಕನ ಪಾಣ್ಯಧಿಕರಣವಿರುವುದರಿಂದ ವಿಶಿಷ್ಟಾನ್ವಯವು ಸಂಭವಿಸುವುದು. ತೃತೀಯಾಸಮಾಸವನ್ನು ಮಾಡುವುದರಿಂದ ಅಂಥ ಶಿವಲಿಂಗಕರ್ತೃಕ ತ್ರಾಣಕ್ರಿಯೆಯಲ್ಲಿ ಉಪಾಸಕನ ಪಾಣಿನಿಷ್ಠಕರಣತಾನಿರೂಪಕತ್ವಕ್ಕೆ ಬಾಧೆ ಇರುವುದರಿಂದ ಅಂಥಾ ವಿಶಿಷ್ಟಾನ್ವಯವನ್ನು ಹೇಳಲವಕಾಶವಿಲ್ಲ. ಇದರ ಮೇಲೆ "ಪಾಣಿನಾ ಅಭಿಮಂತ್ರಿತಂ" ಎಂದು ಮನನಶಬ್ದವು ಪೂಜಾರ್ಥದಲ್ಲಿ ಪ್ರಸಿದ್ಧವಾಗಿರುತ್ತದೆಯೆಂದು ಪುರಾಣಗಳು ಸ್ಪಷ್ಟವಾಗಿ ಹೇಳಿರುತ್ತವೆ. ಇಂಥ ಪೂಜಾವಾಚಕವಾದ ಮನನಶಬ್ದಕ್ಕೆ "ಪಾಣಿನಾ ಅಭಿಮಂತ್ರಿತಂ" ಎಂದು ಸಮಾಸ ಮಾಡಿ ಭೂನಿಃಸ್ಥಾಪಿತವಾದ ಶಿವಲಿಂಗವನ್ನು ಪಾಣಿ (ಹಸ್ತ) ಯಿಂದ ಅಭಿಮಂತ್ರಿಸುವುದೆಂದು ಅರ್ಥಮಾಡಿದರೆ ಮುಖ್ಯಾರ್ಥವನ್ನು ಬಿಟ್ಟು ಗೌಣಾರ್ಥವನ್ನು ಸ್ವೀಕಾರ ಮಾಡಿದಂತಾಗುತ್ತದೆ. ಮುಖ್ಯಾರ್ಥದಿಂದಲೇ ನಿರ್ವಾಹವಾಗುವಲ್ಲಿ ಗೌಣಾ (ಲಕ್ಷಣಾ) ರ್ಥ ಸ್ವೀಕಾರ ಮಾಡುವುದು ದೋಷಾವಹವಾದುದೆಂದು ಶಾಸ್ತ್ರಕಾರರು ಅಭಿಮತಿಸಿರುತ್ತಾರೆ. ಇದಲ್ಲದೆ ವೇದಾಂತ ಶಾಸ್ತ್ರದ ಮೂಲಭೂತವಾದ ಬ್ರಹ್ಮಸೂತ್ರ ಭಾಷ್ಯದಲ್ಲಿರುವ ಈಕ್ಷತ್ಯಧಿಕರಣಕ್ಕೂ ವಿರೋಧವಾಗುತ್ತದೆ ಹೇಗೆಂದರೆ—

"ಈಕ್ಷತೇರ್ನಾಶಬ್ದಂ"

ಎಂಬುದು ಐದನೆಯ ಸೂತ್ರವಾಗಿರುತ್ತದೆ. ಇಲ್ಲಿ "ಈಕ್ಷತೇಃ' ನ ಅಶಬ್ದಂ" ಎಂದು ಪದವಿಭಾಗವು. ಅಶಬ್ದಂ–ಆನುಮಾನಿಕವಾದ ಪ್ರಧಾನವು. ಈಕ್ಷತೇಃ–ಈಕ್ಷಣವತ್ವರೂಪವಾದ ಹೇತುವಿನಿಂದ–ನ–ಜಗತ್ಕಾರಣವಾಗುವುದಿಲ್ಲ. ಎಂದು ಅವಯವಾರ್ಥವು. ಛಾಂದೋಗ್ಯದಲ್ಲಿ

"ಸದೇವ ಸೌಮ್ಯೇದಮಗ್ರ ಆಸೀದೇಕಮೇವಾ
ದ್ವಿತೀಯಂ........ತದೈಕ್ಷತ ಬಹುಸ್ಯಾಂ ಪ್ರಜಾಯೇಯ"

(೬–೨–೩)

ಈ ಮಂತ್ರದಲ್ಲಿ ಸತ್ಪದವಾಚ್ಯವಾದ ವಸ್ತುವೇ ಚರಾಚರಾತ್ಮಕವಾದೀ ಸೃಷ್ಟಿಯ ಪೂರ್ವದಲ್ಲಿದ್ದಿತು. ಅದು ತಾನು ಬಹುರೂಪವಾಗಬೇಕೆಂದು ಸಂಕಲ್ಪಿಸಿತೆಂದು ಸಾಮಾನ್ಯವಾದ ಅರ್ಥವು ತೋರುತ್ತದೆ. ಆದರೆ ಈ ಪ್ರಪಂಚೋತ್ಪತ್ತಿಗೆ ಕಾರಣವಾದ ಸತ್ಪದವಾಚ್ಯವಾದ ವಸ್ತುವು ಸತ್ವ ರಜಸ್ತಮೋರೂಪವಾದ ಪ್ರಧಾನವೋ ಅಥವಾ ಚೇತನಸ್ವರೂಪವಾದ ಬ್ರಹ್ಮವೋ ಎಂಬ ಸಂಶಯವುದಯವಾಗುವುದು.

**" ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಂ ಜನಯಂತೀಂ ಸರೂಪಾಂ "**

ಮಹಾನಾರಾಯಣೋಪನಿಷತ್.

(ತೈ. ಉ. ೪-೧೦-೫೬)

ಆ ಸತ್ವರಜಸ್ತಮೋಗುಣಾತ್ಮಕ ಪ್ರಧಾನವೇ ಸತ್ಪದವಾಚ್ಯವೆಂದು ಸಾಂಖ್ಯಮತಾನುಸಾರವಾಗಿ ಅರ್ಥವನ್ನು ಮಾಡಬೇಕಾಗುವುದು. ಪ್ರಧಾನವು ಜಡವಾದುದರಿಂದ ಲೋಕವನ್ನು ಸೃಜಿಸಲಾರದು. ಏಕೆಂದರೆ " ಸದೇವ ಸೌಮ್ಯೇದಂ " ಎಂದು ಉಪಕ್ರಮಿಸಿ ಮಧ್ಯದಲ್ಲಿ " ತತ್ತೇಜ ಐಕ್ಷತ " " ತಾ ಆಪ ಐಕ್ಷಂತ " ಎಂದು ಹೇಳುತ್ತಾ ಅಂತ್ಯದಲ್ಲಿ " ಸ ಆತ್ಮಾತತ್ತ್ವ ಮಸಿ " ಎಂದು ಉಪಸಂಹಾರ ಮಾಡಿರುತ್ತಾರೆ. ಈ ಷಡ್ವಿಧಲಿಂಗ ತಾತ್ಪರ್ಯದಿಂದ ಆತ್ಮವೇ ಸತ್ಪದ ವಾಚ್ಯವೆಂದು ನಿರ್ಧರಿಸತಕ್ಕದು. ಆದರೆ 'ತೇಜಸ್ಸು ನೋಡಿತು' 'ಜಲವು ನೋಡಿತು' ಇತ್ಯಾದಿ ಸ್ಥಲಗಳಲ್ಲಿ ಜಡಗಳಾದ ತೇಜೋಜಲಾದಿಗಳಿಗೆ ಈಕ್ಷಣ ಕರ್ತೃತ್ವವನ್ನು **ಮುಖ್ಯವೃತ್ತಿ**ಯಿಂದ ಹೇಳಲು ಅವಕಾಶವಿಲ್ಲವಾದುದರಿಂದ **ಗೌಣೀವೃತ್ತಿ**ಯಿಂದ ಅಂಗೀಕರಿಸು ವಂತೆ ಪ್ರಧಾನಕ್ಕೂ ಗೌಣೀವೃತ್ತಿಯಿಂದ ಜಗತ್ಕರ್ತೃತ್ವವನ್ನು ಅಂಗೀಕರಿಸಿರು ತ್ತಾರೆ. ಇದರಂತೆ " **ಪಾಣಿಮಂತ್ರಂ** " ಎಂಬ ಮಂತ್ರಕ್ಕೂ " **ಪಾಣಿನಾ ಅಭಿಮಂತ್ರಿತಂ** " ಭೂಮಿಯಲ್ಲಿ ಪ್ರತಿಷ್ಠಿಸಿರುವ ಲಿಂಗವನ್ನು ಹಸ್ತದಿಂದ ಮಂತ್ರಿಸುವುದೆಂದು ಗೌಣಾರ್ಥಸ್ವೀಕಾರಮಾಡುತ್ತೀವೆಂದರೆ, ಒಂದು ಕಡೆ ಯಲ್ಲಿ ಗೌಣಾರ್ಥಸ್ವೀಕಾರಮಾಡಿದರೂ ಇನ್ನೊಂದು ಕಡೆಯಲ್ಲಿ ಅದು ಸಂಭ ವಿಸುವುದಿಲ್ಲ. ಮುಖ್ಯಾರ್ಥದಿಂದ ನಿರ್ವಾಹವಾಗುವಾಗ ಗೌಣಾರ್ಥ ಸ್ವೀಕಾರ ಮಾಡುವುದು ನಿಂದ್ಯವಾದುದರಿಂದ "**ಪಾಣೌ ಮಂತ್ರಂ**" ಎಂದು ಸಪ್ತಮೀ

ಸಮಾಸವನ್ನಾಶ್ರಯಿಸಿ ಇಷ್ಟಲಿಂಗಪರವನ್ನಾಗಿ ಹೇಳುವುದೇ ಉತ್ತಮ ಪಕ್ಷವಾಗಿದೆ. ಮತ್ತು "ಪಾಣಿಮಂತ್ರಂ ಪವಿತ್ರಂ" ಎಂಬ ವಾಕ್ಯದ ಹಿಂದೆ ದೇಹದೊಳಗೂ, ದೇಹದ ಮೇಲೂ ಧರಿಸಿರುವ ಲಿಂಗವಿಷಯವೇ ಬಂದಿರುವುದರಿಂದ ಈ ಒಂದು ವಾಕ್ಯಕ್ಕೆ ಭೂಮಿಯಲ್ಲಿ ಸ್ಥಾಪಿಸಿದ ಸ್ಥಾವರಲಿಂಗಪರವೆಂದು ಅರ್ಥಮಾಡುವುದರಿಂದ ಪ್ರಕರಣವಿರೋಧವೆಂಬ ದೋಷವೂ ಸಹ ಬರುತ್ತದೆ. ಹೇಗೆಂದರೆ "ನಿಧನಪತಯೇ ನಮಃ" ಎಂದು ಆರಂಭಿಸಿ "ಏತತ್ಸೋಮಸ್ಯ ಸೂರ್ಯಸ್ಯ" ಎಂಬುವವರೆಗೂ ಇರುವ ವಾಕ್ಯಗಳಿಂದ ಕ್ರಮವಾಗಿ ವೀರಶೈವ ಸಿದ್ಧಾಂತದ ಪ್ರಕಾರ ದಶವಿಧ ಲಿಂಗಗಳನ್ನು ತೋರಿಸುತ್ತ ಈ ಲಿಂಗಗಳ ಸ್ವರೂಪವನ್ನು ವಿವರಿಸಿರುವುದನ್ನು ನೋಡುತ್ತಲಿದೇವೆ.

ಅಖಂಡಮೇಕಂ ಲಿಂಗಂ ಸ್ಯಾತ್ತದೇವ ಗುರುಣಾ ಪರಮ್ ।
ಭಾವಪ್ರಾಣೇಷ್ಟಭೇದೇನ ತ್ರಿಧಾ ಭೂತಂ ನಗಾತ್ಮಜೇ

ಇಷ್ಟಲಿಂಗಪ್ರಕೃತಿಕೇ ಆಚಾರಗುರುಲಿಂಗಕೇ ।
ಪಾರ್ಥಿವಾಪ್ಯೇ ಇತಿಪ್ರೋಕ್ತೇ ಶೈವಾಗಮವಿಶಾರದೈಃ ॥

ಪ್ರಾಣಲಿಂಗಪ್ರಕೃತಿಕೇ ತೇಜೋವಾಯುಮಯೇ ತಥಾ ।
ಶಿವಲಿಂಗ ಚರಾಭಿಖ್ಯೇ ಲಿಂಗೇ ದ್ವೇ ವರವರ್ಣಿನಿ ॥

ವ್ಯೋಮ ಪ್ರಕೃತಿಕಂ ಲಿಂಗಂ ಪ್ರಸಾದಾಖ್ಯಂ ಮಹತ್ತರಂ ।
ಆತ್ಮತತ್ತ್ವಮಯಂ ಪ್ರೋಕ್ತಂ ಮಹಾಲಿಂಗಂ ಮಹತ್ತರಮ್ ॥

ಸಿದ್ಧಾಂತ ಶೇಖರ

ಎಲೌ ಪಾರ್ವತಿಯೆ! ಅಖಂಡವಾದ ಬ್ರಹ್ಮಲಿಂಗವೊಂದೇ ತನ್ನ ಲೀಲಾವೈಭವದಿಂದ ಭಾವಲಿಂಗವೆಂತಲೂ, ಪ್ರಾಣಲಿಂಗವೆಂತಲೂ, ಇಷ್ಟಲಿಂಗವೆಂತಲೂ ಮೂರು ಪ್ರಕಾರವಾಯಿತು. ಆ ಇಷ್ಟಲಿಂಗದಲ್ಲಿ ಆಚಾರಲಿಂಗವೆಂತಲೂ, ಗುರುಲಿಂಗವೆಂತಲೂ ಎರಡು ಪ್ರಕಾರವಾಯಿತು. ಇವುಗಳಲ್ಲಿ ಆಚಾರಲಿಂಗವು ಪೃಥ್ವೀಸಂಬಂಧವಾದುದು. ಗುರುಲಿಂಗವು ಜಲಸಂಬಂಧವಾದುದು. ಪ್ರಾಣಲಿಂಗದಲ್ಲಿ ಶಿವಲಿಂಗವೆಂದೂ, ಜಂಗಮಲಿಂಗವೆಂದೂ ಎರಡು ಪ್ರಕಾರವಾಯಿತು. ಅವುಗಳಲ್ಲಿ ಶಿವಲಿಂಗವು ತೇಜೋರೂಪವಾದುದು, ಜಂಗಮಲಿಂಗವು ವಾಯು ರೂಪವಾದುದು.

ಭಾವಲಿಂಗದಲ್ಲಿ ಪ್ರಸಾದಲಿಂಗವೆಂತಲೂ, ಮಹಾಲಿಂಗವೆಂತಲೂ ಎರಡು ಪ್ರಕಾರವಾಯಿತು. ಇವುಗಳಲ್ಲಿ ಪ್ರಸಾದಲಿಂಗವು ಆಕಾಶರೂಪವಾದುದು. ಮಹಾಲಿಂಗವು ಆತ್ಮರೂಪವಾದುದು. ಹೀಗೆ ಹೇಳಿರುವ ದಶವಿಧ ಲಿಂಗಗಳನ್ನೇ ತೈತ್ತಿರೀಯಶ್ರುತಿಯು ಸ್ತುತಿಮಾಡಿರುತ್ತದೆ.

ಇಲ್ಲಿ "ಊರ್ಧ್ವಲಿಂಗಾಯ ನಮಃ" ಎಂಬ ವಾಕ್ಯವು ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಅನಾಹತ, ವಿಶುದ್ಧಿ, ಆಜ್ಞಾ, ಶಿಖಾ, ಶಿಖಾಂತ, ಪಶ್ಚಿಮ ಎಂಬ ಒಂಭತ್ತು ಚಕ್ರಗಳಲ್ಲಿ ವಿಹರಿಸುವ ನವಲಿಂಗಗಳಿಗಾಶ್ರಯವಾದ ಅಖಂಡಲಿಂಗವನ್ನು ಸ್ತುತಿಸುತ್ತದೆ.

"ಹಿರಣ್ಯಲಿಂಗಾಯ ನಮಃ" ಎಂಬ ವಾಕ್ಯವು

ತಪ್ತಕಾಂಚನಸಂಕಾಶಂ ಕಂದಸ್ಥಾನಸಮಾಶ್ರಿತಮ್ ।
ಯೋಗಿಭಿಶ್ಚ ಸದಾ ಧ್ಯೇಯಂ ಪ್ರಾಣಲಿಂಗಂ ವಿದುರ್ಬುಧಾಃ ॥

ಪುಟಕ್ಕಿಟ್ಟ ಬಂಗಾರದಂತೆ ಹೊಳೆಯುತ್ತಿರುವ ಮೂಲಸ್ಥಾನವನ್ನಾಶ್ರಯಿಸಿದ ಯೋಗಿಗಳ ಧ್ಯಾನಕ್ಕೆ ವಿಷಯವಾದ ವಸ್ತುವೇ ಪ್ರಾಣಲಿಂಗವೆಂದು ಪಂಡಿತರ ಅನುಮತಿಯಿರುವುದರಿಂದ ಅಂಥ ಪ್ರಾಣಲಿಂಗವನ್ನು ಸ್ತುತಿಸುತ್ತದೆ.

"ಸುವರ್ಣಲಿಂಗಾಯ ನಮಃ" ಎಂಬ ವಾಕ್ಯವು

ನಮಃ ಪೀಠಮಿತಿಪ್ರೋಕ್ತಂ ಶಿಕಾರಂ ಮಧ್ಯಮೀರಿತಮ್ ।
ವಾಕಾರಂ ಗೋಮುಖಂ ವೃತ್ತಂ ಯಕಾರಂ ಗೋಳಕಂ ಸ್ಮೃತಮ್ ।
ಓಂಕಾರಂ ಲಿಂಗಮಾಖ್ಯಾತಂ ಷಡ್ವರ್ಣಂ ಲಿಂಗಮುಚ್ಯತೇ ।

ಎಂದು ಶಿವಾಗಮದಲ್ಲಿ ಹೇಳಿರುವುದರಿಂದ ಶಿವಲಿಂಗವೆಂಬ ಶರೀರದ ಅವಯವವೆನಿಸಿದ ನಕಾರಾದಿ ವರ್ಣಗಳನ್ನು ಸ್ಪಷ್ಟಪಡಿಸಿರುವುದರಿಂದ ಇಷ್ಟಲಿಂಗವನ್ನು ಸ್ತುತಿಸಿರುತ್ತದೆ. "ದಿವ್ಯಲಿಂಗಾಯ ನಮಃ" ಎಂಬ ವಾಕ್ಯವು "ದಿವಿಭವಂ ದಿವ್ಯಂ" ಎಂಬ ವ್ಯುತ್ಪತ್ತಿಗನುಸಾರವಾಗಿ ಪ್ರಸಾದಲಿಂಗವು ಆಕಾಶತತ್ತ್ವಾಧಿಷ್ಠಿತವಾದುದರಿಂದ ಅಂಥ ದಿವ್ಯಶಬ್ದಾಭೇದವೆನಿಸಿದ ಪ್ರಸಾದಲಿಂಗವನ್ನು ಸ್ತುತಿಸಿರುತ್ತದೆ. "ಭವಲಿಂಗಾಯ ನಮಃ" ಎಂಬ ವಾಕ್ಯವು

ಜ್ಯೇಷ್ಠಾ ಜಲಮಯೀ ತತ್ರ ಸ್ಥಿತ್ಯುಪಾದಾನರೂಪಿಣೀ ।
ಭವಸ್ತದೀಶಸ್ಯ ಜ್ಯೇಷ್ಠೋ ಜ್ಯೇಷ್ಠಾ ತಚ್ಛಕ್ತಿರೀರಿತಾ ॥

ಪೃಥಿವ್ಯಾದಿ ಪಂಚಭೂತಗಳೊಳಗೆ "ಅಪ ಏವ ಸಸರ್ಜಾದೌ ತಾಸು ಬೀಜಮುಪಾಸೃಜತ್" ಎಂಬ ಮನುವಾಕ್ಯಾನುಸಾರವಾಗಿ 'ಜಲತತ್ತ್ವವೇ ಮೂಲಾಧಾರವಾದುದರಿಂದ ಆ ಜಲದಲ್ಲಿ ಭವಶಬ್ದ ವಾಚ್ಯವಾದ ಬ್ರಹ್ಮವು ಮೊದಲು ಬೀಜವನ್ನು ಬಿತ್ತಿದುದರಿಂದ ಹಿರಿದೆನಿಸಿತು. ಮತ್ತು ಆತನ ಕ್ರಿಯಾಶಕ್ತಿಯೇ ಹಿರಿದೆನಿಸಿತು ಎಂಬ ಶಿವಾಗಮಪ್ರಮಾಣಾನುಸಾರವಾಗಿ ಗುರುಲಿಂಗವು ಜಲಾಧಿಷ್ಠಿತವಾದುದರಿಂದ ಅಂಥ ಭವಶಬ್ದಾಭೇದವೆನಿಸಿದ ಗುರುಲಿಂಗವನ್ನು ಸ್ತುತಿಸಿರುತ್ತದೆ.

"ಶರ್ವಲಿಂಗಾಯ ನಮಃ" ಎಂಬ ವಾಕ್ಯವು

ವಾಮಾತ್ಮಾ ಪೃಥಿವೀ ತತ್ತ್ವಭೂತವಾಮಾತ್ಮಿಕಾ ಯಯಾ ।
ಸೃಷ್ಟಿಃ ಪ್ರವರ್ತತೇ ವಾಮಾ ಸಾ ಶರ್ವಕ್ಷಿತಿಮೂರ್ತಿಪ ॥

ಎಂಬ ಸಿದ್ಧಾಂತಸಾರಾವಳಿಯ ಪ್ರಮಾಣದಿಂದ ಯಾವ ಪೃಥಿವಿಯಿಂದ ವಾಮಾತ್ಮಕವಾದ ಸೃಷ್ಟಿಯು ಉಂಟಾಗಿದೆಯೋ ಅಂಥ ಪೃಥಿವೀ ತತ್ತ್ವಾಧಿಷ್ಠಿತವಾದ ಆಚಾರಲಿಂಗವನ್ನು ಸ್ತುತಿಸಿರುತ್ತದೆ.

"ಶಿವಲಿಂಗಾಯ ನಮಃ" ಎಂಬ ವಾಕ್ಯವು

ಅಗ್ನೇಶ್ಚ ರುದ್ರರೂಪತ್ವಾದ್ರೌದ್ರಾಗ್ನೇಯಿಯಾ ತದೀಶ್ವರಃ ।
ಸಪ್ರೈ ಪಶುಪತೀ ರುದ್ರೋ ರೌದ್ರೀ ತಚ್ಛಕ್ತಿರಿಷ್ಯತೇ ॥

ಎಂಬ ಪ್ರಮಾಣಾನುಸಾರವಾಗಿ ಅಗ್ನಿಯು ರುದ್ರರೂಪವಾಗಿರುವುದರಿಂದ ಅಗ್ನೀಶ್ವರನು ರೌದ್ರಾಗ್ನೇಯ ಎಂದು ಹೇಳಿಸಿಕೊಳ್ಳುವನು. ಅವನಿಗೆ ಪಶುಪತಿಯೆಂದು ಹೇಳುವರು. ಆತನಲ್ಲಿರುವ ಶಕ್ತಿಯೇ ರೌದ್ರೀ ಎಂದು ಹೇಳಿಸಿಕೊಳ್ಳುವುದರಿಂದ ತೇಜಸ್ತತ್ತ್ವಾಧಿಷ್ಠಾನವಾದ ಶಿವಲಿಂಗವನ್ನು ಸ್ತುತಿಸಿರುತ್ತದೆ.

"ಜ್ವಲಲಿಂಗಾಯ ನಮಃ" ಎಂಬ ವಾಕ್ಯವು

ಪ್ರಾಣಸ್ಯ ಕಾಲರೂಪತ್ವಾತ್ ಕಾಲಶಕ್ತಿಸ್ತು ವಾಯವೀ ।
ವಾಯುಮೂರ್ತಿಪ ಉಗ್ರಸ್ತು ಸಕಾಲ ಇತಿ ವಿಶ್ರುತಃ ॥

ಎಂಬ ಪ್ರಮಾಣಾನುಸಾರವಾಗಿ ಪ್ರಾಣವು ಕಾಲರೂಪವಾದುದರಿಂದ ಕಾಲಶಕ್ತಿಯು ವಾಯುಸಂಬಂಧವುಳ್ಳುದು. ಅಂಥ ವಾಯುಶರೀರವನ್ನು ರಕ್ಷಿಸುವುದರಿಂದ ಉಗ್ರಪದವಾಚ್ಯನಾದ ಶಿವನು ಕಾಲನೆನಿಸುವನು. ಇಂಥ ವಾಯುತತ್ತ್ವಾಧಿಷ್ಠಿತವಾದ **ಜಂಗಮಲಿಂಗವನ್ನು** ಸ್ತುತಿಸಿರುತ್ತದೆ. **"ಪರಮಲಿಂಗಾಯ ನಮಃ"** ಎಂಬ ವಾಕ್ಯವು ಆತ್ಮತತ್ತ್ವಾಧಿಷ್ಠಿತವಾದ **ಮಹಾಲಿಂಗವನ್ನು** ಸ್ತುತಿಸಿರುತ್ತದೆ. **"ಆತ್ಮಲಿಂಗಾಯ ನಮಃ"** ಎಂಬ ವಾಕ್ಯವು ಕಾರಣಶರೀರಾಧಿಷ್ಠಿತವಾದ **ಭಾವಲಿಂಗವನ್ನು** ಸ್ತುತಿಸಿರುತ್ತದೆ. ಹೀಗೆ ದಶವಿಧಲಿಂಗಗಳ ಸ್ವರೂಪವನ್ನು ಶ್ರೀ ರೇಣುಕ ಭಗವತ್ಪಾದರು ಉಲ್ಲೇಖಿಸಿರುತ್ತಾರೆ. ಇದರಿಂದ **ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ, ಅಖಂಡಲಿಂಗ** ಎಂದು ಹತ್ತು ಲಿಂಗಗಳನ್ನು ಆಧಾರಾದಿ ದಶಚಕ್ರಗಳಲ್ಲಿ ಅನವರತವೂ ಧ್ಯಾನಿಸುವ ಶಿವಯೋಗಿಯು **ಸರ್ವಾಂಗಲಿಂಗವಾಗಿ** ಬೆಳಗುವನು. ಇವುಗಳಲ್ಲಿ ನಾಲ್ಕು ದಳದ **ಆಧಾರಚಕ್ರವೆಂಬ** ರತ್ನಮಂಟಪದಲ್ಲಿ ಪೃಥಿವೀ ತತ್ತ್ವಾಭಿಮಾನಿಯಾದ **ಆಚಾರಲಿಂಗಕ್ಕೆ** ಆನಂದವೆಂಬ ಜಲವನೆರೆದು ಸುಖವೆಂಬ ಸುಗಂಧವನು ಲೇಪಿಸಿ, ಚಿತ್ತವೆಂಬ ಅಕ್ಷತೆಯನ್ನಿಟ್ಟು, ಆಧಾರಕಮಲಕ್ಕಿರುವ ವ, ಶ, ಷ, ಸ ಎಂಬ ನಾಲ್ಕು ಬೀಜಾಕ್ಷರಗಳೆಂಬ ಪೂಮಾಲೆಯನ್ನು ಧರಿಸಿ, ಆ ಪೃಥಿವಿಯ ಪೀತವರ್ಣವೆಂಬ ಜ್ಯೋತಿಯ ಬೆಳಗಿ ಅಲ್ಲಿಯ ಜಾಗ್ರದವಸ್ಥೆಯೆಂಬ ಭಾವಪೀತಾಂಬರವನುಡಿಸಿ, ನಿಷ್ಕಾಮವೆಂಬ ರತ್ನಖಚಿತಾಭರಣವನ್ನಲಂಕರಿಸಿ, ಭಕ್ತಿ ಎಂಬ ಭಕ್ಷ್ಯವನು ನಿವೇದಿಸಿ, ಶ್ರದ್ಧೆ ಎಂಬ ತಾಂಬೂಲವನರ್ಪಿಸುವುದೇ **ಆಚಾರಲಿಂಗದ ಪೂಜೆಯು.**

ಆರುದಳದ **ಸ್ವಾಧಿಷ್ಠಾನ** ಚಕ್ರವೆಂಬ ಸಿಂಹಾಸನದಲ್ಲಿ ಮಂಡಿಸಿರುವ ಜಲತತ್ತ್ವಾಭಿಮಾನಿಯಾದ **ಗುರುಲಿಂಗಕ್ಕೆ** ಪರಿಣಾಮವೆಂಬ ಜಲದಿಂದ ಸ್ನಾನಮಾಡಿಸಿ, ಆನಂದವೆಂಬ ಗಂಧವ ಲೇಪಿಸಿ, ಬುದ್ಧಿಯೆಂಬ ಅಕ್ಷತೆಯನ್ನಿಟ್ಟು ಆ ಕಮಲದ ಬ, ಭ, ಮ, ಯ, ರ, ಲ ಎಂಬ ಆರು ದಳಗಳೆಂಬ ಪೂಮಾಲೆಯನ್ನರ್ಪಿಸಿ, ಸುವಾಸನೆ ಎಂಬ ಧೂಪವಬೀಸಿ, ಆ ಕಮಲದ ನೀಲವರ್ಣವೆಂಬ ಕರ್ಪೂರವಹಚ್ಚಿ, ಸ್ವಪ್ನಾವಸ್ಥೆ ಎಂಬ

ಪೀತಾಂಬರವನುಡಿಸಿ ಅಕ್ರೋಪವೆಂಬ ಆಭರಣವನಿಕ್ಕಿ, ಸುರುಚಿ ಎಂಬ ನೈವೇದ್ಯವನರ್ಪಿಸಿ, ನಿಷ್ಠೆ ಎಂಬ ತಾಂಬೂಲವನೀಡಿ ಆನಂದಿಸುವುದೇ **ಗುರುಲಿಂಗಪೂಜೆಯು.**

ಹತ್ತುದಳದ **ಮಣಿಪೂರಕ** ಚಕ್ರವೆಂಬ ಸಿಂಹಾಸನದಲ್ಲಿ ವಿರಾಜಿಸುತ್ತಿರ್ಪ ತೇಜಸ್ತತ್ತ್ವಾಭಿಮಾನಿಯಾದ **ಶಿವಲಿಂಗಕ್ಕೆ** ಪರಮಾನಂದವೆಂಬ ಜಲದಿಂದ ಸ್ನಾನಮಾಡಿಸಿ, ನಿರಹಂಕಾರವೆಂಬ ಗಂಧವಧರಿಸಿ ಅಹಂಕಾರವೆಂಬ ಅಕ್ಷತೆಯನ್ನಿಟ್ಟು ಆ ಕಮಲದ **ಡ, ಢ, ಣ, ತ, ಥ, ದ, ಧ, ನ, ಪ, ಫ** ಎಂಬ ಹತ್ತುದಳಗಳೆಂಬ ಪೂಮಾಲಿಕೆಯಂ ಅರ್ಪಿಸಿ, ಆ ಕಮಲದ ಸದ್ವಾಸನೆ ಎಂಬ ಧೂಪವ ಬೆಳಗಿ ನೀಲವರ್ಣವೆಂಬ ಕರ್ಪೂರವ ಹಚ್ಚಿ, ಸುಷುಪ್ತಾವಸ್ಥೆ ಎಂಬ ವಸ್ತ್ರವ ಹೊದ್ದಿಸಿ, ನಿರ್ಮದವೆಂಬ ಆಭರಣವ ತೊಡಿಸಿ, ಸುರೂಪವೆಂಬ ನೈವೇದ್ಯವನರ್ಪಿಸಿ ಸಾವಧಾನವೆಂಬ ತಾಂಬೂಲವನರ್ಪಿಸಿ ಆನಂದಿಸುವುದೇ **ಶಿವಲಿಂಗಪೂಜೆಯು.**

ಹನ್ನೆರಡು ದಳದ **ಅನಾಹತಚಕ್ರವೆಂಬ** ರತ್ನಖಚಿತ ಮಂಟಪದಲ್ಲಿ ಮೂರ್ತಿಗೊಂಡ ವಾಯುತತ್ತ್ವಾಭಿಮಾನಿಯಾದ **ಜಂಗಮಲಿಂಗಕ್ಕೆ** ಶಾಂತಿ ಎಂಬ ಜಲದಿಂದ ಸ್ನಾನವಮಾಡಿಸಿ, ನಿರಹಂಕಾರವೆಂಬ ಗಂಧವ ಧರಿಸಿ **ಕವರ್ಗ, ಚವರ್ಗ, ಟ, ಠ** ಎಂಬ ಹನ್ನೆರಡು ಬೀಜಾಕ್ಷರವೆಂಬ ಕುಸುಮಮಾಲೆಯ ಧರಿಸಿ, ಸದ್ವಾಸನೆ ಎಂಬ ಧೂಪವಬೀಸಿ, ಮಂಜಿಷ್ಟವರ್ಣವೆಂಬ ಕರ್ಪೂರವ ಬೆಳಗಿ, ತುರಿಯಾವಸ್ಥೆ ಎಂಬ ವಸ್ತ್ರವನಾಛ್ಛಾದಿಸಿ, ನಿರ್ಮೋಹವೆಂಬ ಆಭರಣ ತೊಡಿಸಿ, ಸುಸ್ಪರ್ಶವೆಂಬ ನೈವೇದ್ಯವನರ್ಪಿಸಿ, ಜ್ಞಾನವೆಂಬ ತಾಂಬೂಲವನಿತ್ತು, ಭೇದಭಾವವಡಗಿ ಆನಂದಿಸುವುದೇ **ಜಂಗಮಲಿಂಗ ಪೂಜೆಯು.**

ಹದಿನಾರುದಳದ **ವಿಶುದ್ಧಿಚಕ್ರವೆಂಬ** ಮಂಟಪದಲ್ಲಿ ಮಂಡಿಸಿರ್ಪ ಆಕಾಶತತ್ತ್ವಾಭಿಮಾನಿಯಾದ **ಪ್ರಸಾದಲಿಂಗಕ್ಕೆ** ಶಮವೆಂಬ ಜಲದಿಂದ ಅಭಿಷೇಕಮಾಡಿ, ದಮವೆಂಬ ಗಂಧವಧರಿಸಿ, ಶಾಂತಿಯೆಂಬ ಅಕ್ಷತೆಯನಿರಿಸಿ, ಹದಿನಾರು ಸ್ವರಗಳೆಂಬ ಪೂಮಾಲೆಯನರ್ಪಿಸಿ, ಸದ್ವಾಸನೆ ಎಂಬ ಧೂಪವ ಬೀಸಿ, ನೀಲವರ್ಣವೆಂಬ ಕರ್ಪೂರವಹಚ್ಚಿ, ತುರೀಯಾತೀತಾವಸ್ಥೆ ಎಂಬ

ನೂತನಾಂಬರವನುಡಿಸಿ, ನಿರಹಂಕಾರವೆಂಬ ಆಭರಣವತೊಡಿಸಿ, ಸುಶಬ್ದ ವೆಂಬ ನೈವೇದ್ಯವನರ್ಪಿಸಿ, ಆನಂದವೆಂಬ ತಾಂಬೂಲವನೀಡಿ, ಭೇದ ಭಾವನೆಯನಳಿದು, ಆನಂದಿಸುವುದೇ **ಪ್ರಸಾದಲಿಂಗದ ಪೂಜೆಯು.**

ಎರಡುದಳದ ಆಜ್ಞಾ ಚಕ್ರವೆಂಬ ಸಿಂಹಾಸನದಮೇಲೆ ಕುಳ್ಳಿರಿಸಿರುವ ಮಹಾಲಿಂಗಕ್ಕೆ ಆನಂದವೆಂಬ ಜಲದಿಂದ ಸ್ನಾನವಮಾಡಿಸಿ, ಶಾಂತಿ ಎಂಬ ಗಂಧವಧರಿಸಿ, ಸದ್ಭಾವವೆಂಬ ಅಕ್ಷತೆಯನಿಟ್ಟು, ಹಂ, ಸಂ ಎಂಬ ಎರಡು ದಳದ ಪುಷ್ಪಮಾಲೆಯಧರಿಸಿ, ಸದ್ವಾಸನೆ ಎಂಬ ಧೂಪವಬೀಸಿ, ಮಾಣಿಕ್ಯ ವರ್ಣವೆಂಬ ಕರ್ಪೂರವಹಚ್ಚಿ, ನಿರವಸ್ಥೆ ಎಂಬ ವಸ್ತ್ರವಧರಿಸಿ, ನಿರ್ಮಲ ವೆಂಬ ಆಭರಣವನಿಟ್ಟು, ತೃಪ್ತಿ ಎಂಬ ನೈವೇದ್ಯವನರ್ಪಿಸಿ, ಸಮರಸವೆಂಬ ತಾಂಬೂಲವನಿತ್ತು, ತಾದಾತ್ಮ್ಯಬುದ್ಧಿ ಬಲಿದು, ಆನಂದಿಸುವುದೇ **ಮಹಾ ಲಿಂಗ ಪೂಜೆಯು.**

ಗುರುವಿನಿಂದ ಮಾಡಲ್ಪಟ್ಟ **ಕ್ರಿಯಾದೀಕ್ಷೆ,** ಎಂಬ ಸಂಸ್ಕಾರದಿಂದ ಕಾರ್ಮಿಕಮಲವಳಿದು ಮಾಂಸಪಿಂಡ ನಿವೃತ್ತಿಯಾಗಿ ಮಂತ್ರಪಿಂಡತ್ವ ಪ್ರಾಪ್ತಿಯಿಂದ ಪರಿಶುದ್ಧಿಗೊಂಡ ಸ್ಥೂಲದೇಹದಲ್ಲಿ ಧರಿಸಿರುವ ಶ್ರೀಶೈಲಜ ಶಿಲೆಯಿಂದ ನಿರ್ಮಿತವಾದ, ಪಂಚಸೂತ್ರ ಘಟಿತವಾದ ಶಿವಲಿಂಗವನ್ನು ಹಸ್ತಪೀಠದಲ್ಲಿ ಜಲಗಂಧಾಕ್ಷತೆ ಧೂಪದೀಪನೈವೇದ್ಯಾದಿಗಳಿಂದ ಅರ್ಚಿಸು ತ್ತಿರುವುದೇ **ಇಷ್ಟಲಿಂಗ ಪೂಜೆಯು.**

ಗುರುವಿನಿಂದ ಮಾಡಲ್ಪಟ್ಟ **ಮನುದೀಕ್ಷೆಯಿಂದ** ಮಾಯಾಮಲ ನಿವೃತ್ತಿಯಾಗಿ ಪರಿಶುದ್ಧಿಗೊಂಡ ಸೂಕ್ಷ್ಮದೇಹದಲ್ಲಿ ಪ್ರಾಣಲಿಂಗವನ್ನು ಅನುಸಂಧಾನ ಮಾಡುವುದೇ **ಪ್ರಾಣಲಿಂಗ ಪೂಜೆಯು.**

ಕಾರಣ ಶರೀರದಲ್ಲಿ ವೇಧಾದೀಕ್ಷೆಯಿಂದ ಆಣವಮಲ ನಿವೃತ್ತಿಯಾಗಿ ವ್ಯಾಪಕವಾದ ಭಾವಲಿಂಗವನ್ನು ಧ್ಯಾನಿಸುವುದೇ **ಭಾವಲಿಂಗ ಪೂಜೆಯು.**

ಸರ್ವಸಾಕ್ಷಿಯಾದ ಪರಾತ್ಪರ ಲಿಂಗವನ್ನಾರಾಧಿಸುವುದೇ **ಅಖಂಡ ಲಿಂಗ ಪೂಜೆಯು.**

ಹೀಗೆ ದೇಹದಲ್ಲಿರುವ ದಶವಿಧ ಲಿಂಗಗಳನ್ನು ತೈತ್ತಿರೀಯದಲ್ಲಿ "ನಿಧನ ಪತಯೇ ನಮಃ" ಮೊದಲುಮಾಡಿ "ಏತತ್ಸೋಮಸ್ಯ ಸೂರ್ಯಸ್ಯ"

ಎಂಬುವವರೆಗೆ ಸ್ತುತಿಮಾಡಿರುವುದನ್ನು ಪರಿಶೀಲಿಸಿದರೆ ಮುಂದಿರುವ "ಸರ್ವ ಲಿಂಗಂ ........ ಪಾಣಿಮಂತ್ರಂ ಪವಿತ್ರಂ" ಎಂಬ ವಾಕ್ಯವು ದೇಹದಲ್ಲಿ ಧರಿಸಲ್ಪಟ್ಟಿರುವ ಇಷ್ಟಲಿಂಗವಿಷಯಕವಾದುದೆಂದೇ ನಿಶ್ಚಯವಾಗುತ್ತದೆ.

ಇದರ ಮೇಲೆ ಆ ಸರ್ವಲಿಂಗವಾಕ್ಯವನ್ನು ಸ್ಥಾವರಲಿಂಗಪರವಾಗಿ ಹೇಳುವುದಾದರೆ ವಿಧಿಗೂ, ಅರ್ಥವಾದಕ್ಕೂ ಇರುವ ಸಾಮಾನಾಧಿ ಕರಣ್ಯವೇ ಇಲ್ಲದಂತಾಗುತ್ತದೆ. ಮತ್ತು

ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ |
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ||

ಒಂದು ವಾಕ್ಯಕ್ಕೆ ತಾತ್ಪರ್ಯವನ್ನು ನಿಶ್ಚಯಮಾಡಬೇಕಾದರೆ ಉಪ ಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ, ಎಂಬ ಷಡ್ವಿಧಲಿಂಗಗಳು ಆವಶ್ಯಕಗಳಾಗಿರುತ್ತವೆ ಎಂದು ಶಾಸ್ತ್ರಕಾರರ ಅಭಿಮತವಿರುವುದರಿಂದ ಮಂತ್ರವು ಯಾವ ವಸ್ತುವಿನ ಸ್ತುತಿ ಯನ್ನು ಉಪಕ್ರಮ ಮಾಡಿರುತ್ತದೆಯೋ ಆ ವಸ್ತುವಿನಲ್ಲಿಯೇ ಉಪಸಂಹ ರಿಸಬೇಕು. ಮಧ್ಯದಲ್ಲಿ ಬರುವ ಅರ್ಥವಾದಾದಿಗಳನ್ನು ಉಪಕ್ರಮ ಉಪಸಂಹಾರಗಳಿಗೆ ವಿರೋಧವಿಲ್ಲದಂತೆ ಅನ್ವಯಿಸಬೇಕು. ಹಾಗಿಲ್ಲದೆ ಹೋದರೆ ವೇದೋಪಕ್ರಮಾಧಿಕರಣ ನ್ಯಾಯಕ್ಕೆ ವಿರೋಧವಾಗುತ್ತದೆ– ಅಂದರೆ "ನಿಷಾದಸ್ಥಪತಿಂ ಯಾಜಯೇತ್" ಎಂಬಲ್ಲಿ ನಿಷಾದಾನಾಂ ಸ್ಥಪತಿಃ ಎಂಬ ಷಷ್ಠೀ ತತ್ಪುರುಷ ಸಮಾಸವನ್ನು ಮಾಡುವುದೊ ಅಥವಾ "ನಿಷಾದಶ್ಚಾಸೌ ಸ್ಥಪತಿಶ್ಚ" ಎಂಬ ಕರ್ಮಧಾರಯ ಸಮಾಸ ವನ್ನು ಮಾಡುವುದೊ ಎಂಬ ಸಂಶಯವುಂಟಾಗಲು ಉಪಕ್ರಮಕ್ಕೆ ವಿರೋಧವಿಲ್ಲದಂತೆ ಅರ್ಥಸಿದ್ಧಿಯಾಗಬೇಕಾದರೆ ಷಷ್ಠೀ ತತ್ಪುರುಷ ಸಮಾಸಕ್ಕಿಂತಲೂ ಬಲಿಷ್ಠವಾದ ಕರ್ಮಧಾರಯ ಸಮಾಸವನ್ನೇ ಮಾಡ ಬೇಕು. ಹಾಗಿಲ್ಲದೆ ಷಷ್ಠೀ ತತ್ಪುರುಷಸಮಾಸವನ್ನು ಮಾಡುವುದಾದರೆ ಅನಧಿಕಾರಿಯಾದ ನಿಷಾದ (ಬೇಡ) ನಿಗೆ ವೇದಾಧಿಕಾರವು ಸಂಭವಿಸದೇ ಹೋಗಬೇಕಾದೀತು. ಆದ್ದರಿಂದ ಉಪಕ್ರಮಕ್ಕೆ ವಿರೋಧವುಂಟಾಗುತ್ತದೆ. ಎಂದು ನಿರ್ಣಯಿಸುವಂತೆ ತೈತ್ತಿರೀಯ ಶ್ರುತಿಯು "ಊರ್ಧ್ವಲಿಂಗಾಯ ನಮಃ" "ಹಿರಣ್ಯಲಿಂಗಾಯ ನಮಃ" ಎಂದು ಶರೀರದೊಳಗಿರುವ ಪ್ರಾಣ

ಲಿಂಗಾದಿಗಳ ಸ್ತುತಿಯನ್ನು ಉಪಕ್ರಮಿಸಿರುವುದರಿಂದ ಮುಂದಿರುವ "ಸರ್ವಲಿಂಗಂ........ಪಾಣಿಮಂತ್ರಂ ಪವಿತ್ರಂ" ಎಂಬ ವಾಕ್ಯಕ್ಕೆ ಶರೀರ ದಲ್ಲಿರುವ ಇಷ್ಟಲಿಂಗಪರವಾಗಿಯೂ ಪಾಣ್ಯಧಿಕರಣರೂಪ ಪೂಜಾಪರ ವಾಗಿಯೂ ಅರ್ಥಮಾಡಬೇಕಲ್ಲದೆ ಉಪಕ್ರಮಕ್ಕೆ ವಿರೋಧವಾಗಿ ಭೂಮಿ ಸ್ಥಾಪಿತವಾದ ಸ್ಥಾವರಲಿಂಗಪರವಾಗಿ ಅರ್ಥಮಾಡಿದರೆ ಅದು ಪ್ರಕರಣ ವಿರೋಧವಾಗುತ್ತದೆ. ಆದುದರಿಂದ "ಪಾಣಿಮಂತ್ರಂ" ಎಂಬ ವಾಕ್ಯ ವನ್ನು ತೃತೀಯಾಸಮಾಸವನ್ನಾಶ್ರಯಿಸದೆ ಸಪ್ತಮೀತತ್ಪುರುಷಸಮಾಸ ವನ್ನಾಶ್ರಯಿಸಿ ಇಷ್ಟಲಿಂಗಪರವಾದುದನ್ನಾಗಿಯೇ ನಿರ್ಧರಿಸತಕ್ಕದು.

ಶಂಕೆ :—ಆದರೆ "ನಿಧನಪತಯೇ ನಮಃ" ಎಂಬುವುದರಿಂದ "ಪರಮಲಿಂಗಾಯ ನಮಃ" ಎಂಬುವವರೆಗೂ ಇರುವ ಶ್ರುತಿವಾಕ್ಯ ಗಳು "ಏತತ್ಸೋಮಸ್ಯ ಸೂರ್ಯಸ್ಯ" ಎಂದು ಸೂರ್ಯಚಂದ್ರ ವಾಚಕ ಪದಗಳು ಮುಂದೆ ಬಂದಿರುವುದರಿಂದಲೂ ಮತ್ತು ಈ ಸೋಮ ಸೂರ್ಯ ಪದಗಳ ಹಿಂದೆ ಏತಚ್ಛಬ್ದವಿರುವುದರಿಂದಲೂ ಸೂರ್ಯಚಂದ್ರರ ಸ್ತುತಿಪರ ಗಳೆಂದು ಏಕೆ ಹೇಳಬಾರದು.

ಸಮಾಧಾನ :—ಈ ಮಂತ್ರದಲ್ಲಿ "ಊರ್ಧ್ವಲಿಂಗಾಯ ನಮಃ" ಎಂದು ಲಿಂಗಪರವಾಗಿ ಉಪಕ್ರಮಿಸಿ "ಸರ್ವಲಿಂಗಂ ಸ್ಥಾಪಯತಿ" ಎಂದು ಲಿಂಗಪರವಾಗಿಯೇ ಉಪಸಂಹಾರ ಮಾಡಿರುವುದರಿಂದ ಮಧ್ಯದಲ್ಲಿ ಬರುವ ಸೋಮ, ಸೂರ್ಯ ಪದಗಳಿಗೂ ಲಿಂಗಪರವಾಗಿಯೇ ಅರ್ಥಮಾಡ ಬೇಕು. ಹಾಗಿಲ್ಲದೆ ಹೋದರೆ ಉಪಕ್ರಮ ಉಪಸಂಹಾರಗಳಿಗೆ ವಿರೋಧ ವುಂಟಾಗುವುದು. ಆದುದರಿಂದ "ಉಮಯಾ ಸಹಿತಸ್ಸೋಮಃ" ಎಂಬ ವ್ಯುತ್ಪತ್ತಿಯಿಂದ ಸೋಮಶಬ್ದವು ಶಿವಲಿಂಗಪರವೆಂದೂ, "ಸೂರ್ಯಸ್ಯ" ಎಂಬಲ್ಲಿ ಸೂರ್ಯಮಂಡಲಾಂತರ್ವರ್ತಿಯಾದ ಶಿವಲಿಂಗಪರವೆಂದೂ ಅರ್ಥಮಾಡುವುದೇ ಉತ್ತಮ ಪಕ್ಷವೆಂದು ತಿಳಿಯಬೇಕು. ಇದಲ್ಲದೆ ಸೋಮಪದವು.

"ಸೋಮ ಏಕೇಭ್ಯಃ ಪವತೇ ಘೃತಮೇಕಮುಪಾಸತೇ"

ಎಂಬ ಮಂತ್ರದಲ್ಲಿರುವ ಸೋಮಪದಕ್ಕೆ ಶಿವನೆಂಬ ಅರ್ಥವೇ ಸಿದ್ಧ ವಾದಂತೆ ಇಲ್ಲಿರುವ ಸೋಮಪದಕ್ಕೂ ಶಿವನೆಂದೇ ಸಿದ್ಧವಾಗುತ್ತದೆ. ಮತ್ತು

"ಸೂರ್ಯಸ್ಯ" ಎಂಬುವ ಪದವು ಸೋಮಪದಕ್ಕೆ ವಿಶೇಷ್ಯವಾಗಿರುವುದರಿಂದ ಶಿವನು ಸೂರ್ಯಮಂಡಲಾಂತರ್ವರ್ತಿಯಾಗಿರುವನೆಂದು ಸ್ಪಷ್ಟವಾಗುತ್ತದೆ.

ಯ ಆದಿತ್ಯೇ ತಿಷ್ಠನ್ನಾದಿತ್ಯಮಂತರೋ ಯಮಯತಿ
ಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ ||

(ಅಂತರ್ಯಾಮಿ ಬ್ರಾಹ್ಮಣ)

ಯಾವನು ಸೂರ್ಯಮಂಡಲದಲ್ಲಿದ್ದು ಆ ಸೂರ್ಯನನ್ನು ಬೆಳಗುತ್ತಿರುವುನೋ, ಯಾವನನ್ನು ಆ ಸೂರ್ಯನು ತಿಳಿಯಲಾರನೋ, ಯಾವನಿಗೆ ಸೂರ್ಯನು ಶರೀರವಾಗಿರುತ್ತಾನೆಯೋ ಎಂದು ಹೇಳಿರುವುದರಿಂದ ಲಿಂಗವು ಸೂರ್ಯಮಂಡಲದ ಮಧ್ಯದಲ್ಲಿರುವುದೆಂದು ಸ್ಪಷ್ಟವಾಗುತ್ತದೆ. ಮತ್ತು

ಔದುಂಬರೋ ಯೂಪೋ ಭವತ್ಯೂರ್ಗ್ವಾ
ಉದುಂಬರ ಊರ್ಕ್ಪಶವ ಊರ್ಜೈವಾಸ್ಮಾ
ಊರ್ಜಂ ಪಶೂನಾಪ್ನೋತ್ಯೂರ್ಜೋಽವರುಧ್ಯಾ ||

ಅನ್ವಯಾರ್ಥ :— ಔದುಂಬರಃ-ಅತ್ತಿಮರದಿಂದ ಮಾಡಿರುವ, ಯೂಪಃ-ಯಜ್ಞಕಂಭವು-ಯಾವ ಕಾರಣದಿಂದ-ಊರ್ಕ್-ಘಟ್ಟಿಯಾದುದು-ಭವತಿ-ಆಗಿದೆಯೋ ತತ್-ಆ ಕಾರಣದಿಂದ-ಪಶವಃ-ಯಜ್ಞದ ಕಂಭಕ್ಕೆ ಕಟ್ಟಿರುವ ಪಶುಗಳು ಸಹ-ಉದುಂಬರ ಊರ್ಕ್-ಅತ್ತಿಯ ಮರದೋಪಾದಿಯಲ್ಲಿ ಬಲವುಳ್ಳವುಗಳಾಗಿರುತ್ತವೆ. ಊರ್ಜೋಽವರುಧ್ಯಾ-ಕ್ಷೀರಾದಿಗಳಿಂದ ಬಲವುಂಟಾಗುವುದಕ್ಕಾಗಿ - ಊರ್ಜೈವಾಸ್ಮಾ - ಅಂತಸ್ಸಾರವುಳ್ಳ, ಉದುಂಬರ ವೃಕ್ಷದ ಯೂಪಸ್ತಂಭದೊಡನೆ-ಊರ್ಜಂ-ಸಾರವುಳ್ಳ, ಪಶೂನ್-ಯಜ್ಞದ ಪಶುಗಳನ್ನು ಪ್ರಾಪ್ನೋತಿ-ಹೊಂದುವುದು.

ಅಂತಸ್ಸಾರವುಳ್ಳ ಪದಾರ್ಥವನ್ನು ಅಂತಸ್ಸಾರವುಳ್ಳ ಮತ್ತೊಂದು ಪದಾರ್ಥದೊಡನೆ ಸೇರಿಸುವುದರಿಂದ ಆ ಪದಾರ್ಥಕ್ಕೆ ಬಲವುಂಟಾಗುವುದರಿಂದ ಘಟ್ಟಿಯಾದ ಅತ್ತಿಮರದಿಂದ ಮಾಡಿದ ಯಜ್ಞದ ಕಂಭಕ್ಕೆ ಬಲಿಷ್ಠಗಳಾದ ಪಶುಗಳನ್ನೇ ಕಟ್ಟಬೇಕೆಂದು ಈ ಮಂತ್ರದ ಮುಖ್ಯಾರ್ಥವಾಗಿದೆ. ಈ ಮಂತ್ರವು ಅತ್ತಿಯಮರದ ಯೂಪಸ್ತಂಭವನ್ನು ಹೊಗಳಿರುವುದರಿಂದ ಅರ್ಥವಾದವೆನಿಸುತ್ತದೆ. ಇದರಲ್ಲಿ "ಭವತಿ" ಎಂದು ಲಡಂತ

ವಾದ ಪ್ರಯೋಗವಿದ್ದರೂ ಲಿಂಗ್ ಲೋಟ್ ತವ್ಯಪ್ರತ್ಯಯಾದಿಗಳಿಗೆ ಹೇಳು ವಂತೆ ವಿಧ್ಯರ್ಥವನ್ನೇ ಅಂಗೀಕಾರ ಮಾಡಬೇಕು. ಹಾಗಿಲ್ಲದಿದ್ದರೆ ಉದುಂಬರ ಯೂಪಸ್ತಂಭದ ಪ್ರಶಂಸೆಯೇ ಸಂಭವಿಸುವುದಿಲ್ಲ—"ಸ್ವಾರ್ಥವಲ್ಲಿ ಪ್ರಾಮಾಣ್ಯವಿಲ್ಲದ ಅರ್ಥವಾದಕ್ಕೆ ಪ್ರಾಮಾಣ್ಯವುಂಟಾಗಬೇಕಾದರೆ ಅದು ವಿಧಿವಿಷಯಕವಾದ ವಸ್ತುವಿನ ಪ್ರಾಶಸ್ತ್ಯವನ್ನು ಪ್ರಶಂಸಿಸುವ ದ್ವಾರಾ ವಿಧಿ ವಾಕ್ಯದೊಡನೆ ಏಕವಾಕ್ಯತೆಯನ್ನು ಪಡೆಯಬೇಕು" ಎಂದು ಮೀಮಾಂಸಾ ಶಾಸ್ತ್ರದಲ್ಲಿ ವ್ಯವಸ್ಥೆಗೊಳಿಸಿರುವಂತೆ "**ಸರ್ವಲಿಂಗಂ ಸ್ಥಾಪಯತಿ**" ಎಂಬಲ್ಲಿ ಲಡಂತವಾದ ಕ್ರಿಯಾಪದವಿದ್ದರೂ ಈ ವಾಕ್ಯದ ಮೊದಲು "**ಊರ್ಧ್ವಲಿಂಗಾಯ ನಮಃ**" ಮುಂತಾದ ವಾಕ್ಯಗಳು ದೇಹದೊಳಗೆ ಆಧಾರಾದಿ ಸ್ಥಾನಗಳಲ್ಲಿರುವ ದಶವಿಧಲಿಂಗಗಳನ್ನು ಪ್ರಶಂಸೆಮಾಡಿರು ವುದರಿಂದ ಅಂಥ ಪ್ರಶಂಸಾ ರೂಪಗಳಾದ ಅರ್ಥವಾದಗಳೆಲ್ಲವೂ ವ್ಯರ್ಥ ವಾಗಬೇಕಾಗುವುದರಿಂದ ಅಂಥ ಅರ್ಥವಾದಗಳನ್ನು ಸಾರ್ಥಕಗೊಳಿಸಲು "**ಸ್ಥಾಪಯತಿ**" ಎಂಬ ಕ್ರಿಯಾಪದಕ್ಕೆ ವರ್ತಮಾನಾರ್ಥವನ್ನು ಬಿಟ್ಟು "**ಸ್ಥಾಪಯೇತ್**" (ದೇಹದಲ್ಲಿ ಲಿಂಗವನ್ನು ಧರಿಸಬೇಕು) ಎಂಬ ವಿಧ್ಯರ್ಥವನ್ನು ಕಲ್ಪಿಸುವುದು ಉತ್ತಮವಾದುದರಿಂದ "**ಸರ್ವಲಿಂಗಂ ಸ್ಥಾಪಯತಿ**" ಎಂಬ ವಾಕ್ಯವು ಇಷ್ಟಲಿಂಗಧಾರಣ ವಿಧಾಯಕವೆಂದು ನಿರ್ಧರಿಸಬೇಕು.

ಶಂಕೆ :—ಆದರೆ ವೀರಶೈವ ಸಿದ್ಧಾಂತ ಸ್ಥಾಪಕರಾದ ಶ್ರೀ ರೇಣುಕ ಭಗವತ್ಪಾದಾಚಾರ್ಯರು ಈ ಲಿಂಗಧಾರಣ ವಿಷಯದಲ್ಲಿ—

**ಲಿಂಗಧಾರಣಮಾಖ್ಯಾತಂ ದ್ವಿಧಾ ಸರ್ವಾರ್ಥಸಾಧಕೈಃ ।**
**ಬಾಹ್ಯಮಾಭ್ಯಂತರಂ ಚೈವ ಮುನಿಭಿರ್ಮೋಕ್ಷಕಾಂಕ್ಷಿಭಿಃ ॥**

(ಸಿ. ಶಿ. ಪ. ೬)

ಲಿಂಗಧಾರಣವು ಬಾಹ್ಯಲಿಂಗಧಾರಣವೆಂದೂ, ಅಂತರ್ಲಿಂಗಧಾರಣ ವೆಂದೂ ಎರಡು ವಿಧವು. ಈ ಎರಡು ವಿಧಗಳಾದ ಲಿಂಗಗಳನ್ನು ಮೋಕ್ಷವೆಂಬ ಮಹಾಪುರುಷಾರ್ಥವನ್ನು ಬಯಸುವವರೇ ಧರಿಸಬೇಕು ಎಂದು ಹೇಳಿರುವದರಿಂದ ಮುಕ್ತಿಯೆಂಬ ಫಲವನ್ನು ಅಪೇಕ್ಷಿಸುವವರೇ ಲಿಂಗವನ್ನು ಧರಿಸಬೇಕಲ್ಲದೆ ಇತರರು ಧರಿಸಕೂಡದೆಂದು ಸಿದ್ಧವಾಗು

ವುದರಿಂದ ಲಿಂಗಧಾರಣವಿಧಾನವು ಕಾಮ್ಯವಿಧಿಯಲ್ಲಿ ಸೇರುವುದಲ್ಲದೆ ನಿತ್ಯ ವಿಧಿಯಲ್ಲಿ ಸೇರುವುದಿಲ್ಲ.

**ಸಮಾಧಾನ :—**

ನಿತ್ಯೇ ಸಂಧ್ಯಾಮು ಪಾಸತೇ ಯೇ ತು ಸತತಂ ಶಂಸಿತವ್ರತಾಃ ।
ವಿಧೂತಪಾಪಾಸ್ತೇ ಯಾಂತಿ ಬ್ರಹ್ಮಲೋಕಮನಾಮಯಮ್ ॥

(ಧರ್ಮಶಾಸ್ತ್ರ)

ಯಾರು ಪ್ರತಿ ದಿವಸವೂ ಸಂಧ್ಯಾವಂದನವನ್ನು ಆಚರಿಸುವರೋ ಅವರು ಪಾಪಗಳಿಂದ ಬಿಡುಗಡೆಯಾಗಿ ಬ್ರಹ್ಮಲೋಕವನ್ನು ಪಡೆಯುವರು.

ಇಲ್ಲಿ ಸಂಧ್ಯಾವಂದನ ಕರ್ಮವು ಬ್ರಹ್ಮಲೋಕವೆಂಬ ಫಲವನ್ನುಂಟು ಮಾಡುತ್ತದೆಂದು ಫಲಶ್ರವಣಮಾಡಿರುವುದನ್ನು ನೋಡಿದರೆ ಬ್ರಹ್ಮಲೋಕ ವನ್ನು ಅಪೇಕ್ಷಿಸಿಸುವವರು ಮಾತ್ರ ಸಂಧ್ಯಾವಂದನವನ್ನು ಮಾಡಬೇಕಲ್ಲದೆ ಇತರರು ಮಾಡಬೇಕಾಗಿಲ್ಲವೆಂಬ ಅರ್ಥವುಂಟಾಗುವುದರಿಂದ ಸಂಧ್ಯಾವಂದ ನೆಯೂ ಸಹ ಕಾಮ್ಯವಿಧಿಯಾಗುವುದಲ್ಲದೆ ನಿತ್ಯವಿಧಿಯಾಗಲಾರದೆಂಬ ಶಂಕೆಯುತ್ಪನ್ನವಾಗಿ

ಅನುಪಾಸ್ಯ ತ್ರಿಕಾಲೇಷು ಸಂಧ್ಯಾಮನ್ನಾದಿಭುಗ್ಭವೇತ್ ।
ಶ್ವಾನಯೋನಿ ಶತಂ ಗತ್ವಾ ಚಂಡಾಲಃ ಕೋಟಿ ಜನ್ಮಸು ॥

ಯಾವನು ಪ್ರಾತಃ ಮಧ್ಯಾಹ್ನ ಸಾಯಂಕಾಲ ಎಂಬ ಮೂರು ಸಮಯಗಳಲ್ಲಿಯೂ ಸಂಧ್ಯಾವಂದನವನ್ನು ಮಾಡದೆ ಭೋಜನ ಮಾಡು ವನೊ ಅವನು ಅನೇಕಸಾರಿ ನಾಯಿಯ ಜನ್ಮವನ್ನೆತ್ತುವುದಲ್ಲದೆ ಚಂಡಾಲ ನಾಗಿ ಹುಟ್ಟುವನು ಎಂದು ಧರ್ಮಶಾಸ್ತ್ರವು ಸಂಧ್ಯಾವಂದನ ಮಾಡದ ವನಿಗೆ ಪ್ರತ್ಯವಾಯ (ದೋಷ) ವನ್ನು ಹೇಳಿರುವುದರಿಂದ ಸಂಧ್ಯಾವಂದನೆಗೆ ನಿತ್ಯತ್ವವು ಸಿದ್ಧಿಸುವುದಲ್ಲದೆ ಅನಿತ್ಯತ್ವವೆಂಬ ದೋಷವು ಪರಿಹಾರವಾಗುವು ದೆಂದು ಸಮಾಧಾನ ಹೇಳುವುದಾದರೆ ಇಲ್ಲಿಯೂ—

ಭಕ್ತಸ್ಯಾಬಿಭ್ರತೋ ಲಿಂಗಂ ಯಾವತ್ಪ್ರಾಣವಿಧಾರಣಂ ।
ಶ್ವಮಾಂಸಭಕ್ಷಣಂ ತಾವದನ್ನೇನ ರಚಿತಂ ಭವೇತ್ ॥

(ವಾತುಲಾಗಮ)

ದೇಹದಲ್ಲಿ ಇಷ್ಟಲಿಂಗವನ್ನು ಧರಿಸದವನು ಭವಿಯೆನಿಸುವನು. ಪ್ರಾಣವು ಹೋಗುತ್ತಿದ್ದರೂ ಅಂಥ ಲಿಂಗವಿಲ್ಲದವನು ಮಾಡಿದ ಅನ್ನವನ್ನು ತಿನ್ನಬಾರದು. ಅಲಿಂಗಿಯ ಪಾಕವು ನಾಯಿಯ ಮಾಂಸಕ್ಕೆ ಸಮಾನವಾದುದು ಎಂದು ವೀರಶೈವಸಿದ್ಧಾಂತದಲ್ಲಿಯೂ ನಿಷೇಧವಾಕ್ಯಗಳಿರುವುದರಿಂದ ಲಿಂಗಧಾರಣವು ಸಂಧ್ಯಾವಂದನೆಯಂತೆ ನಿತ್ಯವಿಧಿಯೆಂದೇ ಸಿದ್ಧಾಂತವಾಗುತ್ತದೆ. ಆದುದರಿಂದ "ಸರ್ವಲಿಂಗಂ ಸ್ಥಾಪಯತಿ" ಎಂಬ ವಾಕ್ಯವು ಇಷ್ಟಲಿಂಗಧಾರಣವನ್ನು "ಪಾಣಿಮಂತ್ರಂ" ಎಂಬ ವಾಕ್ಯವು ಹಸ್ತದಲ್ಲಿಟ್ಟು ಪೂಜಿಸುವುದನ್ನು "ಪವಿತ್ರಂ" ಎಂಬ ಪದವು ಶುಚ್ಯಶುಚಿಸಾಧಾರಣ ಕಾಲಗಳಲ್ಲಿಯೂ ಧಾರಣೆ ಪೂಜೆಗಳನ್ನು ವಿಧಿಸುತ್ತದೆ.

ಶಂಕೆ :—

ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರೇದಿತಿ ।
ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ॥
ವೇದಾರ್ಥೋಽಯಂ ಸ್ವಯಂ ಜ್ಞಾತಸ್ತತ್ರಾಜ್ಞಾನಂ ಭವೇದಪಿ ।
ಋಷಿಭಿರ್ನಿಶ್ಚಿತೇ ತಸ್ಮಿನ್ ಕಾ ಶಂಕಾ ಸ್ಯಾತ್ ಮಹಾತ್ಮನಾಮ್ ॥

(ಮಹಾಭಾರತ)

ವೇದಗಳಿಗೆ ಮನಸ್ಸು ಬಂದಹಾಗೆ ಅರ್ಥ ಮಾಡುವ ಅಪಂಡಿತನನ್ನು ನೋಡಿ ಶ್ರುತಿ ದೇವಿಯು ತನ್ನನ್ನು ಅಡ್ಡಹಾದಿಗೆ ಎಳೆದು ವಂಚಿಸುವನೆಂದು ಭಯಪಡುವಳು. ಪ್ರತಿಯೊಬ್ಬ ಮಾನವನನ್ನು ಅಜ್ಞಾನವು ಆವರಿಸಿರುತ್ತದೆ. ಯಾವನೂ ಸರ್ವಜ್ಞನಲ್ಲ. ಆದುದರಿಂದ ಹಿಂದೆ ಮಹರ್ಷಿಗಳಿಂದ ಪ್ರಣೀತವಾದ ಇತಿಹಾಸ ಪುರಾಣಗಳನ್ನು ನೋಡಿ ವೇದಗಳ ಅರ್ಥವನ್ನು ನಿರ್ಣಯಿಸಬೇಕಲ್ಲದೆ ಕೇವಲ ಪಾಂಡಿತ್ಯವೇ ವೇದಾರ್ಥನಿಶ್ಚಯಕ್ಕೆ ಸಾಧನವಲ್ಲವೆಂದು ಮಹಾಭಾರತದಲ್ಲಿ ವೇದಾರ್ಥನಿಶ್ಚಯದ ಉಪಾಯವನ್ನು ತೋರಿಸಿರುವುದರಿಂದ "ಸರ್ವಲಿಂಗಂ" ವಾಕ್ಯಕ್ಕೆ ಇದುವರೆಗೂ ಪೂರ್ವಮೀಮಾಂಸಾದಿ ದೃಷ್ಟಾಂತಗಳಿಂದಲೂ, ಯುಕ್ತಿಯಿಂದಲೂ, ಸ್ಥಾವರಲಿಂಗಪರವಾದ ಅರ್ಥವನ್ನು ನಿರಾಕರಿಸಿ, ದೇಹದಲ್ಲಿ ಧರಿಸುವ ಇಷ್ಟಲಿಂಗಪರವಾಗಿ ಅರ್ಥಮಾಡಿದರೂ ಅದಕ್ಕೆ ಹಿಂದಿನ ಇತಿಹಾಸ ಪುರಾಣ ಕರ್ತರಾದ ಮಹರ್ಷಿಗಳು ಒಪ್ಪಿಗೆಯನ್ನು ಕೊಟ್ಟಿರುವರೇ ?

ಸಮಾಧಾನ :—

ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ ।
ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ ॥ ೯೬ ॥

ಎಂದು ಉಪಕ್ರಮಿಸಿ.

ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ ॥ ೧೦೩ ॥

ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ ।
ಪಾಣೌ ಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ ಗುರುಶ್ಶಿವಂ ॥ ೧೦೪ ॥

ಯೇನ ಸ್ತುವತಿ ತನ್ಮಂತ್ರಂ ಪಾಣಿಮಂತ್ರಂ ವದಂತಿ ಹಿ ।
ಪವಿತ್ರತ್ವಾನ್ಮಹೇಶಸ್ಯ ಶಿವಸ್ಯ ಪ್ರತಿಪಾದನಾತ್ ॥ ೧೦೫ ॥

ಪವಿತ್ರಕರಣಾತ್ ಪುಂಸಾಂ ಪವಿತ್ರಮಿತಿ ಕಥ್ಯತೇ ।
ಅತಃ ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ ॥ ೧೦೬ ॥

ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರನ್ ಉನ್ಮಿಷನ್ನಿಮಿಷನ್ನಪಿ ।
ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ ॥ ೧೦೭ ॥

ಲಿಂಗಧಾರೀ ಸದಾಶುದ್ಧಃ ನಿಜಲಿಂಗಂ ಮನೋಹರಂ ।
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥ ೧೦೮ ॥

ನಿತ್ಯಾನಿ ಕರ್ಮವೃಂದಾನಿ ತಥಾ ನೈಮಿತ್ತಿಕಾನಿ ಚ ।
ಶಿವಾರ್ಪಣಧಿಯಾ ಕುರ್ಯಾತ್ ಸಮ್ಯಕ್ಜ್ಞಾನಾಭಿವೃದ್ಧಯೇ
॥ ೧೦೯ ॥

(ಲಿಂಗಪುರಾಣ-ಉತ್ತರಭಾಗ ೨೧ನೇ ಅಧ್ಯಾಯ)

ಋಗಾದಿ ನಾಲ್ಕು ವೇದಗಳಲ್ಲಿಯೂ ಮನ್ವಾದಿ ಸ್ಮೃತಿಗಳಲ್ಲಿಯೂ, ಪುರಾಣಗಳಲ್ಲಿಯೂ ಬ್ರಾಹ್ಮಣನು ದೇಹದಲ್ಲಿ ಇಷ್ಟಲಿಂಗವನ್ನು ಧರಿಸಬೇಕು ಎಂದು ಪ್ರಾರಂಭಮಾಡಿ ಯಜುರ್ವೇದದಲ್ಲಿ "ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂದು ಹೇಳಿರುವುದರಿಂದ ಗುರುವು ಶಿಷ್ಯನ

ಶಕ್ತಿಪಾತವನ್ನು ಪರೀಕ್ಷಿಸಿ, ಶಿವದೀಕ್ಷೆಯನ್ನು ಮಾಡುವ ಸಮಯದಲ್ಲಿ ದೀಕ್ಷಾಂಗವಾದ ಕೃಚ್ಛ್ರಾದಿಕರ್ಮಗಳನ್ನು ನೆರವೇರಿಸಿ ಗಣಪತಿಪೂಜೆ, ಪುಣ್ಯಾಹ, ನಾಂದಿ, ಅಂಕುರಾರ್ರೋಪಣ, ಮಂಟಪದೇವತಾಪ್ರತಿಷ್ಠಾದಿ ಪೂರ್ವಕರ್ಮಗಳನ್ನುಮಾಡಿ ಆಯಾಯ ಶಾಖಾನುಗುಣವಾಗಿ ಋತ್ವಿಕ್ಕು ಗಳ ಮೂಲಕ ಪಂಚಕಲಶಗಳನ್ನು ಸ್ಥಾಪಿಸಿ, ಪಂಚಸೂತ್ರಘಟಿತವಾದ ಶಿವ ಲಿಂಗಕ್ಕೆ ವೇದಮಂತ್ರದಿಂದ ಪ್ರಕ್ಷಾಳನಂಗೈದು, ಜಲ, ಧಾನ್ಯ, ಕ್ಷೀರಾಧಿ ವಾಸಗಳನ್ನು ಮಾಡಿಸಿ ಆಚಾರ್ಯನು ಕರ್ಷಣಾದಿ ದೋಷಗಳನ್ನು ಪರಿ ಹರಿಸಿ ೩೮ ಕಲೆಗಳನ್ನು ಆವಾಹಿಸಿ, ಕ್ಷೀರಾದ್ಯಭಿಷೇಕಂಗೈದು ದೀಕ್ಷಾಂಗ ವಾದ ಹೋಮಕುಂಡವನ್ನು ವಿಧ್ಯುಕ್ತವಾಗಿ ಸ್ಥಾಪಿಸಿ ಆಹವನೀಯಾದಿ ವೈದಿ ಕಾಗ್ನಿಗಳನ್ನು ಪ್ರತಿಷ್ಠಿಸಿ ಸಕಲದೇವತೆಗಳಿಗೆ ಆಜ್ಯಾದಿ ಹವಿಸ್ಸನ್ನು ಸಮ ರ್ಪಣ ಮಾಡುತ್ತಾ ಶಿಷ್ಯನಿಗೆ ಕ್ರಿಯಾ, ಮನು, ವೇಧಾ ಎಂಬ ತ್ರಿವಿಧ ಸಂಸ್ಕಾರಗಳನ್ನು ಮಾಡಿ ಹೃತ್ಕಮಲದಲ್ಲಿರುವ ಚಿತ್ಕಲೆಯನ್ನು ಅಂಕುಶಾದಿ ಮುದ್ರೆಗಳಿಂದ ಲಿಂಗಮೂರ್ತಿಯಲ್ಲಿ ಆವಾಹಿಸಿ ಷೋಡಶೋಪಚಾರವನ್ನು ಮಾಡಿದಬಳಿಕ ಶ್ರೀ ಗುರುವು ಆ ಮಂತ್ರಮಯವಾದ ಶಿವಲಿಂಗವನ್ನು **"ನಿಧನಪತಯೇ ನಮಃ"** ಎಂದಾರಂಭಿಸಿ **"ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ"** ಎಂಬ ಮಂತ್ರವನ್ನುಚ್ಚರಿಸುತ್ತ ಶಿಷ್ಯನ ಹಸ್ತ ಕಮಲದಲ್ಲಿಟ್ಟು, ಆ ಲಿಂಗದ ಮಹಿಮೆಯನ್ನು ಬೋಧಿಸಿದ ನಂತರ **"ಯಜ್ಞೋಪವೀತಂ"** ಎಂಬ ಮಂತ್ರವನ್ನುಚ್ಚರಿಸುತ್ತ ಶಿರಸ್ಸು, ಕಂಠ, ವಕ್ಷಸ್ಥಲಾದಿ ಉತ್ತಮಾಂಗಗಳೊಳಗೆ ಯಾವುದಾದರೊಂದಂಗದಲ್ಲಿ ಧರಿಸು ತ್ತಾನೆ. ಆಮೇಲೆ. ಎಲೈ ಶಿಷ್ಯನೇ! ಈ ಲಿಂಗವು ಅಂಗಶಬ್ದವಾಚ್ಯವಾದ ಜೀವಾತ್ಮನನ್ನಾವರಿಸಿದ ಆಣವಾದಿ ಮಲಗಳನ್ನು ಪರಿಹರಿಸುವುದು, ಸರ್ವ ಮಂಗಲಾಸ್ಪದನಾದ ಪರಮಾತ್ಮನನ್ನು ಅಭಿಮುಖಗೊಳಿಸುವುದು, ಪವಿತ್ರ ವಾದ ಶಿವಲಿಂಗವನ್ನು ಸರ್ವಕಾಲಗಳಲ್ಲಿಯೂ ಎಡೆಬಿಡದೆ ಧರಿಸತಕ್ಕುದ್ದು. ಈ ಲಿಂಗಧಾರಣೆಯ ವಿಷಯದಲ್ಲಿ ಅಶುಚಿ ಭಾವನೆಯನ್ನು ಮಾಡಬಾರದು. ನಡೆಯುವಾಗಲೂ, ನಿಂತಿರುವಾಗಲೂ, ಮಲಗಿರುವಾಗಲೂ, ಎಚ್ಚರವಿರು ವಾಗಲೂ, ಕಣ್ಣುಮುಚ್ಚಿರುವಾಗಲೂ, ತೆರೆದಿರುವಾಗಲೂ, ಶುಚಿಕಾಲದಲ್ಲೂ, ಅಶುಚಿಕಾಲದಲ್ಲೂ ಇಷ್ಟಲಿಂಗವನ್ನು ಧರಿಸಿರಬೇಕು. ಲಿಂಗಧಾರಿಯು

ಯಾವಾಗಲೂ ಪರಿಶುದ್ಧನಾಗಿರುವನು. ಲಿಂಗಪೂಜೆಯು ಸಂಧ್ಯಾವಂದನಾದಿ ಕರ್ಮಗಳಂತೆ ನಿತ್ಯಕರ್ಮವೆನಿಸಿದುದರಿಂದ ಪ್ರತಿದಿವಸವೂ ಆ ಲಿಂಗವನ್ನು ತನ್ನ ಹಸ್ತಪೀಠದಲ್ಲಿರಿಸಿ ಗಂಧಾದ್ಯುಪಚಾರಗಳಿಂದ ಅರ್ಚಿಸುತ್ತಿರಬೇಕು. ಮತ್ತು ಯಾವ ನಿತ್ಯ ನೈಮಿತ್ತಿಕವಾದ ಕರ್ಮಗಳನ್ನು ಮಾಡಬೇಕಾಗಿದ್ದರೂ ಶಿವಾರ್ಪಣಬುದ್ಧಿಯಿಂದ ಮಾಡಬೇಕಲ್ಲದೆ ಕಾಮ್ಯಾರ್ಥವಾಗಿ ಮಾಡಬಾರದು.

ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ ವಿನ್ಯಸ್ಯ ತಲ್ಲೀನಮನಃಪ್ರಚಾರಃ ।
ಬಾಹ್ಯಕ್ರಿಯಾಸಂಕುಲನಿಸ್ಪೃಹಾತ್ಮಾ ಸಂಪೂಜಯತ್ಯಂಗ ಸ ವೀರಶೈವಃ ॥
ತದೇವ ಹಸ್ತಾಂಬುಜಪೀಠಮಧ್ಯೇ ನಿಧಾಯ ಲಿಂಗಂ ಪರಮಾತ್ಮಚಿಹ್ನಂ ।
ಪ್ರಪೂಜಯೇದೈಕ್ಯಧಿಯೋಪಚಾರೈರ್ನರಸ್ತು ಬಾಹ್ಯಾಂತರಭೇದಭಿನ್ನೈಃ॥
ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ವರಂ ।
ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರಂತರಮ್ ॥

(ಶಂಕರ ಸಂಹಿತೆ)

ದೇಹದಲ್ಲಿ ಧರಿಸಲ್ಪಟ್ಟ ಇಷ್ಟಲಿಂಗವನ್ನು ಪ್ರಾತರಾದಿ ಸಂಧ್ಯಾಕಾಲಗಳಲ್ಲಿ ಹಸ್ತವೆಂಬ ಪೀಠದಲ್ಲಿರಿಸಿ, ಮನಸ್ಸನ್ನು ಲಿಂಗದಲ್ಲಿಯೇ ನೆಲೆಗೊಳಿಸಿ, ಬೇರೆ ಬೇರೆ ಕ್ರಿಯಾಕಲಾಪಗಳನ್ನೆಲ್ಲ ಬಿಟ್ಟು ಬಾಹ್ಯಲಿಂಗ, ಅಂತರ್ಲಿಂಗಗಳೆರಡನ್ನು ಏಕೀಭವಿಸಿ ಭೇದಭಾವನೆಯನಳಿದು, ಗಂಧಾಕ್ಷತಧೂಪದೀಪಾದಿಗಳಿಂದ ಅರ್ಚಿಸುತ್ತಿರುವವನೇ ವೀರಶೈವನು. ಮುಮುಕ್ಷುಗಳಾದ ವೀರಶೈವರಿಗೆ ಶಿವಲಿಂಗವನ್ನು ಹೊರಗಣ ಪೀಠಗಳಮೇಲಿಟ್ಟು ಪೂಜಿಸುವುದಕ್ಕಿಂತ ಹಸ್ತಕಮಲದಲ್ಲಿಟ್ಟು ಪೂಜಿಸುವುದೇ ಉತ್ತಮವು.

ನ ತಸ್ಯ ಸೂತಕಂ ವತ್ಸ ಪ್ರಾಣಲಿಂಗಾಂಗಸಂಗಿನಃ ।
ಜನನೋತ್ಥಂ ಮೃತೋತ್ಥಂ ವಾ ವಿದ್ಯತೇ ಪರಮಾರ್ಥತಃ ॥
ಜಾತಕೇ ಮೃತಕೇ ವಾಪಿ ನ ತ್ಯಾಜ್ಯಂ ಶಿವಪೂಜನಮ್ ॥

(ಶಂಕರ ಸಂಹಿತೆ)

ಪ್ರಾಣದಂತೆ ಇರುವ ಇಷ್ಟಲಿಂಗವನ್ನು ದೇಹದಲ್ಲಿ ಧರಿಸಿದವನಿಗೆ ಜನನಸೂತಕವಾಗಲಿ, ಮರಣಸೂತಕವಾಗಲಿ, ಆವ ಸೂತಕವೂ ಪರಮಾರ್ಥ

ವಾಗಿಲ್ಲವು. ಆದುದರಿಂದ ಜನನಾದಿ ಸೂತಕಗಳು ಸಂಭವಿಸಿದಾಗ್ಯೂ ತನ್ನ ನಿತ್ಯವ್ರತವೆನಿಸಿರುವ ಲಿಂಗಪೂಜೆಯನ್ನು ಮಾತ್ರ ಬಿಡಬಾರದೆಂದು ಶಿವನು ಷಣ್ಮುಖನಿಗೆ ಬೋಧಿಸಿರುತ್ತಾನೆ.

ಇದರಿಂದ ಶಿವದೀಕ್ಷಾಪೂರ್ವಕವಾಗಿ ಶಿವಲಿಂಗವನ್ನು ಧರಿಸಿ ಯಾವಜ್ಜೀವವೂ ಲಿಂಗಪೂಜೆ ಎಂಬ ಮಹಾವ್ರತವನ್ನು ಅಂಗೀಕರಿಸಿರುವುದರಿಂದ ಜನನ ಮರಣಾದಿಗಳಿಂದೊದಗುವ ಅಶುಚಿ ಕಾಲಗಳಲ್ಲಿಯೂ ಶಿವಲಿಂಗವನ್ನು ಧರಿಸಿರಬೇಕೆಂತಲೂ, ಪೂಜಿಸುತ್ತಿರಬೇಕೆಂತಲೂ ಸ್ಪಷ್ಟವಾಗುತ್ತದೆ. ಇದಲ್ಲದೆ–

ದೇವಾರ್ಚನಾದಿಕಂ ಕರ್ಮ ಕಾರ್ಯಂ ದೀಕ್ಷಾನ್ವಿತೈಸ್ಸದಾ ।
ನಾಸ್ತ್ಯಾಶೌಚವಿಧಿಸ್ತೇಷಾಂ ಸೂತಕಂ ಚ ಮಹಾತ್ಮನಾಮ್ ॥
ಶೈವಂ ದೇವಾರ್ಚನಂ ಯಸ್ಯ ಯಸ್ಯ ಚಾಗ್ನಿಪರಿಗ್ರಹಃ ।
ಬ್ರಹ್ಮಚಾರಿಯತೀನಾಂ ಚ ಶರೀರೇ ನಾಸ್ತಿ ಸೂತಕಮ್ ॥

(ಆದಿತ್ಯಪುರಾಣ)

ಯಾವಜ್ಜೀವವೂ ದೀಕ್ಷೆಯನ್ನು ಹೊಂದಿದವನು ಜನನ ಮರಣಾದಿ ಆಶೌಚಕಾಲಗಳಲ್ಲಿಯೂ ಸಹ ತನಗೆ ನಿತ್ಯವೆನಿಸಿರುವ ದೇವಾರ್ಚನಾದಿ ಕರ್ಮಗಳನ್ನು ಬಿಡದೆ ನಡೆಯಿಸುತ್ತಿರಬೇಕು. ದೀಕ್ಷಾಬದ್ಧರಾದ ಶಿವಲಿಂಗಾರ್ಚಕರಿಗೂ, ಮಹಾತ್ಮರಿಗೂ, ಅಗ್ನಿಪರಿಗ್ರಹಮಾಡಿದವರಿಗೂ, ಬ್ರಹ್ಮಚಾರಿಗಳಿಗೂ, ಸಂನ್ಯಾಸಿಗಳಿಗೂ ಸೂತಕದೋಷಗಳಿಲ್ಲ ಎಂಬ ಪ್ರಮಾಣವಿರುವುದರಿಂದ ಯಾವಜ್ಜೀವವೂ ದೀಕ್ಷಾಬದ್ಧರಾದ ಲಿಂಗಧಾರಿಗಳಿಗೆ ಸೂತಕಗಳಿಲ್ಲವೆಂದು ಸ್ಪಷ್ಟವಾಗುತ್ತದೆ.

**ಶಂಕೆ :**—ಆದರೆ ಜನನಮರಣಾದ್ಯಾಶೌಚ ಸಮಯಗಳಲ್ಲಿಯೂ ಸ್ನಾನದಿಂದ ಪರಿಶುದ್ಧರಾಗಿ ಲಿಂಗವನ್ನು ಪೂಜಿಸಬಹುದೆಂದು ಹೇಳುವುದಾದರೆ ಅಡಿಗೆಮಾಡುವುದು ಇನ್ನೊಬ್ಬರಿಗೆ ಉಣಬಡಿಸುವುದು, ವಿವಾಹಾದಿ ನೈಮಿತ್ತಿಕ ಕರ್ಮಗಳನ್ನು ಅನುಷ್ಠಿಸುವುದೂ, ಇವೆಲ್ಲವನ್ನೂ ಮಾಡಬಹುದಲ್ಲವೆ ?

**ಸಮಾಧಾನ :**—ಚತುರ್ದಶಿ, ಪೂರ್ಣಿಮೆ, ಪಾಡ್ಯ ತಿಥಿಗಳಲ್ಲಿ ವೇದವನ್ನು ಅಧ್ಯಯನ ಮಾಡಬಾರದೆಂದು ಸಾಮಾನ್ಯವಾಗಿ ಧರ್ಮಶಾಸ್ತ್ರಕಾರರು

ನಿಷೇಧಿಸಿದ್ದರೂ, ಸಂಧ್ಯಾವಂದನಾದಿ ಕೆಲವು ನಿತ್ಯಕರ್ಮಗಳನ್ನು ಅಂಥ ಅನಧ್ಯಯನದಿವಸಗಳಾದ ಪೂರ್ಣಿಮಾದಿ ತಿಥಿಗಳಲ್ಲಿಯೇ ಮಾಡಬೇಕಾಗಿರುವುದರಿಂದ ಸಂಧ್ಯಾವಂದನ ಸಮಯದಲ್ಲಿ ಉಚ್ಚರಿಸಬೇಕಾದ ಸೂರ್ಯಾರ್ಘ್ಯಪ್ರದಾನ ಮಂತ್ರಗಳಿಗೆ ಮತ್ತು ವೈಶ್ವದೇವಾದಿ ಪೂಜೆಗಳನ್ನು ಪ್ರತಿದಿವಸವೂ ಮಾಡಬೇಕಾಗಿರುವುದರಿಂದ ಆ ಸಮಯದಲ್ಲಿ ವಿನಿಯೋಗಿಸುವ ವೇದಮಂತ್ರಗಳಿಗೂ, ಮತ್ತು 'ದರ್ಶ, ಪೂರ್ಣಮಾಸೇಷ್ಟಿ' ಎಂಬ ಯಾಗಗಳು ಪೂರ್ಣಿಮ ಅಮಾವಾಸ್ಯೆಗಳಲ್ಲಿಯೇ ಮಾಡಬೇಕಾದ ಯಾಗವಾಗಿರುವುದರಿಂದ ಆ ಯಾಗದಲ್ಲಿ ವಿನಿಯೋಗಿಸುವ ಮಂತ್ರಗಳಿಗೂ ಅನಧ್ಯಯನ ದೋಷವನ್ನು ಹೇಳಕೂಡದು—

ನೈಮಿತ್ತಿಕೇಽಸ್ತ್ಯನಧ್ಯಾಯೋ ಬ್ರಹ್ಮಸತ್ರಂ ಹಿ ತತ್ಸ್ಮೃತಂ ।
(ಮನುಸ್ಮೃತಿ)

ಯಾವ ಕರ್ಮಗಳು ನೈಮಿತ್ತಿಕ ಕರ್ಮಗಳಾಗಿರುವುವೋ, ಅಂಥ ಕರ್ಮಗಳಲ್ಲಿ ವಿನಿಯೋಗಿಸುವ ವೇದಮಂತ್ರಗಳನ್ನು ಮಾತ್ರ ಅನಧ್ಯಯನ ದಿವಸಗಳಲ್ಲಿ ಪಠಿಸಬಾರದು. ನಿತ್ಯಕರ್ಮಗಳಲ್ಲಿ ವಿನಿಯೋಗಿಸುವ ವೇದ ಮಂತ್ರಗಳನ್ನು ಮಾತ್ರ ಅನಧ್ಯಯನ ದಿವಸಗಳಲ್ಲಿಯೂ ಪಠಿಸಬೇಕು. ಎಂದು ಧರ್ಮಶಾಸ್ತ್ರದ ನಿಯಮವಿರುತ್ತದೆ. ಒಂದುಪಕ್ಷ ಈ ನಿಯಮವನ್ನು ದಾಟಿ ವೇದದಲ್ಲಿರುವ ಮಂತ್ರಗಳಿಗೆಲ್ಲ ಸಾಮಾನ್ಯವಾಗಿ ಅನಧ್ಯಯನ ದೋಷವನ್ನೇ ಹೇಳುತ್ತ ಯಾವ ವೇದಮಂತ್ರಗಳನ್ನೂ ಪಠಿಸದೇಹೋದರೆ ಆಗ ನಿತ್ಯಸಂಕಲ್ಪಿತವಾದ ಸಂಧ್ಯಾವಂದನ, ನಿತ್ಯವೂ ಪೂಜನೀಯವಾದ ವೈಶ್ವದೇವತಾರಾಧನೆ, ಅಮಾವಾಸ್ಯಾ ಪೂರ್ಣಿಮೆಗಳಲ್ಲಿ ಮಾಡಬೇಕಾದ ದರ್ಶ ಪೂರ್ಣಮಾಸೇಷ್ಟಿ ಮುಂತಾದ ಕರ್ಮಗಳಿಗೆ ದೋಷವನ್ನು ಹೇಳಬೇಕಾಗುತ್ತದೆ. ಅದು ಆಸ್ತಿಕರಿಗೆ ಅನಿಷ್ಟದಾಯಕವಾದುದರಿಂದ ನಿತ್ಯಕರ್ಮಾಂಗವಾದ ವೇದಮಂತ್ರಗಳಿಗೆ ಅನಧ್ಯಯನದೋಷವನ್ನು ತೆಗೆದುಹಾಕಿರುವಂತೆ ಇಲ್ಲಿಯೂ—

"ಯಾವಜ್ಜೀವಮಿದಂ ದತ್ತಮಿಷ್ಟಲಿಂಗಂ ಸಮರ್ಚಯ."

ಎಂಬ ಪ್ರಮಾಣದಿಂದ ಇಷ್ಟಲಿಂಗಪೂಜೆಯು ಪ್ರತಿದಿವಸವೂ ತಪ್ಪದೆ ನಡೆಯಿಸಲ್ಪಡಬೇಕಾದ ಮಹಾವ್ರತವಾದುದರಿಂದ ಮಧ್ಯಕಾಲದಲ್ಲಿ ಜಾತಾ

ಶೌಚ, ಮೃತಾಶೌಚಗಳೊದಗಿದರೂ ನಿತ್ಯಸಂಕಲ್ಪಿತವಾದ ಲಿಂಗಪೂಜೆ ಯನ್ನು ಮಾತ್ರ ಬಿಡದೆ ಮಾಡಬೇಕಲ್ಲದೆ ಉಳಿದ ಪಾಕಾದಿ ಲೌಕಿಕ ಕರ್ಮ ಗಳನ್ನು ಮಾಡಕೂಡದು.

ಸ್ವೇಷ್ಟಲಿಂಗೈಕಪೂಜಾಯಾಂ ನೈವಾಶೌಚಂ ವಿಧೀಯತೇ ।
ಪೌಂಡರೀಕೇ ರಜಸ್ತ್ರೀಣಾಂ ಸ್ವಾಗ್ನಿಹೋತ್ರೇ ಯಥಾ ತಥಾ ॥
ಅಕರಸ್ಪರ್ಶಯೋಗ್ಯಾ ಹಿ ಯಥಾ ಜಿಹ್ವಾ ಮಹೇಶ್ವರಿ ।
ಮಂತ್ರೋಚ್ಚಾರಣಮಾತ್ರಸ್ಯ ಪೂತಾ ಭವತಿ ಭೂತಲೇ ॥
ತಥಾ ಸೂತಕಿನಶ್ಶೈವಾಃ ಪೂಜಾಮಾತ್ರಸುನಿರ್ಮಲಾಃ ।
ನಾನ್ಯಸ್ಪರ್ಶಾನುಕೂಲಾಸ್ಸ್ಯುರಿತಿ ವೇದಾನುಶಾಸನಮ್ ॥

(ಸಿದ್ಧಾಂತಾಗಮ)

ಬಹುದಿವಸಗಳವರೆಗೂ ಮಾಡಬೇಕಾದ ಪೌಂಡರೀಕ ಯಾಗದಲ್ಲಿ ದೀಕ್ಷಾಬದ್ಧಳಾಗಿರುವ ಸ್ತ್ರೀಯಳು ಮಧ್ಯಕಾಲದಲ್ಲಿ ರಜೋವತಿಯಾದರೂ ರಜಸ್ಸೂತಕವೆಂಬ ಆಶೌಚದೋಷವು ಇಲ್ಲದಂತೆಯೂ, ಆಹಿತಾಗ್ನಿಯು ಪ್ರತಿದಿವಸವೂ ಅಗ್ನಿಹೋತ್ರನಾಮಕ ಕರ್ಮವನ್ನು ಮಾಡಬೇಕಾಗಿರು ವುದರಿಂದ ಅವನಿಗೆ ಮಧ್ಯದಲ್ಲಿ ಸಂಭವಿಸುವ ಜಾತಾಶೌಚ, ಮೃತಾಶೌಚಾದಿ ದೋಷಗಳಿಲ್ಲ. ಅದರಂತೆ ಯಾವಜ್ಜೀವವೂ ಇಷ್ಟಲಿಂಗ ಪೂಜೆಯು ಪ್ರತಿ ದಿವಸ ಮಾಡಬೇಕಾದ ನಿತ್ಯವಿಧಿಯಾದುದರಿಂದ ಇದಕ್ಕೆ ಮಧ್ಯಕಾಲದಲ್ಲಿ ಸಂಭವಿಸಬಹುದಾದ ಜಾತಾಶೌಚ, ಮೃತಾಶೌಚಾದಿ ದೋಷಗಳಿಲ್ಲವು. ಎಲೌ ಪಾರ್ವತಿಯೇ! ನಾಲಿಗೆಯು ಗಂಡೂಷಾದಿಗಳಿಂದ ಪರಿಶುದ್ಧವಾಗಿ ದ್ದರೂ ಅದು ಮಂತ್ರೋಚ್ಚಾರಣೆಗೆ ಪರಿಶುದ್ಧವಾಗಿರುವುದೇ ಹೊರತು ಅಂಗುಲಿಯ ಸ್ಪರ್ಶಕ್ಕೆ ಯೋಗ್ಯವಾಗಲಾರದು.

ಇದರಂತೆ ದೀಕ್ಷಾಬದ್ಧರಾದ ಲಿಂಗಧಾರಿಗಳು ಮಹಾವ್ರತಧಾರಿಗಳಾದು ದರಿಂದ ಅವರಿಗೆ ಮಧ್ಯಕಾಲದಲ್ಲಿ ಜಾತಾಶೌಚ, ಮೃತಾಶೌಚಾದಿ ಸೂತಕ ಗಳೊದಗಿದರೂ ಸ್ನಾನಮಾತ್ರದಿಂದ ಸರಿಶುದ್ಧರಾಗಿ ಲಿಂಗಪೂಜೆಯೆಂಬ ನಿತ್ಯ ವಿಧಿಯನ್ನು ಮಾತ್ರ ನಿರ್ವಹಿಸುತ್ತಿರಬೇಕಲ್ಲದೆ ಪಾಕಾದಿ ಇತರ ಲೌಕಿಕ ಕರ್ಮಗಳನ್ನು ಮಾಡಲು ಅರ್ಹತೆಯಿರುವುದಿಲ್ಲವೆಂದು ವೇದವು ಅನುಜ್ಞೆ ಯಿತ್ತಿರುವುದೆಂದು ಪರಮೇಶ್ವರನು ಪಾರ್ವತಿಗೆ ಬೋಧಿಸಿರುತ್ತಾನೆ—

ನ ತಸ್ಯ ಸೂತಕಂ ಕಿಂಚಿತ್ ಪ್ರಾಣಲಿಂಗಾಂಗಸಂಗಿನಃ ।
ಜನನೋತ್ಥಂ ಮೃತೋತ್ಥಂ ಚ ವಿದ್ಯತೇ ಪರಮಾರ್ಥತಃ ॥
ಲಿಂಗಾರ್ಚನರತಾಯಾಶ್ಚ ಋತೌ ನಾರ್ಯಾ ನ ಸೂತಕಂ ।
ತಥಾ ಪ್ರಸೂತಿಕಾಯಾಶ್ಚ ಸೂತಕಂ ನೈವ ವಿದ್ಯತೇ ॥
ಗೃಹೇ ಯಸ್ಮಿನ್ ಪ್ರಸೂತಾ ಸ್ತ್ರೀ ಸೂತಕಂ ನಾತ್ರ ವಿದ್ಯತೇ ।
ಶಿವಪದಾಂಬುಸಂಸ್ಪರ್ಶಾತ್ಸರ್ವಪಾಪಂ ಪ್ರಣಶ್ಯತಿ ॥

(ಸಿದ್ಧಾಂತ ಶಿಖಾಮಣಿ ಪರಿ. ೯)

ಇಷ್ಟಲಿಂಗಧಾರಿಯಾದವನಿಗೆ ಜನನಸೂತಕವಾಗಲಿ, ಮರಣಸೂತಕವಾಗಲಿ ಪರಮಾರ್ಥವಾಗಿಲ್ಲವು. ಲಿಂಗಾಂಗಿಯಾದ ಸ್ತ್ರೀಯಳು ದೀಕ್ಷಾಬದ್ಧಳಾಗಿ ಪ್ರತಿನಿತ್ಯವೂ ಲಿಂಗಪೂಜಾಸಕ್ತಳಾದುದರಿಂದ ರಜಸ್ವಲೆಯಾದರೂ, ಪ್ರಸವಿಸಿದರೂ ಲಿಂಗಪೂಜೆಯೆಂಬ ತನ್ನ ನಿತ್ಯವ್ರತವನ್ನು ಬಿಡದಿರಬೇಕು. ಯಾವ ಗೃಹದಲ್ಲಿ ಪ್ರಸವಿಸಿರುತ್ತಾಳೆಯೋ ಆ ಭಾಗವನ್ನು ಶಿವಪಾದೋದಕದಿಂದ ಪರಿಶುದ್ಧಗೊಳಿಸಿ ನಿತ್ಯವ್ರತವನ್ನು ಸಮಾಪ್ತಿಗೊಳಿಸಬೇಕೆಂದು ಭಕ್ತಮಾರ್ಗಕ್ರಿಯಾಚಾರಸ್ಥಳದಲ್ಲಿ ಶ್ರೀ ರೇಣುಕ ಭಗವತ್ಪಾದರು ಲಿಂಗಪೂಜೆಗೆ ಸೂತಕದೋಷಗಳಿಲ್ಲವೆಂದು ಸ್ಪಷ್ಟಪಡಿಸಿರುವುದರಿಂದ, ಶುಚ್ಯಶುಚಿ ಸಾಧಾರಣ ಕಾಲಗಳಲ್ಲಿಯೂ ಲಿಂಗಾಂಗಿಗಳಾದ ಸ್ತ್ರೀಪುರುಷರು ಸ್ನಾನಮಾತ್ರದಿಂದ ಪರಿಶುದ್ಧರಾಗಿ ಪ್ರತಿದಿವಸವೂ ತಮ್ಮ ಶಿವಲಿಂಗವನ್ನು ವಾಮಹಸ್ತದಲ್ಲಿಟ್ಟು ಪೂಜಿಸುತ್ತ ಲಿಂಗ ತೀರ್ಥಪ್ರಸಾದಗಳನ್ನು ಸೇವಿಸುತ್ತಿರಬೇಕೆಂದು ಸಿದ್ಧವಾಯಿತು.

ಶಂಕೆ:—ವಾಮಹಸ್ತವು ಅಪವಿತ್ರವಾದುದೆಂದೂ, ಈ ಹಸ್ತದಲ್ಲಿ ದಾನಾದಾನಾದಿಗಳನ್ನು ಮಾಡಬಾರದೆಂದೂ ಲೋಕಾನುಭವವಿರುವುದರಿಂದ ಇಂಥ ಅಪವಿತ್ರವಾದ ವಾಮಹಸ್ತದಲ್ಲಿ ಪವಿತ್ರವಾದ ಶಿವಲಿಂಗವನ್ನಿರಿಸಿ ಷೋಡಶೋಪಚಾರಗಳಿಂದ ಅರ್ಚಿಸುವುದಕ್ಕಿಂತ ಪರಿಶುದ್ಧವಾದ ದಾರುರಜತಾದಿ ಪೀಠಗಳ ಮೇಲಿಟ್ಟು ದಕ್ಷಿಣಹಸ್ತದಿಂದ ಪೂಜಿಸುವುದು ಉತ್ತಮವಾದುದಲ್ಲವೆ ?

ಸಮಾಧಾನ :—

ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ।
ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ ॥
ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ ।
ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ॥
ಕದಾಚಿತ್ ಕುತ್ರಚಿದ್ವಾಪಿ ನವಿಯೋಜಯ ದೇಹತಃ ।
ಯದಿ ಪ್ರಮಾದಾತ್ಪತಿತೇ ಲಿಂಗೇ ದೇಹಾನ್ಮಹೀತಲೇ ॥
ಪ್ರಾಣಾನ್ ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ।
ಇತಿ ಸಂಬೋಧಿತಶ್ಶಿಷ್ಯೋ ಗುರುಣಾ ಶಾಸ್ತ್ರವೇದಿನಾ ॥

(ಸಿದ್ಧಾಂತ ಶಿಖಾಮಣಿ ಪರಿ. ೬.)

ಶ್ರೀ ಗುರುವು ದೀಕ್ಷಾಸಮಯದಲ್ಲಿ ಶಿಷ್ಯನ ಪ್ರಾಣವನ್ನು ಲಿಂಗದಲ್ಲಿಯೂ, ಲಿಂಗವನ್ನು ಪ್ರಾಣದಲ್ಲಿಯೂ ಸಂಯೋಜಿಸಿ ವಿಧ್ಯುಕ್ತವಾಗಿ ಪೂಜೆಗೈದು ಆ ಲಿಂಗಮೂರ್ತಿಯನ್ನು ಶಿಷ್ಯನ ಹಸ್ತದಲ್ಲಿರಿಸಿ, "ಅಯ್ಯಾ ಶಿಷ್ಯೋತ್ತಮನೆ! ಇದು ನಿನ್ನ ಪ್ರಾಣಲಿಂಗವಾದುದರಿಂದ ನಿನ್ನ ಪ್ರಾಣದೋಪಾದಿಯಲ್ಲಿ ರಕ್ಷಿಸುತ್ತಿರಬೇಕು. ಒಂದು ನಿಮಿಷವೂ ಈ ಲಿಂಗವನ್ನಗಲಿರಬಾರದು. ಅಜಾಗರೂಕತೆಯಿಂದ ವಿಯೋಗವಾದರೂ ಪ್ರಾಣವನ್ನು ಬಿಡಲೂ ಸಿದ್ಧನಾಗಿರಬೇಕು. ಇದರಿಂದ ಮುಕ್ತಿಯು ನಿನ್ನ ಕರಗತವಾಗುವುದೆಂದು ಬೋಧಿಸಿರುವುದಲ್ಲದೆ—

ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಂ ।
ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ ॥
ಮೂರ್ಧ್ನಿ ವಾ ಕಂಠದೇಶೇ ವಾ ಕಕ್ಷೇ ವಕ್ಷಸ್ಥಲೇಽಪಿ ವಾ ।
ಕುಕ್ಷೌ ಹಸ್ತಸ್ಥಲೇ ವಾಪಿ ಧಾರಯೇಲ್ಲಿಂಗಮೈಶ್ವರಮ್ ॥
ನಾಭೇರಧಸ್ತಾಲ್ಲಿಂಗಸ್ಯ ಧಾರಣಂ ಪಾಪಕಾರಣಂ ।
ಜಟಾಗ್ರೇ ತ್ರಿಕಭಾಗೇ ಚ ಮಲಸ್ಥಾನೇ ನ ಧಾರಯೇತ್ ॥
ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋರಮಮ್ ।
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥
ಬಾಹ್ಯಪೀಠಾರ್ಚನಾದೇತತ್ ಕರಪೀಠಾರ್ಚನಂ ವರಂ ।
ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರಂತರಮ್ ॥

(ಸಿದ್ಧಾಂತ ಶಿಖಾಮಣಿ ಪರಿ. ೬)

ಅರ್ಥ:—ಇಷ್ಟಲಿಂಗವು ಸಕಲಾನಿಷ್ಟಗಳನ್ನು ಪರಿಹರಿಸುತ್ತದೆ. ಯಾವಾಗಲೂ ಸಾವಧಾನವಾಗಿ ದೇಹದಲ್ಲಿ ಲಿಂಗವನ್ನು ಧರಿಸಬೇಕು. ಶಿರಸ್ಸು, ಕುತ್ತಿಗೆ, ಬಗಲು, ಎದೆ, ಹೊಟ್ಟೆ, ರಟ್ಟೆ, ಈ ಸ್ಥಾನಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿ ಧರಿಸಬೇಕಲ್ಲದೆ ಹೊಕ್ಕುಳಿನ ಕೆಳಭಾಗ ದಲ್ಲಾಗಲಿ, ಜುಟ್ಟಿನ ತುದಿಯಲ್ಲಾಗಲಿ, ಪೃಷ್ಟಭಾಗದಲ್ಲಾಗಲಿ, ಮಲ ಮೂತ್ರ ವಿಸರ್ಜನಸ್ಥಾನಗಳಾದ ನೀಚಾಂಗಗಳಲ್ಲಾಗಲಿ ಖಂಡಿತವಾಗಿ ಧರಿಸಬಾರದು. ದೀಕ್ಷಾಪೂರ್ವಕ ಲಿಂಗವನ್ನು ಅಂಗದಲ್ಲಿ ಧರಿಸಿದ ಮಾನವನು ಯಾವಾಗಲೂ ಪರಿಶುದ್ಧನಾಗಿರುವುದರಿಂದ ತನ್ನ ಇಷ್ಟಲಿಂಗವನ್ನು ಕರಪೀಠವಲ್ಲಿರಿಸಿ ಚಿತ್ತೈಕಾಗ್ರತೆಯಿಂದೊಡಗೂಡಿ ಗಂಧಪುಷ್ಪಾದಿಗಳಿಂದ ಪ್ರತಿ ದಿವಸವೂ ಪೂಜಿಸುತ್ತಿರಬೇಕು. ಲಿಂಗಧಾರಿಗಳಾದ ವೀರಶೈವರು ಯಾವಾಗಲೂ ಮುಕ್ತಿಕಾಮಿಗಳಾಗಿರುವುದರಿಂದ ಇವರಿಗೆ ರಜತ ತಾಮ್ರಾದಿ ಬಾಹ್ಯಪೀಠಗಳ ಮೇಲಿರಿಸಿ ಅರ್ಚಿಸುವುದಕ್ಕಿಂತಲೂ ಕರಪೀಠಾರ್ಚನೆಯು ಉತ್ತಮವಾದುದೆಂದು ಉಪದೇಶಿಸಿರುವುದರಿಂದ ಕರಪೀಠಾರ್ಚಕರಾದ ವೀರಶೈವರಿಗೆ ದಕ್ಷಿಣಹಸ್ತದಂತೆ ವಾಮಹಸ್ತವೂ ಪರಿಶುದ್ಧವಾದುದು.

"ಅಂಜಲಿನಾ ವಾ ಪಿಬೇದಖರ್ವೇಣ ಪಾತ್ರೇಣ"

(ಶ್ರುತಿ)

ಅರ್ಥ:—ವಿಸ್ತಾರವಾದ ಪಾತ್ರೆಯನ್ನು ಅಂಜಲಿಯಲ್ಲಿರಿಸಿಕೊಂಡು ಪಾನಮಾಡಬೇಕೆಂದು ಯಾಗಪ್ರಕರಣದಲ್ಲಿ ಅಂಜಲಿ ಶಬ್ದವನ್ನು ಪ್ರಯೋಗಿಸಿರುತ್ತಾರೆ. ಇಲ್ಲಿ ವಾಮಹಸ್ತವು ದಕ್ಷಿಣಹಸ್ತದೊಡನೆ ಸೇರದಿದ್ದಲ್ಲಿ ಅಂಜಲಿ ಶಬ್ದದ ವ್ಯವಹಾರವೇ ಬರುವುದಿಲ್ಲ. "ತೌಯುತಾವಂಜಲಿಃ ಪುಮಾನ್" ಎಂದು ಅಮರಕೋಶಕಾರರೂ ಜೋಡಿಸಿರುವ ಎರಡು ಹಸ್ತಗಳಿಗೇ ಅಂಜಲಿ ಎಂದು ಹೇಳಿರುತ್ತಾರೆ. ಮತ್ತು ಸಕಲ ವೈದಿಕಕರ್ಮಾಂಗವಾದ ಅಗ್ನಿಮುಖದಲ್ಲಿ "ಅಂಜಲೌ ಪೂರ್ಣಪಾತ್ರಮಾನಯತಿ" ಪೂರ್ಣಪಾತ್ರೆಯನ್ನು ಅಂಜಲಿ(ಬೊಗಸೆ)ಯಿಂದ ತೆಗೆದುಕೊಳ್ಳಬೇಕೆಂದು ಶ್ರುತಿಯು ಅದರ ವಿನಿಯೋಗದ ಕ್ರಮವನ್ನು ಹೇಳಿರುತ್ತದೆ. ಹೀಗೆ ವೈದಿಕ ಕರ್ಮಾನುಷ್ಠಾನ ಸಮಯದಲ್ಲಿ ವಾಮಹಸ್ತದ ಸಂಬಂಧವನ್ನು ತೋರಿಸಿರು

ವುದನ್ನು ಪರಿಶೀಲಿಸಿದರೆ ದಕ್ಷಿಣಹಸ್ತದಂತೆ ವಾಮಹಸ್ತವೂ ವೈದಿಕಕರ್ಮ ಗಳಲ್ಲಿ ಪವಿತ್ರವಾದುದೆಂದು ಸ್ಪಷ್ಟವಾಗುತ್ತದೆ. ಮತ್ತು

" ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ।
ಪದ್ಭ್ಯಾಂ ಕರಾಭ್ಯಾಂ ಕರ್ಣಾಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ "

(ಬೋಧಾಯನ)

**ಅರ್ಥ:**—ಗುರುಗಳಿಗೂ, ದೇವರಿಗೂ, ಎದೆ, ತಲೆ, ಪೃಷ್ಟ, ಮನಸ್ಸು, ವಾಕ್, ಪಾದಗಳು, ಹಸ್ತಗಳು, ಕಿವಿಗಳು, ಈ ಎಂಟು ಅಂಗ ಗಳನ್ನು ಭೂಮಿಗೆ ಸೋಂಕಿಸಿ ನಮಸ್ಕರಿಸುವುದಕ್ಕೆ ಸಾಷ್ಟಾಂಗ ಪ್ರಣಾಮ ವೆಂದು ಬೋಧಾಯನರು ಹೇಳಿರುತ್ತಾರೆ. ವಾಮಹಸ್ತವು ಸದಾ ಅಪವಿತ್ರವೇ ಆಗಿರುವ ಪಕ್ಷದಲ್ಲಿ ಸ್ಮೃತಿಕಾರರು ಇದಕ್ಕೆ ನಮಸ್ಕಾರಯೋಗ್ಯತ್ವವನ್ನೆಂದೂ ಹೇಳುತ್ತಿರಲಿಲ್ಲ. ಆದುದರಿಂದ ಶಿವಲಿಂಗವನ್ನು ವಾಮಹಸ್ತವೆಂಬ ಪೀಠ ದಲ್ಲಿರಿಸಿ ಪೂಜೆಮಾಡುವುದು ದೋಷಾರ್ಹವಾದುದಲ್ಲ.

**ಶಂಕೆ:**—ಇಷ್ಟಲಿಂಗವನ್ನು ದೇಹದಲ್ಲಿ ಧರಿಸಬೇಕೆಂತಲೂ, ವಾಮ ಹಸ್ತದಲ್ಲಿಟ್ಟು ಪೂಜಿಸಬೇಕೆಂತಲೂ ಸಿದ್ಧವಾದರೂ, ಶ್ರುತಿಗಳಿಗೆ ಭಾಷ್ಯವನ್ನು ರಚಿಸಿರುವ ಶ್ರೀ ವಿದ್ಯಾರಣ್ಯಾದ್ಯಾಚಾರ್ಯರು " **ಸರ್ವಲಿಂಗಂ ಸ್ಥಾಪ ಯತಿ** " ಇತ್ಯಾದಿ ಮಂತ್ರಗಳಿಗೆ ಲಿಂಗಧಾರಣಪರವಾಗಿ ಅರ್ಥವನ್ನು ಬರೆಯದಿರುವುದರಿಂದ ಲಿಂಗಧಾರಣವೇ ಈ ಶ್ರುತಿಗಳ ಆಶಯವೆಂದು ಹೇಗೆ ನಿರ್ಧರಿಸಬೇಕು ?

**ಸಮಾಧಾನ:**—ವಿದ್ಯಾರಣ್ಯಾದ್ಯಾಚಾರ್ಯರು ಹೇಳಿದ ಅರ್ಥಗಳೇ ಪ್ರಮಾಣಗಳೆಂದು ಹೇಳುವುದು ಕಿವುಡನ ಕಿವಿಯೊಳಗೆ ಜಪಮಾಡಿದಂತಾ ಗುವುದು. ಏಕೆಂದರೆ ಅಂತಹ ವಿದ್ಯಾರಣ್ಯಾದಿಗಳಿಗಿಂತಲೂ ಪ್ರಾಚೀನರೂ ಮಹಾ ಪಂಡಿತರೂ, ವೇದಾರ್ಥಪ್ರಕಾಶಕರೂ ಆದ ಕಾಲಹಸ್ತಿ ದೀಕ್ಷಿತ, ಮಂಚಣ್ಣಪಂಡಿತ, ಶ್ರೀಪತಿ ಪಂಡಿತ, ನೀಲಕಂಠಶಿವಾಚಾರ್ಯ, ರೇಣುಕಾ ದ್ಯಾಚಾರ್ಯರು ಈ ಮಂತ್ರಗಳಿಗೆ ಇಷ್ಟಲಿಂಗಧಾರಣ ಪರವಾಗಿ ವ್ಯಾಖ್ಯಾನ ವನ್ನು ರಚಿಸಿರುತ್ತಾರೆ. ವಿದ್ಯಾರಣ್ಯಾದ್ಯಾಚಾರ್ಯರಾದರೋ ತಾವು ಪ್ರವೇಶಿ ಸಿದ ಸಿದ್ಧಾಂತಮಾರ್ಗದಲ್ಲಿ ಇಷ್ಟಲಿಂಗಧಾರಣ ವಿಷಯವು ಅಪ್ರಕೃತವಾದುದ

ರಿಂದ ಅದರ ಗೊಡವೆಗೆ ಹೋಗಲಿಲ್ಲ. ಶ್ರೀ ವಿದ್ಯಾರಣ್ಯರು ಇದರಂತೆ ದುರ್ಗಾದೇವಿ ಪರಗಳಾದ ಮಂತ್ರಗಳಿಗೆ ವ್ಯಾಖ್ಯಾನವನ್ನು ಬರೆಯದೆ ಇದ್ದರೂ ಸಕಲ ಮತ ತತ್ತ್ವಗಳನ್ನು ಪ್ರಕಾಶಪಡಿಸಲಿಚ್ಛೆಯುಳ್ಳ ಶ್ರೀ ಶಂಕರಾಚಾರ್ಯರು ವ್ಯಾಖ್ಯಾನಮಾಡಿ ದುರ್ಗಾದೇವೀಪೂಜೆಯಲ್ಲಿ ವಿನಿಯೋಗ ಮಾಡಿರುತ್ತಾರೆ. ಇದರಂತೆ ವೀರಶೈವಮತದ ಪೂರ್ವಾಚಾರ್ಯರು “ **ಸರ್ವಲಿಂಗಂ ಸ್ಥಾಪಯತಿ** ” ಇತ್ಯಾದಿ ಮಂತ್ರಗಳಿಗೆ ಲಿಂಗಧಾರಣಪರವಾಗಿ ವ್ಯಾಖ್ಯಾನಮಾಡಿರುವುದು ನ್ಯಾಯವಾದುದು.

ಇನ್ನು ಅದೇ ತೈತ್ತಿರೀಯದ ಮತ್ತೊಂದು ಶ್ರುತಿಯಲ್ಲಿ

**ಓಂ ನಮೋ ಬ್ರಹ್ಮಣೇ ಧಾರಣಂ ಮೇ ಅಸ್ತ್ವನಿರಾಕರಣಂ**
**ಧಾರಯಿತಾ ಭೂಯಾಸಂ ಕರ್ಣಯೋಶ್ಶ್ರುತಂ**
**ಮಾಚ್ಯೋಢ್ವಂ ಮಮಾಮುಷ್ಯ ಓಂ**

(ತೈತ್ತೀರಿಯ)

**ಅನ್ವಯವಾರ್ಥ:—**ಎಲೌ ಗುರುವೇ? ಬ್ರಹ್ಮಣೇ-ಬ್ರಹ್ಮಸ್ವರೂಪನಾದ ನಿನಗೆ, ನಮಸ್ಕರಿಸುವೆನು. ಅನಿರಾಕರಣಂ – ಜಾಗ್ರದಾದ್ಯವಸ್ಥೆಗಳಲ್ಲಿಯೂ ಅನಾದರಣೆಮಾಡದಂತೆ, ಧಾರಣಂ–ಇಷ್ಟಲಿಂಗಧಾರಣವು, ಮೇ–ಅಂಗಶಬ್ದವಾಚ್ಯನಾದ ನನಗೆ, ಅಸ್ತು–ಆಗಲಿ, ಧಾರಯಿತಾ–ಲಿಂಗವನ್ನು ಧರಿಸುವನಾಗಿ, ಭೂಯಾಸಂ–ಆಗುವೆನು, ಕರ್ಣಯೋಶ್ಶ್ರುತಂ–ಋಷಿ, ದೇವತಾ, ಛಂದಸ್ಸು, ಬೀಜ, ಶಕ್ತಿ, ನ್ಯಾಸಾದಿಗಳಿಂದೊಡಗೂಡಿದ ಪಂಚಾಕ್ಷರ ಮಂತ್ರಶ್ರವಣವು, ಅಸ್ತು-ಆಗಲಿ, ಅಮುಷ್ಯ-ಈ ಬ್ರಹ್ಮದ, ಓಂ-ಪ್ರಣವಶಬ್ದವಾಚ್ಯವಾದ ಶಿವಲಿಂಗವು, ಮಮ-ನನ್ನ ದೇಹದಿಂದ, ಮಾಚ್ಯೋಢ್ವಂ-ಶರೀರದಿಂದ ಯಾವಾಗಲೂ ವಿಯೋಗವನ್ನು ಹೊಂದುವುದು ಬೇಡ, (ಚ್ಯುಙ್–ಚ್ಯವನೇಲುಙ್ ಮಧ್ಯಮಪುರುಷ) ಎಂದು ಇಷ್ಟಲಿಂಗ ಧಾರಣ ಪರವಾಗಿ ವ್ಯಾಖ್ಯಾನಮಾಡಿರುತ್ತಾರೆ.

**ಶಂಕಾ:—**ಈ ಮಂತ್ರದಲ್ಲಿ “ಮೇ ಧಾರಣಮಸ್ತು” ನನಗೆ ಧಾರಣವಾಗಲಿ. “ ಅಹಂ ಧಾರಯಿತಾ ಭೂಯಾಸಂ ” ನಾನು ಧರಿಸುವೆನು ಎಂಬ ಎರಡು ವಾಕ್ಯಗಳಲ್ಲಿಯೂ ಸಾಮಾನ್ಯವಾಗಿ ಧಾರಣವು ಮಾತ್ರ

ತೋರುವುದಲ್ಲದೆ ಆ ಧಾರಣಪದಕ್ಕೆ ಇಂಥ ವಸ್ತುವನ್ನೇ ಧರಿಸಬೇಕೆಂಬ ಕರ್ಮಪದವಾವುದನ್ನೂ ಹೇಳದಿರುವುದರಿಂದ ಧಾರಣಪದಕ್ಕೆ ಲಿಂಗಧಾರಣವೆಂದು ಹೇಗೆ ನಿಶ್ಚಯಿಸುವುದು ?

**ಸಮಾಧಾನ:**—ಈ ಮಂತ್ರದಲ್ಲಿ ಕರ್ಮಪದವಿಲ್ಲದಿದ್ದರೂ ಇಷ್ಟಲಿಂಗವನ್ನು ದೇಹದಲ್ಲಿ ಧರಿಸಬೇಕೆಂಬ ಅನಂತ ಪ್ರಮಾಣಗಳಿರುವುವಲ್ಲದೆ ರೂಢಿಯೂ ಬಂದಿರುತ್ತದೆ. ಇದರಂತೆ **ನಾರಾಯಣ, ಗಣಪತಿ, ದುರ್ಗಾ, ಸೂರ್ಯ, ಶಕ್ತಿ** ಮುಂತಾದ ಯಾವ ದೇವತೆಗಳನ್ನೂ ದೇಹದಲ್ಲಿ ಧರಿಸುವ ವಾಡಿಕೆಯಾಗಲಿ, ಪ್ರಮಾಣ ಗ್ರಂಥಗಳಾಗಲಿ ಕಂಡುಬರುವುದಿಲ್ಲವಾದುದರಿಂದ ಅರ್ಥಾತ್ ಅಂದರೆ ಪಾರಿಶೇಷ ನ್ಯಾಯದಿಂದ ಲಿಂಗಧಾರಣವೆಂದೇ ಸಿದ್ಧವಾಗುವುದು.

**ಶಂಕೆ:**—ಮಂತ್ರದಲ್ಲಿ ಲಿಂಗಪದವಿಲ್ಲದಿದ್ದರೂ ಹಿಂದುಮುಂದಣ ಮಂತ್ರಗಳಲ್ಲಿ ಬಂದಿರುವ ಪದಗಳನ್ನುನೋಡಿ ಇಲ್ಲಿ ಕರ್ಮಪದ (ಲಿಂಗ) ವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುವುದು. ಅದರಂತೆ ನಾರಾಯಣಾದಿ ಇತರ ದೇವತಾಪ್ರತಿನಿಧಿಗಳಾದ ಶಂಖಚಕ್ರಾದಿ ಚಿಹ್ನೆಗಳನ್ನು ಅಧ್ಯಾಹಾರ ಮಾಡಿಕೊಂಡು ಶಂಖಚಕ್ರಧಾರಣಪರವಾಗಿ ಅರ್ಥಮಾಡಬಹುದಲ್ಲವೇ ?

**ಸಮಾಧಾನ:**—ಮಂತ್ರದಲ್ಲಿ "ಅನಿರಾಕರಣಂ" ಎಂಬುದೊಂದು ವಿಶೇಷ ಪದವಿರುವುದು, ನಿರಾಕರಣವೆಂದರೆ ಹುಟ್ಟುವುದು, ಸಾಯುವುದೆಂದರ್ಥವು. "ನಿರಾಕರಣಂ ನ ಭವತೀತಿ ಅನಿರಾಕರಣಂ" ಎಂಬ ವ್ಯುತ್ಪತ್ತಿಯಿಂದ ಹುಟ್ಟುಸಾವುಗಳಿಲ್ಲದುದೆಂದರ್ಥವು. ಇಂಥ ನಾಶರಹಿತ ವಸ್ತುವಾದರೋ ಬ್ರಹ್ಮವೇ ಆಗಿರುತ್ತದೆ. ಮತ್ತು "ಓಂ ನಮೋ ಬ್ರಹ್ಮಣೇ" ಎಂದು ಮಂತ್ರದಲ್ಲಿ ಬ್ರಹ್ಮಶಬ್ದವು ಬಂದಿರುವುದರಿಂದ ಅಂಥ ಬ್ರಹ್ಮಶಬ್ದವಾಚ್ಯವಾದ ಲಿಂಗವನ್ನು ಕರ್ಮಪದವನ್ನಾಗಿ ಅಧ್ಯಾಹಾರ ಮಾಡುತ್ತೇವೆ—

**ಶಂಕೆ :**—ಮಂತ್ರದಲ್ಲಿರುವ ಅನಿರಾಕರಣ ಪದಕ್ಕೆ ಯೌಗಿಕಶಕ್ತಿಯನ್ನು ಅಂಗೀಕಾರ ಮಾಡುವುದಾದರೆ ಜನನಮರಣ ರೂಪವಾದ ಹೇಯ

ಪ್ರಪಂಚಶೂನ್ಯತೆಯು ಲಿಂಗಕ್ಕಿರುವಂತೆ, ನಾರಾಯಣಾದಿ ದೇವತೆಗಳ ಲ್ಲಿಯೂ ಆ ದೇವತಾಚಿಹ್ನೆಗಳೆನಿಸಿದ ಶಂಖಚಕ್ರಾದಿಗಳಲ್ಲಿಯೂ ಇರುವುದ ರಿಂದ ಧಾರಣಕ್ರಿಯೆಯಲ್ಲಿ ಶಂಖಚಕ್ರಗಳನ್ನು ಕರ್ಮಪದವನ್ನಾಗಿ ಹೇಳಲು ಅವಕಾಶವಿರುವಲ್ಲಿ ನಿಯಮದಿಂದ ಶಿವಲಿಂಗವೇ ಕರ್ಮಪದವೆಂದು ಹೇಗೆ ಹೇಳುವುದು ?

ಸಮಾಧಾನ :—"ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ"

(ಅಥರ್ವಶಿರ)

ಚತುರ್ಮುಖ ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಮುಂತಾದ ದೇವತೆ ಗಳು ಪರಶಿವನಿಂದ ಜನ್ಮವನ್ನೆತ್ತಿದರು.

ತ್ರಯಸ್ತೇ ಕಾರಣಾತ್ಮಾನೋ ಜಾತಾಸ್ಸಾಕ್ಷಾನ್ಮಹೇಶ್ವರಾತ್ ।
ಪಿತ್ರಾ ನಿಯಮಿತಾಃ ಪೂರ್ವಂ ತ್ರಯೋऽಪಿ ತ್ರಿಷು ಕರ್ಮಸು ॥
ಬ್ರಹ್ಮಾ ಸರ್ಗೇ ಹರಿಸ್ತ್ರಾಣೇ ರುದ್ರಸ್ಸಂಹರಣೇ ಪುನಃ

(ಶಿವಪುರಾಣ)

ಲಿಂಗರೂಪವಾದ ಮಹೇಶ್ವರನು ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ರುದ್ರರನ್ನು ಸೃಜಿಸಿ, ಬ್ರಹ್ಮನಿಗೆ ಸೃಷ್ಟಿಸುವ ಅಧಿಕಾರವನ್ನೂ, ವಿಷ್ಣುವಿಗೆ ರಕ್ಷಿಸುವ ಅಧಿಕಾರವನ್ನೂ, ರುದ್ರನಿಗೆ ಸಂಹರಿಸುವ ಅಧಿಕಾರವನ್ನೂ ವಹಿಸಿ ದನು. ಎಂದು ಅನೇಕ ಪುರಾಣ ವಚನಗಳು ಸಾರುವುವಲ್ಲದೆ "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ"

(ಅಥರ್ವಶಿಖಾ)

"ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ।
ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥

(ಶ್ವೇತಾಶ್ವತರೋಪನಿಷತ್)

ಶಿವನು ಮಂಗಳವನ್ನುಂಟುಮಾಡುವುದರಿಂದ ಇತರ ದೇವತೆಗಳ ನ್ನೆಲ್ಲಾ ಬಿಟ್ಟು, ಆ ಶಿವನೊಬ್ಬನನ್ನೇ ಧ್ಯೇಯವಸ್ತುವನ್ನಾಗಿ ಅರಿಯ ಬೇಕು. ಮಾನವನು ಯಾವಾಗ ಆಕಾಶವನ್ನು ಚರ್ಮದಂತೆ ದೇಹದಲ್ಲಿ ಸುತ್ತಿಕೊಳ್ಳುವನೋ, ಆಗ ಶಿವನನ್ನು ತಿಳಿಯದಿದ್ದರೂ ದುಃಖದಿಂದ ಬಿಡುಗಡೆ

ಯಾಗುವನು. ಅಂದರೆ ಶಿವಜ್ಞಾನವೇ ಜನನ ಮರಣ ರೂಪವಾದ ದುಃಖ ವನ್ನು ಪರಿಹರಿಸುವುದೆಂದು ಭಾವವು.

ಹೀಗೆ ಅನೇಕ ಉಪನಿಷತ್ತುಗಳು ಪರಶಿವನನ್ನೇ ಧ್ಯೇಯವನ್ನಾಗಿ ಹೇಳಿರುವುದರಿಂದ " ಓಂ ನಮೋ........ಮಮಾಮುಷ್ಯ ಓಂ " ಎಂಬ ಮಂತ್ರದಲ್ಲಿರುವ " ಅನಿರಾಕರಣಂ " ಎಂಬ ಪದದಿಂದ ತ್ರಿಮೂರ್ತ್ಯಾತೀತ ವಾದ ಶಿವಲಿಂಗಧಾರಣವೆಂಬ ಅರ್ಥವು ಯುಕ್ತವಾದುದು.

**ಶಂಕಾ :—**

ವಿಭೂತಿರ್ಯಸ್ಯ ನೋ ಫಾಲೇ ಕಂಠೇ ರುದ್ರಾಕ್ಷಮಾಲಿಕಾ ।
ಮುಖೇ ಷಡಕ್ಷರೋ ಮಂತ್ರಃ ತಂ ತ್ಯಜೇದಂತ್ಯಜಂ ಯಥಾ ॥
ಉದ್ಧೂಳನಂ ತ್ರಿಪುಂಡ್ರಂ ಚ ಮನಸಾಪಿ ನ ಲಂಘಯೇತ್ ।
ಶ್ರುತ್ಯಾ ವಿಧೀಯತೇ ತಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ॥

ಯಾವ ವೀರಶೈವನ ಹಣೆಯಲ್ಲಿ ವಿಭೂತಿಯೂ, ಕಂಠದಲ್ಲಿ ರುದ್ರಾಕ್ಷಿಯೂ, ಮುಖದಲ್ಲಿ ಪಂಚಾಕ್ಷರ ಮಂತ್ರವೂ ಇರುವುದಿಲ್ಲವೋ ಅವನನ್ನು ಅಂತ್ಯಜನಂತೆ ದೂರೀಕರಿಸತಕ್ಕುದು. ವೀರಶೈವಕುಲೋತ್ಪನ್ನ ನಾದವನು ಭಸ್ಮೋದ್ಧೂಳನ, ಭಸ್ಮತ್ರಿಪುಂಡ್ರಧಾರಣ ಮುಂತಾದ ಶಿವಚಿಹ್ನೆಗಳೊಂದನ್ನೂ ನಿರಾಕರಿಸಬಾರದು. ಹಾಗೆ ನಿರಾಕರಿಸಿದವನು ಪತಿತನಾಗುವನೆಂದು, ಶ್ರುತಿಯು ಅನುಜ್ಞೆಯಿತ್ತಿರುವುದು. ಹೀಗೆ ಅನಂತಪ್ರಮಾಣವಚನಗಳು ವಿಭೂತಿ, ರುದ್ರಾಕ್ಷಾದಿ ಶಿವಚಿಹ್ನೆಗಳನ್ನು ಧರಿಸಬೇಕೆಂದು ಹೇಳುವುದರಿಂದ ಧಾರಣಪದಕ್ಕೆ ಮಂತ್ರ, ರುದ್ರಾಕ್ಷ, ವಿಭೂತಿಗಳನ್ನು ಕರ್ಮಪದವನ್ನಾಗಿ ಮಾಡಬಹುದು. ಶಿವಲಿಂಗವನ್ನೇ ಕರ್ಮಪದವನ್ನಾಗಿ ಮಾಡಬೇಕೆಂಬ ನಿರ್ಬಂಧವೇಕೆ ?

**ಸಮಾಧಾನ :—**ಈ ಮಂತ್ರದಲ್ಲಿ " ಓಂ " ಎಂಬ ಪದವಿರುತ್ತದೆ. " ಓಂಕಾರಂ ಲಿಂಗಮಾಖ್ಯಾತಂ " ಇತ್ಯಾದಿ ಪ್ರಮಾಣಗಳಿಂದ ಆ ಓಂ ಕಾರಕ್ಕೆ ಲಿಂಗವೆಂದರ್ಥವು. ಇಂಥ ಲಿಂಗವೆಂಬ ಅರ್ಥವನ್ನು ಕೊಡುವ ಓಂಕಾರವು ಇರುವಂತೆ, ಭಸ್ಮ ರುದ್ರಾಕ್ಷ ಪರವಾದ ಇನ್ನಾವ ಪದಗಳೂ ಆ ಮಂತ್ರದಲ್ಲಿಲ್ಲ, ಇದಲ್ಲದೆ ಯಾವ ಅಂಗದಲ್ಲಿ ಲಿಂಗಧಾರಣವಿದೆಯೋ, ಆ ಅಂಗದಲ್ಲಿ ರುದ್ರಾಕ್ಷ ಭಸ್ಮಾದಿಗಳು ಇರಲೇಬೇಕೆಂದು ನಿಯಮವಿರುವಂತೆ

ಯಾವ ಅಂಗದಲ್ಲಿ ರುದ್ರಾಕ್ಷಭಸ್ಮಾದಿ ಶಿವಚಿಹ್ನೆಗಳಿರುತ್ತವೆಯೋ ಆ ಅಂಗದಲ್ಲಿ ಲಿಂಗವಿರಲೇಬೇಕೆಂಬ ನಿಯಮವಿರುವುದಿಲ್ಲ. ಇದಲ್ಲದೆ ರೇಣುಕಾದಿ ಮಹಾಚಾರ್ಯರು ಲಿಂಗಧಾರಣ ಸಹಿತವಾದ ಭಸ್ಮರುದ್ರಾಕ್ಷಧಾರಣಗಳಿಗೆ ಮಹತ್ವವನ್ನು ಕೊಟ್ಟಿರುವಂತೆ, ಲಿಂಗಧಾರಣ ರಹಿತವಾದ ಕೇವಲ ಭಸ್ಮ ರುದ್ರಾಕ್ಷ ಧಾರಣಗಳಿಗೆ ಕೊಟ್ಟಿರುವುದಿಲ್ಲ. ಆದುದರಿಂದ ಧಾರಣಪದಕ್ಕೆ ಅರ್ಥಾತ್ ಲಿಂಗಧಾರಣವೆಂಬ ಅರ್ಥವೇ ನ್ಯಾಯವಾಗಿದೆ.

ಶಂಕಾ :—ಈ ಮಂತ್ರದ ಉತ್ತರಾರ್ಧದಲ್ಲಿ **"ಧಾರಯಿತಾ ಭೂಯಾಸಂ"** ಎಂದು ಆಶೀರ್ಲಿಂಙ್ ಪ್ರಯೋಗವಿರುವುದರಿಂದ **"ಓಂ ನಮೋ ಬ್ರಹ್ಮಣೇ ಧಾರಣಂ"** ಎಂಬ ಪೂರ್ವಾರ್ಧಕ್ಕೆ ವಿಧ್ಯರ್ಥವನ್ನು ಹೇಳಲವಕಾಶವಿಲ್ಲ. ಒಂದುವೇಳೆ ವಿಧಿಪ್ರಯೋಜಕ ರೂಪವಿರುವುದೆಂದು ಹೇಳುವುದಾದರೆ ಹಿಂದೆ **"ಸರ್ವಲಿಂಗಂ ಸ್ಥಾಪಯತಿ"** ಎಂಬ ವಾಕ್ಯಕ್ಕೆ ಲಿಂಗಧಾರಣ ರೂಪವಾದ ಅರ್ಥವನ್ನು ಹೇಳುವುದರಿಂದ ಪ್ರಮಾಣಾಂತರಗಳಿಂದ ಪ್ರಾಪ್ತತ್ವವೇ ಉಂಟಾಗುವುದಲ್ಲದೆ ಅಪ್ರಾಪ್ತತ್ವರೂಪವಾದ ಅಪೂರ್ವವಿಧಿಯ ಲಕ್ಷಣ ಬರಲಿಲ್ಲವಾದುದರಿಂದ **"ಓಂ ನಮೋ ಬ್ರಹ್ಮಣೇ"** ಎಂಬ ವಾಕ್ಯವು ಅನ್ಯಥಾಸಿದ್ಧವೆಂಬ ದೋಷಯುಕ್ತವಾಗಬೇಕಾಗುವುದು.

ಸಮಾಧಾನ :—**"ಮೇಧಾವೀ ಭೂಯಾಸಂ"** ನನ್ನನ್ನು ಮೇಧಾಶಕ್ತಿಯುಳ್ಳವನನ್ನಾಗಿ ಮಾಡಬೇಕು. ಎಂಬ ಪದಸಾಮರ್ಥ್ಯರೂಪವಾದ ಆಶೀರ್ಲಿಂಙ್ ಪ್ರಯೋಗವುಳ್ಳ ಈ ಮಂತ್ರವಾಕ್ಯಕ್ಕೆ ವಿಧ್ಯರ್ಥವನ್ನು ಕಲ್ಪಿಸಿರುವಂತೆ **"ಅಹಂ ಧಾರಯಿತಾ ಭೂಯಾಸಂ"** ನಾನು ಲಿಂಗಧಾರಣೆಯುಳ್ಳವನಾಗುವೆನು ಎಂಬ ಪದಸಾಮರ್ಥ್ಯವುಳ್ಳ ಆಶೀರ್ಲಿಂಙ್ ಪ್ರಯೋಗವುಳ್ಳ ಈ ಮಂತ್ರವಾಕ್ಯಕ್ಕೂ ವಿಧ್ಯರ್ಥವನ್ನು ಕಲ್ಪಿಸುತ್ತೇವೆ. ಮತ್ತು ಈ ವಾಕ್ಯದಿಂದ ವಿಧಾನ ಮಾಡಲ್ಪಡುವ ಶಿವಲಿಂಗಧಾರಣವನ್ನು **"ಸರ್ವಲಿಂಗ"** ವಾಕ್ಯವು ಅನುವಾದಮಾಡಿ **"ಪಾಣಿಮಂತ್ರಂ"** ಎಂಬ ವಾಕ್ಯವು ಹಸ್ತರೂಪವಾದ ಅಧಿಕರಣಾರ್ಥವನ್ನು ಮಾತ್ರ ವಿಧಿಸುವುದೆಂದು ಹೇಳಬೇಕಾಗಿರುವುದರಿಂದ ಅನ್ಯಥಾಸಿದ್ಧವೆಂಬ ದೋಷಕ್ಕವಕಾಶವಿಲ್ಲವು. ಆದುದರಿಂದ **"ಓಂ ನಮೋ ಬ್ರಹ್ಮಣೇ ಧಾರಣಂ"** ಎಂಬ ಮಂತ್ರವು

ಇಷ್ಟಲಿಂಗಧಾರಣವನ್ನು ವಿಧಾನಮಾಡುವುದೆಂಬುವುದರಲ್ಲಿ ಸಂಶಯ ವಿಲ್ಲ.

ಶಂಕಾ :—

ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।
ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥

(ಸ್ಮೃತಿ)

ಓಂಕಾರವು ಮತ್ತು ಅಥಶಬ್ದವು ಪೂರ್ವದಲ್ಲಿ ಬ್ರಹ್ಮನ ಕಂಠದಿಂದ ಹೊರಟಿರುತ್ತವೆ. ಆದುದರಿಂದ ಇವೆರಡು ಪದಗಳು ಮಂಗಲವಾಚಕಗಳಾಗಿರುತ್ತವೆ ಎಂಬ ಸ್ಮೃತಿಯ ಪ್ರಮಾಣದಿಂದ ಓಂಕಾರವು ಮಂಗಲವಾಚಕವೆಂದು ನಿಶ್ಚಯವಾಗುವುದಲ್ಲದೆ ಶಿವಲಿಂಗವಾಚಕವಾಗುವುದಿಲ್ಲ – ಮತ್ತು "ಅಕಾರೋ ಸರ್ವಾ ವಾಕ್" ಎಂಬ ಪ್ರಮಾಣದಿಂದ ಓಂಕಾರದ ಅವಯವಗಳಾದ ಅಕಾರ ಉಕಾರ ಮಕಾರಗಳಲ್ಲಿ ಮೊದಲನೆಯ ಅಕಾರವು ವಾಗ್ರೂಪವೆಂದು ಗೊತ್ತಾಗುತ್ತದೆ. ಇಂಥ ಅಕಾರವನ್ನು ವಿಷ್ಣುವಾಚಕವನ್ನಾಗಿ ಹೇಳಲೂ ಬಹುದು. ಅಕಾರವೇ ಮೊದಲಿರುವ ಓಂಕಾರವು ವಿಷ್ಣುವಾಚಕವಾದರೂ ಅಥವಾ ಇತರ ದೇವತಾ ವಾಚಕವಾದರೂ ಆಗಬಹುದು. ಹೀಗಿರುವ ಓಂಕಾರವು ನಿಯಮದಿಂದ ಶಿವಲಿಂಗ ವಾಚಕವೆಂದು ಹೇಳಲಾಗುವುದಿಲ್ಲ.

ಸಮಾಧಾನ :—

ಅಕಾರಂ ಬ್ರಹ್ಮಾಣಂ ನಾಭೌ ಉಕಾರಂ ವಿಷ್ಣುಂ ಹೃದಯೇ ।
ಮಕಾರಂ ಶರ್ವಂ ಭ್ರೂಮಧ್ಯೇ ಓಂಕಾರಂ ಸರ್ವೇಶ್ವರಂ
ದ್ವಾದಶಾಂತೇ ॥

(ತಾಪನೀಯೋಪನಿಷತ್)

ಓಂಕಾರದ ಅವಯವಗಳೆನಿಸಿದ ಅ ಉ ಮ ಕಾರಗಳಲ್ಲಿ ಅಕಾರ ಸ್ವರೂಪನಾದ ಚತುರ್ಮುಖ ಬ್ರಹ್ಮನನ್ನು ನಾಭಿಸ್ಥಾನದಲ್ಲಿಯೂ, ಉಕಾರ ಸ್ವರೂಪನಾದ ವಿಷ್ಣುವನ್ನು ಹೃದಯಸ್ಥಾನದಲ್ಲಿಯೂ, ಮಕಾರ ಸ್ವರೂಪನಾದ ರುದ್ರನನ್ನು ಭ್ರೂಮಧ್ಯಸ್ಥಾನದಲ್ಲಿಯೂ, ಓಂಕಾರ ಸ್ವರೂಪವಾದ ಲಿಂಗವನ್ನು ದ್ವಾದಶಾಂತವೆನಿಸಿದ ಬ್ರಹ್ಮ ರಂಧ್ರದಲ್ಲಿಯೂ ಧ್ಯಾನಿಸಬೇಕು.

ಏವಂ ತಿಸೃಭಿರೇವೈತನ್ಮಾತ್ರಾಭಿರಖಿಲಾನ್ ತ್ರಿಧಾ ।
ಅಭಿದಾಯ ಶಿವಾತ್ಮಾನಂ ಬೋಧಯತ್ಯರ್ಧಮಾತ್ರಯಾ ॥

(ಶಿವಪುರಾಣ)

ಅರ್ಥ:—ಓಂಕಾರದ ಅವಯವಗಳಾದ ಅಕಾರ ಉಕಾರ ಮಕಾರಗಳೆಂಬ ಮೂರು ಮಾತ್ರೆಗಳು ಕ್ರಮವಾಗಿ ಬ್ರಹ್ಮ ವಿಷ್ಣು ಮಹೇಶ್ವರರನ್ನು ಬೋಧಿಸುತ್ತವೆ. ಉಳಿದ ಅರ್ಧಮಾತ್ರೆಯು ಈ ತ್ರಿಮೂರ್ತಿಗಳಿಗೆ ಸಾಕ್ಷಿಯಾದ ಶಿವಲಿಂಗವನ್ನು ಬೋಧಿಸುವುದು.

ಸರ್ವಜ್ಞಾಯ ನಮಸ್ತುಭ್ಯಂ ಓಂಕಾರಾಯ ನಮೋ ನಮಃ ।

( ಲಿಂಗ ಪುರಾಣ )

"ಎಲೈ ಶಿವನೆ! ಸರ್ವಜ್ಞನಾದ, ಓಂಕಾರಸ್ವರೂಪನಾದ ನಿನಗೆ ನಮಸ್ಕರಿಸುವೆ"ನೆಂದು ವಿಷ್ಣುವು ಶಿವಲಿಂಗವನ್ನು ಸ್ತುತಿಸಿರುತ್ತಾನೆ.

ಹೀಗೆ ಅನಂತ ವೇದಾಗಮಪುರಾಣಾದಿ ಪ್ರಮಾಣಗಳ ಪರ್ಯಾಲೋಚನೆಯಿಂದ ಆ ಮಂತ್ರದಲ್ಲಿ ಬಂದಿರುವ ಓಂಕಾರವು ಶಿವಲಿಂಗಪರವೆಂದು ಸ್ಪಷ್ಟವಾಗುವುದು.

ಶಂಕಾ :—ಮೇಲಿನ ಸಮಾಧಾನಗಳಿಂದ ಓಂಕಾರವು ಶಿವನನ್ನು ಬೋಧಿಸಿದಂತಾಯಿತಲ್ಲದೆ ಲಿಂಗವನ್ನು ಬೋಧಿಸಿದಂತಾಗಲಿಲ್ಲ. ಆದುದರಿಂದ ಆ ಮಂತ್ರವು ಲಿಂಗಧಾರಣವನ್ನು ವಿಧಾನಮಾಡುತ್ತದೆಂದು ಹೇಗೆ ಹೇಳುವುದು ?

ಸಮಾಧಾನ :—

"ಲಿಂಗೇ ಸುಷುಪ್ತಿಃ" "ಓಂಕಾರಂ ಲಿಂಗಮಾಖ್ಯಾತಮ್"

ಇತ್ಯಾದಿ ಅನೇಕ ಪ್ರಮಾಣಗಳು ಲಿಂಗವು ಓಂಕಾರ ಪದವಾಚ್ಯವಾದುದೆಂಬುವ ವಿಷಯದಲ್ಲಿ ತೋರಿಸಲ್ಪಟ್ಟಿರುತ್ತವೆ. ಇದಲ್ಲದೆ

ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮಸನಾತನಮ್ ।
ಉಪಾಸನಾರ್ಥಮಂತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ॥
ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಮ್ ।

ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಮ್ ॥
ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ವಾಸವಾದ್ಯಾಶ್ಚ ಲೋಕಪಾಃ ।
ಮುನಯಸ್ಸಿದ್ಧಗಂಧರ್ವಾ ದಾನವಾ ಮಾನವಾ ಸ್ತಥಾ ॥
ಸರ್ವೇಪಿ ಜ್ಞಾನಯೋಗೇನ ಸರ್ವಕಾರಣಕಾರಣಮ್ ।
ಪಶ್ಯಂತಿ ಹೃದಯೇ ಲಿಂಗಂ ಪರಮಾನಂದಲಕ್ಷಣಮ್ ॥
ತಸ್ಮಾತ್ಸರ್ವಪ್ರಯತ್ನೇನ ಶಾಂಕರಂ ಲಿಂಗಮುತ್ತಮಮ್ ।
ಅಂತರ್ವಿಭಾವಯೇದ್ವಿದ್ವಾನಶೇಷಕ್ಲೇಶಮುಕ್ತಯೇ ॥

(ಸಿದ್ಧಾಂತಶಿಖಾಮಣಿ ಪರಿ. ೬)

ಅಪರಿಚ್ಛಿನ್ನವೂ, ಅವ್ಯಕ್ತವೂ, ಸನಾತನವೂ, ಬ್ರಹ್ಮಪದವಾಚ್ಯವೂ ಆದ ಲಿಂಗವು ಭಕ್ತರ ಉಪಾಸನಾಸಿದ್ಧಿಗಾಗಿ ತನ್ನಲ್ಲಿರುವ ಮಾಯಾಶಕ್ತಿಯಿಂದ ಪರಿಚ್ಛಿನ್ನಸ್ವರೂಪವನ್ನು ಪಡೆಯಿತು. ಯಾವ ವಸ್ತುವಿನಲ್ಲಿ ಚರಾಚರಾತ್ಮಕವಾದೀ ಜಗತ್ತು ಲಯಹೊಂದುವುದೋ ಯಾವ ವಸ್ತುವಿನಿಂದ ಪುನಃ ಪುನಃ ಉತ್ಪತ್ತಿ ಹೊಂದುವುದೋ ಆ ವಸ್ತುವಿಗೇ ಲಿಂಗವೆಂದು ಹೇಳುತ್ತಾರೆ. ಬ್ರಹ್ಮ ವಿಷ್ಣು ರುದ್ರ ಇಂದ್ರಾದಿ ದಿಕ್ಪಾಲಕರು, ಸನಕಸನಂದಾದಿ ಮಹರ್ಷಿಗಳೂ, ಸಿದ್ಧರೂ, ಗಂಧರ್ವರೂ, ದಾನವರೂ, ಮಾನವರೂ ಆ ಲಿಂಗವನ್ನು ತಮ್ಮ ಹೃದಯದಲ್ಲಿ ಸದಾ ಧ್ಯಾನಿಸುತ್ತಿರುವರು. ಬ್ರಹ್ಮಜ್ಞಾನಿಗಳು ಪ್ರಯತ್ನದಿಂದ ಅಂಥ ಶಿವಲಿಂಗವನ್ನು ಧ್ಯಾನಿಸಿ ಸರ್ವಕ್ಲೇಶಗಳಿಂದ ಬಿಡುಗಡೆಹೊಂದುವರೆಂದು ಶ್ರೀ ರೇಣುಕ ಭಗವತ್ಪಾದರು ಅನುಜ್ಞೆಯಿತ್ತಿರುವರು.

**ಶಂಕೆ:**—ಈ ಮಂತ್ರವು ಲಿಂಗಧಾರಣವನ್ನು ಮುಖ್ಯಾರ್ಥದಿಂದ ಬೋಧಿಸಿದರೂ ಇತರ ದೇವತಾಪರವಾಗಿಯಾಗಲಿ ಅಥವಾ ಇತರ ದೇವತಾ ಸಂಬಂಧವಾದ ಶಂಖ ಚಕ್ರಧಾರಣ ಪರವಾಗಿಯಾಗಲಿ ಅರ್ಥಮಾಡಲು ಬಾಧಕವೇನೂ ಇಲ್ಲವಷ್ಟೆ!

**ಸಮಾಧಾನ:**—ಹಾಗೆ ಇತರ ದೇವತಾಪರವಾಗಿಯೂ, ಶಂಖ ಚಕ್ರಧಾರಣ ಪರವಾಗಿಯೂ ಅರ್ಥಮಾಡುವುದಾದರೆ ಶೈವಸಿದ್ಧಾಂತದ ರೀತಿಯಾಗಿ ತಪ್ತಶಂಖ ಚಕ್ರಧಾರಣವು ನಿಷೇಧಿಸಲ್ಪಟ್ಟಿರುವುದಲ್ಲದೆ ಪ್ರಕರಣ ವಿರೋಧವೆಂಬ ದೋಷವು ಸಹ ಉಂಟಾಗುತ್ತದೆ. ಹೇಗೆಂದರೆ—ಇದೇ ತೈತ್ತಿರೀಯ ಶ್ರುತಿಯ "ದಹರಂ ವಿಪಾಪ್ಮಂ........ತದುಪಾಸಿತವ್ಯಮ್"

ಎಂಬ ಮಂತ್ರದಿಂದ ದಹರಾಕಾಶದಲ್ಲಿ ಜ್ಯೋತಿರ್ಲಿಂಗಧಾರಣವನ್ನೂ "ನಿಧನಪತಯೇ ನಮಃ .... ಸರ್ವಲಿಂಗಗ್ಂ ಸ್ಥಾಪಯತಿ" ಎಂಬ ವಾಕ್ಯದಿಂದ ಸ್ಥೂಲದೇಹದಲ್ಲಿ ಇಷ್ಟಲಿಂಗಧಾರಣವನ್ನು ವಿಧಾನಮಾಡಿ, "ಪಾಣಿಮಂತ್ರಂ" ಎಂಬ ವಾಕ್ಯದಿಂದ ಹಸ್ತವೆಂಬ ಪೀಠದಲ್ಲಿ ಆ ಲಿಂಗ ಪೂಜೆಯನ್ನು ವಿಧಿಸಿದೆ. ಇಲ್ಲಿ "ಪವಿತ್ರಂ" ಎಂಬ ಪದವು ಶುಚ್ಯಶುಚಿಸಾಧಾರಣ ಕಾಲಗಳಲ್ಲಿ ಆ ಲಿಂಗಧಾರಣ ಪೂಜಾಪವಿತ್ರತೆಯನ್ನು ಪ್ರತಿಪಾದಿಸುತ್ತದೆ. ಇದೇ ಪ್ರಕರಣದಲ್ಲಿಯೇ "ಓಂ ನಮೋ ಬ್ರಹ್ಮಣೇ ಧಾರಣಂ" ಎಲೈ ಗುರುವೇ ನನಗೆ ಶಿವಲಿಂಗಧಾರಣಮಾಡಿ ಪವಿತ್ರಗೊಳಿಸೆಂದು ಶಿಷ್ಯನು ಪ್ರಾರ್ಥಿಸುವ ಮಂತ್ರಕ್ಕೂ ಲಿಂಗಧಾರಣ ಪರವಾಗಿ ಅರ್ಥಮಾಡದೆ ಇತರ ದೇವತಾಪರವಾಗಿ ಅಥವಾ ಶಂಖಚಕ್ರಧಾರಣ ಪರವಾಗಿ ಅರ್ಥ ಮಾಡುವುದು ಪ್ರಕರಣ ವಿರೋಧವೆಂಬ ದೋಷಯುಕ್ತವಾಗುವುದು. ಮತ್ತು ಓಂಕಾರಕ್ಕೆ ಮಂಗಲಾರ್ಥವನ್ನು ಹೇಳುವುದು ವೀರಶೈವ ಸಿದ್ಧಾಂತಕ್ಕೆ ಅನುಕೂಲವೂ ಆಗಿರುತ್ತದೆ. ಹೇಗೆಂದರೆ—

ಸಮೇಧಯತಿ ಶಂ ನಿತ್ಯಂ ಸರ್ವಾರ್ಥಾನಾಮುಪಕ್ರಮೇ ।
ಶಿವಮಿಚ್ಛನ್ ಮನುಷ್ಯಾಣಾಂ ತಸ್ಮಾದ್ದೇವಶ್ಶಿವಸ್ಸ್ಮೃತಃ ॥
ಸಮಾಭವಂತಿ ಮೇ ಸರ್ವೇ ಮಾನವಾಶ್ಚ ಸುರಾಶ್ಚ ಯೇ ।
ಶಿವೋಽಸ್ಮಿ ಸರ್ವಭೂತಾನಾಂ ಶಿವತ್ವಂ ತೇ ನ ಮೇ ಸುರಾಃ ॥

(ಮಹಾಭಾರತ–ಕರ್ಣಪರ್ವ)

ಶಿವನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಟ್ಟು ರಕ್ಷಿಸುವುದರಿಂದಲೂ, ಸಮಸ್ತ ದೇವದಾನವರಿಗೆ ಅಖಿಲ ಮಂಗಳವನ್ನುಂಟುಮಾಡುವುದರಿಂದಲೂ ಶಿವನೆಂಬ ಹೆಸರು ಬಂದಿರುವುದೆಂದು ಮಹಾಭಾರತದಲ್ಲಿ ಶಿವಪದದ ನಿರುಕ್ತಿಯಿರುವುದರಿಂದ ಶಿವನು ಸರ್ವ ಮಂಗಲಾರ್ಥಕನು, ಸರ್ವಮಂಗಲಪ್ರದನು, ಸರ್ವಮಂಗಲಸ್ವರೂಪನು ಎಂದು ಸಿದ್ಧವಾಗುವುದರಿಂದ ಓಂಕಾರವು ಮಂಗಲಾರ್ಥವುಳ್ಳದೆಂದು ಹೇಳುವುದು ಲಿಂಗಧಾರಣಪರವಾದ ಅರ್ಥಕ್ಕೆ ಪುಷ್ಟಿದಾಯಕವೇ ಆಗಿದೆ. ಇದಲ್ಲದೆ—

ನಮೋಽಸ್ತು ಬ್ರಹ್ಮಣೇ ತುಭ್ಯಮಾಚಾರ್ಯಾಯ ಮಹಾತ್ಮನೇ ।
ತನ್ನಿರಾಕರಣಂ ವಿಶ್ವಂ ಜನ್ಮತ್ವಾನ್ಮೃತ್ಯುನೈವ ಹಿ ॥
ಅನಿರಾಕರಣಂ ಬ್ರಹ್ಮ ಕಾರಣತ್ವಾಚ್ಚಿರಂತನಮ್ ।
ಅನಿರಾಕರಣಂ ಮೇಽಸ್ತು ಧಾರಣಂ ದೇಶಿಕೋತ್ತಮ ॥
ವೇದಶಾಸ್ತ್ರಪುರಾಣೇಷು ಪ್ರಸಿದ್ಧಂ ಕರ್ಣಯೋಶ್ಶ್ರುತಮ್ ।
ಅಹಂ ಧಾರಯಿತಾ ದೇವಂ ಭೂಯಾಸಂ ಸರ್ವಕಾರಣಮ್ ॥
ಬ್ರಹ್ಮವಿಷ್ಣ್ವಾದಯೋ ದೇವಾಃ ಪ್ರಸಿದ್ಧಾಶ್ಚ ತಥಾ ಶ್ರುತಾಃ ।
ತೇ ನಿರಾಕರಣಾಸ್ಸರ್ವೇ ಮೃತ್ಯುನಾ ಸರ್ವಶತ್ರುಣಾ ॥
ಮೇ ನಿರಾಕರಣಾಸ್ತ್ವೇತೇ ನ ಹಿ ಧಾರ್ಯಾಃ ಕದಾಚನ ।
ನಾಽಹಂ ಧಾರಯಿತಾ ದೇವಾನ್ ಭೂಯಾಸಂ ಮಜ್ಜತಸ್ಸುರಾನ್ ।
ನ ಶಕ್ನುವಂತಿ ಮಾಂ ತರ್ತುಂ ಮಜ್ಜಂತಂ ಮೃತ್ಯುಸಾಗರೇ ।
ಊರ್ಧ್ವಂ ಮಮೇದಮೋಂ ಲಿಂಗಂ ಮಾಂ ಚಾಮುಷ್ಯ ಸಮಾಶ್ರಯ ॥

(ಬ್ರಹ್ಮಾಂಡ ಪುರಾಣ)

ಗುರುವರ್ಯನೇ ಬ್ರಹ್ಮಸ್ವರೂಪನೂ, ಮಹಾತ್ಮನೂ ಆದ ನಿನ್ನನ್ನು ವಂದಿಸುವೆನು. ಕಣ್ಣಿಗೆ ಕಾಣುತ್ತಿರುವ ಪ್ರಪಂಚವು ಒಂದು ಕಾಲದಲ್ಲಿ ಉತ್ಪತ್ತಿಯಾಗಿರುವುದರಿಂದ ಮತ್ತೊಂದು ಕಾಲದಲ್ಲಿ ಮೃತ್ಯುದೇವಿಯಿಂದ ಕಬಳಿಸಲ್ಪಡುವುದು. ಸೃಷ್ಟಿಸ್ಥಿತಿ ಸಂಹಾರಕರ್ತೃವೂ ಬ್ರಹ್ಮಶಬ್ದವಾಚ್ಯವೂ ಆದ ಶಿವಲಿಂಗವು ಇದೆಲ್ಲಕ್ಕೂ ಕಾರಣವಾದುದರಿಂದ ನಿರಾಕರಿಸಲ್ಪಡತಕ್ಕದಲ್ಲ. ಇತರ ದೇವತೆಗಳು ನಿರಾಕರಣೀಯರು. ಇಂಥ ಅನಿರಾಕರಣೀಯವಾದ ಶಿವಲಿಂಗವನ್ನೇ ನಾನು ಧರಿಸುವೆನಲ್ಲದೆ ನಿರಾಕರಣೀಯರಾದ ಇತರ ದೇವತೆಗಳನ್ನೆಂದೂ ಧರಿಸಲಿಚ್ಛಿಸುವುದಿಲ್ಲ. ವೇದಶಾಸ್ತ್ರ ಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುವ ಈ ಶಿವಲಿಂಗವನ್ನು ಅಂಗದಲ್ಲಿ ಧರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡು. ಚತುರ್ಮುಖ ಬ್ರಹ್ಮಾದಿದೇವತೆಗಳು ಈ ಪರಶಿವಲಿಂಗದಿಂದ ಉತ್ಪನ್ನರಾದುದರಿಂದ ಅವರು ನಾಶವನ್ನೈದುವುದರಿಂದ ನಿರಾಕರಣೀಯರೇ ಆಗಿರುತ್ತಾರೆ. ಇಂಥ ದೇವತೆಗಳನ್ನೆಂದೂ ಧರಿಸಲಿಚ್ಛಿಸುವುದಿಲ್ಲ. ಜನನಮರಣರೂಪ ಸಂಸಾರದಲ್ಲಿ ಮಗ್ನರಾದ ದೇವತೆಗಳು ನನ್ನನ್ನು ದುಃಖಸಮುದ್ರದಿಂದ ದಾಂಟಿಸಲಾರರು. ಓಂಕಾರಪದವಾಚ್ಯ

ವಾದ ಶಿವಲಿಂಗವು ನನ್ನ ಅಂಗದಿಂದ ಯಾವಾಗಲೂ ವಿಯೋಗವಾಗದಂತೆ ಅನುಗ್ರಹಿಸು.

ಹೀಗೆ ಆ ಮಂತ್ರದಲ್ಲಿರುವ "ಬ್ರಹ್ಮಣೇ, ಧಾರಣಂ, ಭೂಯಾಸಂ, ಅನಿರಾಕರಣಂ, ಓಂ" ಇತ್ಯಾದಿ ಶಬ್ದಗಳನ್ನೇ ಅನುವಾದಮಾಡಿರುವುದರಿಂದ ಈ ಮಂತ್ರವು ಇಷ್ಟಲಿಂಗಧಾರಣವನ್ನು ವಿಧಿಸುವುದಲ್ಲದೆ ಇತರ ದೇವತೆಗಳ ಮತ್ತು ಶಂಖಚಕ್ರಾದಿ ಚಿಹ್ನೆಗಳ ಧಾರಣವನ್ನು ವಿಧಿಸುವುದಿಲ್ಲವೆಂದು ಘಂಟಾಘೋಷವಾಗಿ ದೃಢಪಡಿಸುತ್ತದೆ. ಮತ್ತು

ಮಹಾತಪಸ್ವಿನಾಂ ಚೈವ ಯತೀನಾಂ ಯೋಗಿನಾಂ ತಥಾ ।
ಶಾಂಭವಾನಾಂ ದ್ವಿಜಾತೀನಾಂ ಶೈವಾನಾಂ ಲಿಂಗಧಾರಿಣಾಮ್ ॥
ಮಹಾಪಾಶುಪತಾನಾಂ ಚ ಮನ್ಯಾಮವ್ರತಧಾರಿಣಾಮ್ ।
ಮೃತ್ಯುಂಜಯವ್ರತಾನಾಂ ಚ ಬ್ರಾಹ್ಮಣಾನಾಂ ಮಹಾತ್ಮನಾಮ್ ॥
ಪಂಚಾಕ್ಷರರತಾನಾಂ ಚ ಮತ್ಪ್ರೀತ್ಯಾ ದ್ವಿಜಸೇವಿನಾಮ್ ।
ಸರ್ವೇಷಾಮಪಿ ಸಿದ್ಧಾನಾಂ ನಿತ್ಯಂ ಧ್ಯೇಯಂ ಗಿರೀಶ್ವರ ॥
ಲಿಂಗಧಾರಣಕಂ ನಾಮ ವ್ರತಂ ಮಾಹೇಶ್ವರಾಭಿಧಮ್ ।
ಯೇ ಧಾರಣಂ ಪ್ರಕುರ್ವಂತಿ ತೇ ಯಾಂತಿ ಶಿವಮಂದಿರಮ್ ॥
ವ್ರತಂ ಪಾಶುಪತಂ ನಾಮ ಶಿವಲಿಂಗಾರ್ಚನಂ ಶುಭಮ್ ।
ಷಾಟ್ಕಾಲಿಕಂ ತ್ರಿಕಾಲಂ ವಾ ಏಕಕಾಲಂ ಮಹೇಶ್ವರಮ್ ।
ಯೇ ಪೂಜಯಂತಿ ವಿಪ್ರರ್ಷೇ ತೇ ಯಾಂತಿ ಶಿವಮಂದಿರಮ್ ॥

(ಸ್ಕಾಂದಪುರಾಣ, ಕುಮಾರಸಂಹಿತೆ, ಯಾತ್ರಾಖಂಡ.)

ಎಲೈ ಬ್ರಾಹ್ಮಣೋತ್ತಮನೆ! ತಪಸ್ವಿಗಳಾಗಲಿ, ಸಂನ್ಯಾಸಿಗಳಾಗಲಿ, ಯೋಗಿಗಳಾಗಲಿ, ಲಿಂಗಧಾರಿಗಳಾಗಲಿ, ಪಾಶುಪತರಾಗಲಿ, ದ್ವಿಜಾತಿಗಳಾಗಲಿ, ಶೈವರಾಗಲಿ, ಶಿವವ್ರತಿಗಳಾಗಲಿ, ಮೃತ್ಯುಂಜಯ ವ್ರತಿಗಳಾಗಲಿ, ಬ್ರಾಹ್ಮಣರಾಗಲಿ, ಪಂಚಾಕ್ಷರ ಮಂತ್ರಾಸಕ್ತರಾಗಲಿ ಎಲ್ಲರಿಗೂ ಶಿವಲಿಂಗಧಾರಣವೆಂಬ ಮಾಹೇಶ್ವರವ್ರತವನ್ನು ಅನುಗ್ರಹಿಸು. ಯಾರು ಲಿಂಗಧಾರಣವ್ರತವನ್ನು ಆಚರಿಸುವರೋ, ಯಾರು ಶಿವಲಿಂಗವನ್ನು ಆರು ಕಾಲಗಳಲ್ಲಾಗಲಿ, ಮೂರು ಕಾಲಗಳಲ್ಲಾಗಲಿ, ಏಕಕಾಲದಲ್ಲಾಗಲಿ

ಪೂಜಿಸುವರೋ ಅವರು ಪವಿತ್ರಾತ್ಮರಾಗಿ ಅವಿರಳ ಶಿವಾನಂದವನ್ನು ಪಡೆ ವರು. ದೇಹಾವಸಾನದಲ್ಲಿ ದೇವದೇವನಾದ ಶಿವನೊಳೇಕೀಭವಿಸುವರು. ಎಂದು ಲಿಂಗಧಾರಣದ ಮಹಿಮೆಯನ್ನು ಬಹಳವಾಗಿ ವರ್ಣಿಸಿರುತ್ತಾರೆ.

ಯಶ್ಛಂದಸಾಮೃಷಭೋ ವಿಶ್ವರೂಪಃ ಛಂದೋಭ್ಯೋಽಧ್ಯಮೃ
ತಾತ್ಸಂಬಭೂವ ಸಮೇಂದ್ರೋ ಮೇಧಯಾಸ್ಪೃಣೋತು । ಅ
ಮೃತಸ್ಯ ದೇವಧಾರಣೋ ಭೂಯಾಸಮ್ । ಶರೀರಂ ಮೇ
ವಿಚರ್ಷಣಂ ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ
ಭೂರಿ ವಿಶ್ರುತಂ ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ
ಶ್ರುತಂ ಮೇ ಗೋಪಾಯ ॥

(ತೈತ್ತಿರೀಯ ಶಾಖಾ ಪ್ರ. ೧. ಅ. ೪)

ಯಃ–ಯಾವ ಶಿವನು, ಛಂದಸಾಂ–ಸಮಸ್ತ ವಿದ್ಯೆಗಳಿಗೆ ಅಥವಾ ವೇದಗಳಿಗೆ, ಋಷಭಃ–ವೇದಕರ್ತನಾದುದರಿಂದಲೂ, ವೇದಪ್ರತಿಪಾದ್ಯ ನಾದುದರಿಂದಲೂ, ಸ್ವಾಮಿಯಾಗಿರುವನೋ, ಚ–ಮತ್ತು, ವಿಶ್ವರೂಪಃ- ಸರ್ವಾಂತರ್ಯಾಮಿಯಾಗಿರುವನೋ, ಅಮೃತಾತ್ - ಮುಕ್ತಿಗೋಸುಗ, ಛಂದೋಭ್ಯಃ–ವೇದಗಳಿಂದ, ಅಧಿಸಂಬಭೂವ–ಅಧಿಕವಾಗಿ ಜ್ಞಾಪಿಸಲ್ಪಟ್ಟ ವನಾಗಿರುವನೋ, ಸಃ ಇಂದ್ರಃ- ಪರಮೈಶ್ವರ್ಯಶಾಲಿಯಾದ . ಆ ಪರ ಶಿವನು, ಮಾ-ನನ್ನನ್ನು, ಮೇಧಯಾ-ಇಷ್ಟಲಿಂಗವನ್ನು ಧರಿಸಬೇಕೆಂಬ ಬುದ್ಧಿಯಿಂದ, ಸ್ಪೃಣೋತು–ಕೂಡಿರುವಂತೆ ಮಾಡಲಿ. ಅಥವಾ ಬಲ ವನ್ನುಂಟುಮಾಡಲಿ. ಅಮೃತಸ್ಯ-ಮೋಕ್ಷಕ್ಕೋಸುಗ, ದೇವಧಾರಣಃ– ದೇವಶಬ್ದವಾಚ್ಯವಾದ ಶಿವಲಿಂಗವನ್ನು ಧರಿಸುವವನಾಗಿ, ಭೂಯಾಸಂ- ಆಗುವೆನು. ಅತಃ–ಮುಕ್ತಿಸಾಧನವಾದ ಇಷ್ಟಲಿಂಗವನ್ನು ಧರಿಸುವುದರಿಂದ, ಮೇ–ನನ್ನ ಶರೀರವು, ವಿಚರ್ಷಣಂ–ಪಾಪರಹಿತವಾಗಲಿ. ಮೇ-ನನ್ನ, ಜಿಹ್ವಾ-ನಾಲಿಗೆಯು, ಮಧುಮತ್ತಮಾ-ಅತಿಶಯ ಮಧುರವಾದ ಮಾತು ಗಳನ್ನಾಡಲಿ. ಕರ್ಣಾಭ್ಯಾಂ-ಎರಡು ಕಿವಿಗಳಿಂದ, ಭೂರಿ–ಅಧಿಕವಾಗಿ, ವಿಶ್ರುತಂ – ಶಿವಜ್ಞಾನಯೋಗ್ಯವಾದ ಶಾಸ್ತ್ರಶ್ರವಣ ಮಾಡಲ್ಪಡಲಿ. ಬ್ರಹ್ಮಣಃ-ಶಿವನಿಗೆ, ಕೋಶೋಽಸಿ-ಖಡ್ಗಕ್ಕೆ ಆಶ್ರಯವಾದ ಒರೆಯಂತೆ ಅಧಿ ಷ್ಠಾನನಾಗಿರುವೆ, ಮೇಧಯಾ-ಅಜ್ಞಾನಾವೃತವಾದ ಬುದ್ಧಿಯಿಂದ, ಪಿಹಿತಃ-

ಆವರಿಸಲ್ಪಟ್ಟವನಾಗಿರುವೆನು. ಮೇ-ನನಗೆ, ಶ್ರುತಂ-ಭಕ್ತಿಜ್ಞಾನಾದಿಗಳನ್ನು ಶ್ರವಣಮಾಡಿಸಿ, ಗೋಪಾಯ-ಇಷ್ಟಲಿಂಗವು ದೇಹದಿಂದ ವಿಯೋಗವಾಗ ದಂತೆ ರಕ್ಷಿಸು ಎಂದು ಈ ಮಂತ್ರವು ಲಿಂಗಧಾರಣವನ್ನೂ ಮುಕ್ತಿಯನ್ನೂ ಪ್ರತಿಪಾದಿಸುತ್ತದೆ.

**ಶಂಕಾ:**—ಈ ಮಂತ್ರದಲ್ಲಿ ಲಿಂಗವೆಂಬ ಪದವಿಲ್ಲ. **"ದೇವ ಧಾರಣಃ"** ಎಂಬ ಪದದಲ್ಲಿರುವ **ದೇವ** ಎಂಬ ಪದಕ್ಕೆ ಅವಯುವಶಕ್ತಿ ಯಿಂದ ಶಿವಲಿಂಗವೆಂದು ಅರ್ಥಮಾಡುವುದಾದರೆ ಇತರ ದೇವತಾಪರವಾದ ಅರ್ಥವನ್ನಾದರೂ ಮಾಡಬಹುದು. ಆಗ ಲಿಂಗಧಾರಣವು ನಿಯಮದಿಂದ ಸಿದ್ಧಿಸುವುದಿಲ್ಲ.

**ಸಮಾಧಾನ:**—ಮುಖ್ಯಾರ್ಥವೃತ್ತಿಯಿಂದ ದೇವಶಬ್ದವು ಪರಶಿವ ನಲ್ಲಿ ರೂಢವಾಗಿರುವಂತೆ ಇತರ ದೇವತೆಗಳಲ್ಲಿ ರೂಢವಾಗಿಲ್ಲ. ಈ ವಿಷಯ ದಲ್ಲಿ **"ತಂ ದೇವತಾನಾಂ ಪರಮಂ ಚ ದೈವತಂ"** ದೇವತೆಗಳೊಳಗೆಲ್ಲ ಶಿವನೇ ಪರಮದೇವತೆಯು. **"ತಸ್ಮಾದ್ದೇವ ಶ್ಶಿವಸ್ಸ್ಮೃತಃ"** ಆದುದ ರಿಂದ ಶಿವನೇ ದೇವಪದದ ಮುಖ್ಯಾರ್ಥವು. ಹೀಗೆ ಅನೇಕ ಗ್ರಂಥಗಳು ದೇವಪದಕ್ಕೆ ಪರಶಿವನೆಂದು ಹೇಳುತ್ತವೆ. **"ದೇವಂ ಧರತೀತಿ ದೇವ ಧಾರಣಃ"** ಎಂಬ ವ್ಯುತ್ಪತ್ತಿಯಿಂದ ಕರ್ತರಿಲ್ಯುಟ್ ಪ್ರತ್ಯಯ ಬಂದು ದೇವಧಾರಣ ಎಂದು ಆಗಿರುತ್ತದೆ. **"ಅಮೃತಸ್ಯ ದೇವಧಾರಣೋ ಭೂಯಾಸಂ"** ಮೋಕ್ಷಕ್ಕೋಸ್ಕರ ದೇವಶಬ್ದವಾಚ್ಯವಾದ ಶಿವಲಿಂಗವನ್ನು ಧರಿಸುವೆನು ಎಂಬ ಅರ್ಥವು ಸಿದ್ಧವಾಗುತ್ತದೆ. ಹಾಗಿಲ್ಲದೆ ದೇವಶಬ್ದವನ್ನು ನಾರಾಯಣಾದಿ ಇತರ ದೇವತಾ ಪರವಾಗಿ ಹೇಳಿದರೆ ಅಂತಹ ದೇವತೆ ಗಳನ್ನು ದೇಹದಲ್ಲಿ ಧರಿಸಬೇಕೆಂಬ ಪ್ರಮಾಣಗ್ರಂಥಗಳಾಗಲಿ, ಲೋಕ ವ್ಯವಹಾರವಾಗಲಿ, ಕಂಡುಬರುವುದಿಲ್ಲ. ಇದರಿಂದ ದೇವಶಬ್ದದ ಮುಂದಿ ರುವ ಧಾರಣಪದವೂ ಸಹ ವ್ಯರ್ಥವಾಗುತ್ತದೆ. ದೇಹದಲ್ಲಿ ಶಿವಲಿಂಗ ಧಾರಣವನ್ನಾದರೂ ವೇದಾಗಮ ಪುರಾಣಾದಿಗಳು ಸ್ಪಷ್ಟವಾಗಿ ಹೇಳುತ್ತಿರು ವುವಲ್ಲದೆ ಲೋಕದಲ್ಲಿ ಅನಾದಿಕಾಲದಿಂದ ಅಂಥ ಲಿಂಗಧಾರಿಗಳನ್ನು ನೋಡುತ್ತಿರುವೆವು.

" ವ್ರತಮೇತತ್ಪಾಶುಪತಂ ಪಶುಪಾಶವಿಮೋಕ್ಷಾಯ ।
ವ್ರತಮೇತಚ್ಛಾಂಭವಂ ತತ್ಸಮಾಚರೇನ್ಮುಮುಕ್ಷು
ರ್ನಪುನರ್ಭವಾಯ ತೇಷಾಮೇತೇಷಾಂ ಬ್ರಹ್ಮವಿದಾಂ
ಪರಃ ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ "

ಎಂದು ಕೈವಲ್ಯ, ಅಥರ್ವಶಿರ, ಕಾಲಾಗ್ನಿರುದ್ರ, ಮುಂಡಕಾದ್ಯುಪನಿಷತ್ತುಗಳು ಲಿಂಗಧಾರಣರೂಪವಾದ ಪಾಶುಪತವ್ರತವನ್ನು ಅವಲಂಬಿಸಿದವನೇ ಬ್ರಹ್ಮವಿದ್ಯೆಗಧಿಕಾರಿಯಾಗುವನೆಂದು ಹೇಳುತ್ತವೆ. ಬ್ರಹ್ಮಸೂತ್ರದ " ಅಥಾಽತೋ ಬ್ರಹ್ಮ ಜಿಜ್ಞಾಸಾ " ಎಂಬ ಪ್ರಥಮಸೂತ್ರದ " ಅಥ " ಶಬ್ದಕ್ಕೆ ವೀರಶೈವ ಭಾಷ್ಯಕಾರರಾದ ಶ್ರೀಪತಿ ಪಂಡಿತರು—

ನಿಗಮಾಗಮೋಭಯವೇದಾಂತಪ್ರತಿಪಾದಿತ ಭಕ್ತಿಕ್ರಿಯಾ
ಜ್ಞಾನ ಕಾಂಡತ್ರಯವಿಹಿತ ಸ್ಥೂಲಸೂಕ್ಷ್ಮಚಿದಚಿತ್ಪ್ರಕಾಶಕ
ಷಟ್‌ಸ್ಥಲಪರಶಿವಸಾಕ್ಷಾತ್ಕಾರಕಾರಣ ಬಹುಜನ್ಮಕೃತ
ಶಿವಾರ್ಪಿತಯಜನಯಾಜನತಪೋಧ್ಯಾನಾದ್ಯನೇಕ
ಪುಣ್ಯಪೂರ್ವಫಲಕ ಶರೀರತ್ರಯಗತ ಮಲತ್ರಯ
ಧ್ವಂಸಕ ಕರುಣಾಕಾರುಣ್ಯಕಲ್ಯಾಣವಿಭೂತಿತ್ರಯಪ್ರತಿ
ಪಾದಕ ಅಷ್ಟಾವರಣ ಪಂಚಾಚಾರ ಸದ್ಗುರು
ಕರುಣಾಕಟಾಕ್ಷ ಲಬ್ಧ ಶಕ್ತಿಪಾತಾದ್ಯವಚ್ಛಿನ್ನ
ಪರಶಿವೇಷ್ಟಲಿಂಗಧಾರಣಾತ್ಮಕ ಪಾಶುಪತ
ದೀಕ್ಷಾನಂತರಂ "

(೧।೧।೧) (ಶ್ರೀಕರ ಭಾಷ್ಯ)

ಶ್ರೀ ಗುರುವು ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳಲ್ಲಿ ಅನಾದಿಕಾಲದಿಂದಾವರಿಸಿರುವ ಆಣವ, ಮಾಯೀಯ, ಕಾರ್ಮಿಕ ಎಂಬ ಒಂದರ ಮೇಲೊಂದಿರುವ ಮಲತ್ರಯಗಳನ್ನು ವೇಧಾ, ಮನು, ಕ್ರಿಯಾ ಎಂಬ ಮೂರು ದೀಕ್ಷಾಸಂಸ್ಕಾರಗಳಿಂದ ತೊಲಗಿಸಿ ಶಿಷ್ಯನ ಶಕ್ತಿಪಾತವನ್ನು ನೋಡಿ ಇಷ್ಟಲಿಂಗಧಾರಣರೂಪವಾದ ಶಿವದೀಕ್ಷೆಯನ್ನು ಕೊಟ್ಟು ಗುರುಲಿಂಗ ಜಂಗಮಪಾದೋದಕ ಪ್ರಸಾದ, ಮಂತ್ರ, ರುದ್ರಾಕ್ಷ, ಭಸ್ಮಗಳೆಂಬ ಅಷ್ಟಾವರಣ ಸ್ವರೂಪವನ್ನು, ಭೃತ್ಯಾಚಾರ,

ಗಣಾಚಾರ, ಸದಾಚಾರ, ಲಿಂಗಾಚಾರ, ಶಿವಾಚಾರಗಳೆಂಬ ಪಂಚಾಚಾರಗಳನ್ನೂ ಉಪದೇಶಿಸಿದ ಬಳಿಕ ಬ್ರಹ್ಮಜಿಜ್ಞಾಸೆಗೆ ಅರ್ಹನಾಗುವನು. ಮತ್ತು

ಲಿಂಗಾಂಗಸಂಗಿನಾಂ ಚೈವ ಪುನರ್ಜನ್ಮ ನ ವಿದ್ಯತೇ ।
ಏಷ ಪಾಶುಪತೋ ಯೋಗಃ ಪಶುಪಾಶನಿವೃತ್ತಯೇ ॥
ಸರ್ವವೇದಾಂತಸಾರೋಽಯಂ ಅತ್ಯಾಶ್ರಮ ಇತಿ ಸ್ಮೃತಃ ।
ಪರಬ್ರಹ್ಮಾಭಿಧಂ ಲಿಂಗಂ ಪಶುಪಾಶವಿಮೋಚಕಮ್ ॥
ಯೇ ಧಾರಯಂತಿ ಸದ್ಭಕ್ತ್ಯಾ ಸ ಪಾಶುಪತ ಉಚ್ಯತೇ ।
ಶರೀರತ್ರಿತಯೇ ಭಕ್ತ್ಯಾ ಲಿಂಗಂ ಪರಶಿವಾತ್ಮಕಮ್ ॥
ಯೇ ಧ್ಯಾತ್ವಾ ವಿಚರೇದ್ಭೂಮೌ ಸ ಪಾಶುಪತ ಉಚ್ಯತೇ ।
ಲಿಂಗಂ ಶಿವೋ ಭವೇತ್ ಕ್ಷೇತ್ರಂ ಅಂಗಂ ಸಂಯೋಗ ಆಶ್ರಯಃ ॥
ತಸ್ಮಾಲ್ಲಿಂಗಾಂಗಸಂಯುಕ್ತೋ ಯೋಽಪಿ ಸೋಽತ್ಯಾಶ್ರಮೀ ಭವೇತ್ ।
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।
ಯಸ್ತು ಲಿಂಗಾಂಗಸಂಯುಕ್ತಸ್ಸಏವಾತ್ಯಾಶ್ರಮೀ ಭವೇತ್ ॥

(ಲೈಂಗ್ಯ, ಸ್ಕಾಂದ, ಕೂರ್ಮಪುರಾಣ)

ಲಿಂಗಾಂಗಿಗಳಿಗೆ ಪುನರ್ಜನ್ಮವಿಲ್ಲ, ಲಿಂಗಧಾರಣರೂಪವಾದ ಈ ಪಾಶುಪತವ್ರತವು ಸಂಸಾರಬಂಧವನ್ನು ನಿವೃತ್ತಿಗೊಳಿಸುವುದು, ಲಿಂಗಧಾರಣವೇ ಸಕಲ ಉಪನಿಷತ್ತುಗಳ ಸಾರವು. ಯಾವನು ಬ್ರಹ್ಮವಾಚ್ಯವಾದ ಶಿವಲಿಂಗವನ್ನು ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಲ್ಲಿ ಭಕ್ತಿಯಿಂದ ಧರಿಸುವನೋ, ಯಾವನು ಆ ಬ್ರಹ್ಮಲಿಂಗವನ್ನು ಧ್ಯಾನಿಸುತ್ತ ಭೂಮಿಯಲ್ಲಿ ಸಂಚರಿಸುವನೋ ಅವನು ಪಾಶುಪತನೆನಿಸುವನು. ಪರಶಿವನೇ ಲಿಂಗವು, ಶರೀರವೇ ಅಂಗವು, ಈ ಅಂಗಲಿಂಗಗಳ ಸಂಯೋಗವೇ ಆಶ್ರಯವು. ಬ್ರಹ್ಮಚಾರಿಯಾಗಿರಲಿ, ಗೃಹಸ್ಥನಾಗಿರಲಿ, ವಾನಪ್ರಸ್ಥನಾಗಿರಲಿ, ಸಂನ್ಯಾಸಿಯಾಗಿರಲಿ ಅಂಗದಲ್ಲಿ ಲಿಂಗವನ್ನು ಧರಿಸಿದವನೇ ಅತ್ಯಾಶ್ರಮಿಯೆನಿಸುವನು.

ಅಂತರ್ಧಾರಣಶಕ್ತೋ ವಾ ಹ್ಯಶಕ್ತೋ ವಾ ದ್ವಿಜೋತ್ತಮಃ।
ಸಂಸ್ಕೃತ್ಯ ಗುರುಣಾ ದತ್ತಂ ಶೈವಂ ಲಿಂಗಮುರಸ್ಥಲೇ ॥
ಧಾರ್ಯಂ ವಿಪ್ರೇಣ ಮುಕ್ತ್ಯರ್ಥಮೇವಂ ವೇದವಿದೋ ವಿದುಃ ।

(ಸದಾನಂದೋಪನಿಷತ್)

ದ್ವಿಜನು ಹೃದಯಾಕಾಶದಲ್ಲಿ ಜ್ಯೋತಿರ್ಲಿಂಗವನ್ನು ಧರಿಸುವ ಸಾಮರ್ಥ್ಯವುಳ್ಳವನಾಗಿರಲಿ ಅಥವಾ ಇಲ್ಲದಿರಲಿ ಶ್ರೀ ಗುರುವಿನಿಂದ ಸಂಸ್ಕರಿಸಿ ಅನುಗ್ರಹಿಸಲ್ಪಟ್ಟ ಇಷ್ಟಲಿಂಗವನ್ನು ಮಾತ್ರ ವಕ್ಷಸ್ಥಲದಲ್ಲಿ ಧರಿಸಬೇಕು ಎಂದು ಸಾಮಜೈಗಿಷೀಯ ಶಾಖೆಯಲ್ಲಿರುವ ಸದಾನಂದೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತದೆ—

ಯೋ ವಾಮಹಸ್ತಾರ್ಪಿತಲಿಂಗಮೇಕಂ ಪರಾತ್ಪರಂ
ಧಾರಯತೇ ಸತತಂ ವಿಪ್ರಃ ಕ್ಷತ್ರಿಯೋ ವಾ ।
ತಸ್ಯೈವ ಲಭ್ಯಃ ಪರಮೇಶ್ವರೋಽಸೌ ನಿರಂಜ
ನಃ ಪರಮಂ ಸಾಮ್ಯಮುಪೈತಿ ದಿವ್ಯಂ ॥

(ಐಶ್ವರ್ಯಶಾಖೆ)

ಅರ್ಥ :—ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ಗುರುವಿನಿಂದ ವಾಮಹಸ್ತದಲ್ಲಿಡಲ್ಪಟ್ಟ ಶಿವಲಿಂಗವನ್ನು ಯಾವನು ತಪ್ಪದೆ ಧರಿಸುತ್ತಾನೆಯೋ ಅವನು ನಿರಂಜನಸ್ವರೂಪನಾದ ಪರಶಿವನ ಸಾದೃಶ್ಯವನ್ನು ಪಡೆಯುವನೆಂದು ಅಥರ್ವಣವೇದ ಐಶ್ವರ್ಯಶಾಖೆಯಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂದ " **ಯಶ್ಛಂದಸಾಂ........ಗೋಪಾಯ** " ಎಂಬ ಮಂತ್ರವು " **ಸರ್ವಲಿಂಗಂ ಸ್ಥಾಪಯತಿ** " ಎಂಬ ಅದೇ ತೈತ್ತಿರೀಯ ಮಂತ್ರದಲ್ಲಿ ಹೇಳಿರುವ ಇಷ್ಟಲಿಂಗಧಾರಣವನ್ನು ಅನುವಾದಮಾಡುತ್ತ " **ಅಮೃತಸ್ಯ ದೇವಧಾರಣೋ ಭೂಯಾಸಂ** " ಮೋಕ್ಷಕ್ಕೋಸ್ಕರವಾಗಿ ಲಿಂಗವನ್ನು ಧರಿಸುವೆನು, ಎಂದು ಲಿಂಗಧಾರಣದ ಪ್ರಯೋಜನವನ್ನು ತೋರಿಸಿ ತನ್ನ ನಾಲಿಗೆಯು ಶಿವಸ್ತುತಿಗಳನ್ನು ಮಾಡಲಿ, ಕಿವಿಗಳು ಶಿವಸಂಬಂಧವಾದ ಕಥೆಗಳನ್ನು ಕೇಳಲಿ, ಮನಸ್ಸು ಲಿಂಗದಲ್ಲಿಯೇ ಆಸಕ್ತವಾಗಿರಲಿ, ಜನನ

ಮರಣರೂಪವಾದ ಕರ್ಮಪಾಶವು ಹರಿಯಲೆಂದು ಪ್ರಾರ್ಥಿಸಿರುವುದನ್ನು ನೋಡಿದರೆ ಲಿಂಗಧಾರಣವನ್ನೂ ಅದರ ಫಲವನ್ನೂ ಧೃಢಪಡಿಸುತ್ತದೆ.

**ಶಂಕೆ :—** ಲಿಂಗಧಾರಣ ಪೂರ್ವಕವಾಗಿ ಮೋಕ್ಷರೂಪ ಪುರುಷಾರ್ಥವನ್ನು ತೋರಿಸಿರುವ "**ಯಶ್ಛಂದಸಾಂ.... ಅಮೃತಸ್ಯ ದೇವಧಾರಣೋ ಭೂಯಾಸಂ**" ಎಂಬ ಮಂತ್ರದ ಹಿಂದೆ "**ದಹರಂ ವಿಪಾಪ್ಮಂ**" "**ಪದ್ಮಕೋಶಂ**" ಮುಂತಾದ ಶ್ರುತಿಗಳು ಹೃದಯಕಮಲವನ್ನು ತೋರಿಸಿ "**ತಸ್ಯಾಂತೇ ಸುಷಿರಂ**" ಎಂದು ಆ ಕಮಲದಲ್ಲಿ ಅತಿ ಸೂಕ್ಷ್ಮವಾದ ಪ್ರದೇಶವನ್ನು ತೋರಿಸುತ್ತ ಮುಂದೆ "**ತಸ್ಯ ಮಧ್ಯೇ ಮಹಾವಹ್ನಿಃ**" ಎಂದು ಆರಂಭಮಾಡಿ "**ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ**" ಎಂದು ಬ್ರಹ್ಮರಂಧ್ರದಲ್ಲಿ ಪರಮಾತ್ಮನಿರುವನೆಂದು ಹೇಳುತ್ತದೆ. ಈ ವಾಕ್ಯಗಳ ಪರ್ಯಾಲೋಚನೆಯಿಂದ ಮುಂದಿರುವ "**ಯಶ್ಛಂದಸಾಂ.... ....ಅಮೃತಸ್ಯ ದೇವಧಾರಣೋ ಭೂಯಾಸಂ**" ಎಂಬ ಮಂತ್ರಕ್ಕೂ ಬ್ರಹ್ಮರಂಧ್ರಸ್ಥವಾದ ಜ್ಯೋತಿರ್ಲಿಂಗಧಾರಣವೆಂಬ ಅರ್ಥವೇ ಸಾಧುವಾದುದು. ಹಾಗಿಲ್ಲದೆ ಇಷ್ಟಲಿಂಗಧಾರಣವೆಂದು ಅರ್ಥಮಾಡುವುದಾದರೆ ಪೂರ್ವೋತ್ತರ ಶ್ರುತಿವಾಕ್ಯಗಳಿಗೆ ವಿರೋಧವು ಸಂಭವಿಸಬೇಕಾಗುವುದು. ಇದಲ್ಲದೆ ಈ ಶ್ರುತಿಯಲ್ಲಿ ಲಿಂಗವೆಂಬ ಪದವೂ ಸಹ ಕಾಣುವುದಿಲ್ಲ.

**ಸಮಾಧಾನ :—** "**ಯಶ್ಛಂದಸಾಂ........ದೇವಧಾರಣೋ ಭೂಯಾಸಂ**" ಎಂಬ ಮಂತ್ರಕ್ಕೆ ಇಷ್ಟಲಿಂಗಧಾರಣವೆಂಬ ಅರ್ಥವೇ ನ್ಯಾಯವಾದುದು. ಹೇಗೆಂದರೆ "**ಪದ್ಮಕೋಶಪ್ರತೀಕಾಶಂ, ತಸ್ಯಾಂತೇ ಸುಷಿರಂ, ಪರಮಾತ್ಮಾ ವ್ಯವಸ್ಥಿತಃ**" ಇತ್ಯಾದಿ ಸೂಕ್ಷ್ಮ ಬ್ರಹ್ಮೋಪಾಸನೆಯನ್ನು ಹೇಳುವ ಶ್ರುತಿಗಳು "**ಅಮೃತಸ್ಯ**" ಎಂಬ ಶ್ರುತಿಗೆ ಹೇಗೆ ಪೂರ್ವ ಶ್ರುತಿಗಳಾಗಿರುತ್ತವೆಯೋ ಹಾಗೆ "**ಸರ್ವಲಿಂಗಂ ಸ್ಥಾಪಯತಿ**" ಎಂಬ ಶ್ರುತಿಯೂ ಸಹ ಪೂರ್ವಶ್ರುತಿಯಾಗಿರುವುದರಿಂದ ಈ ಶ್ರುತಿಯಲ್ಲಿ ಹೇಳಿರುವ ಇಷ್ಟಲಿಂಗಧಾರಣದಿಂದಾಗುವ ಮೋಕ್ಷರೂಪವಾದ ಪ್ರಯೋಜನವನ್ನು ತೋರಿಸದೇಹೋದರೆ ಇಂತಹ ಇಷ್ಟಲಿಂಗಧಾರಣದ ವಿಷಯದಲ್ಲಿ ಯಾರಿಗೂ ಪ್ರವೃತ್ತಿಯಾಗಲಾರದು. ಆದುದರಿಂದ ಲಿಂಗಧಾರಣದಿಂದಾಗುವ ಪ್ರಯೋ

ಜನವನ್ನು ತೋರಿಸುವುದಕ್ಕಾಗಿ "ಅಮೃತಸ್ಯ ದೇವಧಾರಣೋ ಭೂಯಾಸಂ" ಎಂಬ ಉತ್ತರ ವಾಕ್ಯವು ಹೊರಟಿರುವುದೆಂದು ಹೇಳುವುದರಿಂದ ಪೂರ್ವೋತ್ತರವಾಕ್ಯಗಳಿಗೆ ವಿರೋಧವು ಸಂಭವಿಸುವುದಿಲ್ಲವೆಂದು ತಿಳಿಯ ತಕ್ಕುದು.

ಶಂಕೆ :—

ಜ್ಞಾನಂ ಮಹೇಶ್ವರಾದಿಚ್ಛೇನ್ಮುಕ್ತಿಮಿಚ್ಛೇಜ್ಜನಾರ್ದನಾತ್ ।

(ಸ್ಮೃತಿ)

ಜ್ಞಾನವನ್ನು ಶಿವನಿಂದ ಪಡೆಯಬೇಕು, ಮುಕ್ತಿಯನ್ನು ನಾರಾಯಣನಿಂದ ಪಡೆಯಬೇಕು, ಎಂಬ ವಾಕ್ಯಪರ್ಯಾಲೋಚನೆಯಿಂದ ಪರಮ ಪುರುಷಾರ್ಥವೆನಿಸಿದ ಮೋಕ್ಷ ಸುಖವನ್ನುಂಟುಮಾಡುವ ಶಕ್ತಿಯು ನಾರಾಯಣನಿಗಲ್ಲದೆ ಶಿವನಿಗಿಲ್ಲವೆಂದು ತಿಳಿದುಬರುವುದರಿಂದ ಲಿಂಗಧಾರಣವು ಮುಕ್ತಿಸಾಧನವಲ್ಲ ;

ಸಮಾಧಾನ :—

ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ
ಈಶಂ ಜ್ಞಾತ್ವಾ ಅಮೃತಾ ಭವಂತಿ
ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ॥

(ಶ್ವೇತಾಶ್ವತರ, ಅಥರ್ವಶಾಖಾ)

ಪರಶಿವನನ್ನು ತಿಳಿದು ಶಾಂತಿಯ (ಮುಕ್ತಿಯ) ನ್ನು ಪಡೆಯುವನು. ಶಿವನನ್ನು ತಿಳಿದವರು ಮೋಕ್ಷವನ್ನು ಹೊಂದುವರು. ಶಿವನೋರ್ವನೇ ಸರ್ವಶುಭಾವಹನಾದುದರಿಂದ ಇತರ ದೇವತಾದಿಗಳನ್ನು ತ್ಯಜಿಸಿ ಶಿವನನ್ನೇ ಧ್ಯಾನಿಸಬೇಕು.

ಹೀಗೆ ಅನಂತ ಶ್ರುತಿಗಳು ಶಿವನಿಗೆ ಮೋಕ್ಷದಾಯಕತ್ವವನ್ನು ಹೇಳಿರುವುದರಿಂದ ಇಲ್ಲಿ ಶ್ರುತಿಗಳಿಗೂ, ಸ್ಮೃತಿಗಳಿಗೂ ವಿರೋಧವುಂಟಾಗುವುದರಿಂದ ಯಾವುದಕ್ಕೆ ಪ್ರಾಮಾಣ್ಯವನ್ನು ಹೇಳಬೇಕೆಂದು ಸಂಶಯವನ್ನು ಪರಿಹರಿಸುವುದಕ್ಕಾಗಿ ಪೂರ್ವಮೀಮಾಂಸಾಶಾಸ್ತ್ರಕಾರರು "ವಿರೋಧಾಧಿಕರಣ" ಎಂಬ ಒಂದು ನ್ಯಾಯವನ್ನು ತೋರಿಸಿರುತ್ತಾರೆ. ಏನಂದರೆ

"ವಿರೋಧೇ ತ್ವನಪೇಕ್ಷಂ ಸ್ಯಾದಸತಿಹ್ಯನುಮಾನಂ"

ಶ್ರುತಿಗಳಿಗೂ, ಸ್ಮೃತಿಗಳಿಗೂ ಪರಸ್ಪರ ವಿರೋಧ ಸಂಭವಿಸಿದರೆ ಶ್ರುತಿಗಳೇ ಪ್ರಬಲಗಳಾಗುತ್ತವೆ. ಅಂತಹ ಶ್ರುತಿವಾಕ್ಯಗಳಿಲ್ಲದ ಸ್ಥಲದಲ್ಲಿ ಸ್ಮೃತಿ ವಾಕ್ಯಗಳೇ ಪ್ರಬಲಗಳಾಗುತ್ತವೆ.

ಉದಾಹರಣೆ :—

" ಔದುಂಬರೀಂ ಸ್ಪೃಶನ್ನುದ್ಗಾಯೇತ್ "

ಯಾಗಪ್ರಕರಣದಲ್ಲಿ ಔದುಂಬರ (ಅತ್ತಿ) ವೃಕ್ಷವನ್ನು ಮುಟ್ಟಿ ಗಾನಮಾಡ ಬೇಕೆಂದು ಶ್ರುತಿಯು ಹೇಳಿರುತ್ತದೆ.

" ಔದುಂಬರೀ ಸರ್ವಾವೇಷ್ಟವ್ಯಾ "

ಔದುಂಬರ ವೃಕ್ಷವನ್ನೆಲ್ಲಾ ಆಚ್ಛಾದಿಸ(ಮುಚ್ಚ)ಬೇಕೆಂದು ಸ್ಮೃತಿಯು ಹೇಳುತ್ತದೆ. ಇಲ್ಲಿ ಶ್ರುತಿವಾಕ್ಯಕ್ಕೂ ಸ್ಮೃತಿವಾಕ್ಯಕ್ಕೂ ಪರಸ್ಪರವಿರೋಧವು ಸಂಭವಿಸುವುದು. ಆದರೆ ಶ್ರುತಿಯಲ್ಲಿ ಹೇಳಿರುವಂತೆ ಔದುಂಬರ ವೃಕ್ಷದ ಸ್ಪರ್ಶನವು ಮಾತ್ರ ಪ್ರಬಲವೊ? ಸ್ಮೃತಿಯಲ್ಲಿ ಹೇಳಿರುವಂತೆ ಆ ಔದುಂಬರ ವೃಕ್ಷವನ್ನೆಲ್ಲಾ ಆಚ್ಛಾದಿಸುವುದೇ ಪ್ರಬಲವೊ? ಎಂಬ ಸಂಶಯವುಂಟಾಗಿ ಸ್ಪರ್ಶನವಿಧಾಯಕವಾದ ಶ್ರುತಿವಾಕ್ಯವೇ ಪ್ರಬಲವಾಗುವುದು. ಸರ್ವಾ ವೇಷ್ಟನ (ಆಚ್ಛಾದಿಸುವುದು) ವಿಧಾಯಕವಾದ ಸ್ಮೃತಿವಾಕ್ಯವು ದುರ್ಬಲ ವಾಗುತ್ತದೆ. ಅದರಂತೆ "ಮುಕ್ತಿಮಿಚ್ಛೇತ್ ಜನಾರ್ದನಾತ್ " 'ನಾರಾ ಯಣನಿಂದ ಮೋಕ್ಷವು ದೊರೆಯುತ್ತದೆ' ಎಂಬ ಸ್ಮೃತಿವಾಕ್ಯಕ್ಕಿಂತಲೂ " ಶಿವ ಏಕೋ ಧ್ಯೇಯಃ " "ಈಶಂ ಜ್ಞಾತ್ವಾ ಅಮೃತಾ ಭವಂತಿ " ಇತ್ಯಾದಿ ಶ್ರುತಿವಾಕ್ಯಗಳೇ ಪ್ರಬಲಗಳಾಗುತ್ತವೆಯಾದುದರಿಂದ ಶಿವಲಿಂಗಕ್ಕೆ ಮುಕ್ತಿದಾಯಕತ್ವವು ಸಿದ್ಧವಾಗುತ್ತದೆ. ಇದರಿಂದ " ಅಮೃತಸ್ಯ ದೇವಧಾರಣಃ.........ಗೋಪಾಯ " ಎಂಬ ಮಂತ್ರಕ್ಕೆ ಮೋಕ್ಷಸಾಧನೆ ಗಾಗಿ ಲಿಂಗವನ್ನು ಧರಿಸುವನೆಂಬ ಅರ್ಥವು ಸ್ಪಷ್ಟವಾಗುತ್ತದೆ.

ಶಂಕೆ :—ಈ ಮಂತ್ರದಲ್ಲಿ " ಸ ಮೇಂದ್ರೋ ಮೇಧಯಾ ಸ್ಪೃಣೋತು " 'ಶಿವಲಿಂಗವು ನನಗೆ ಪ್ರಜ್ಞಾಶಕ್ತಿಯನ್ನು ಕೊಡಲಿ' ಎಂಬು ದೊಂದು ವಿಶೇಷ ಪದವಿರುತ್ತದೆ. ಈ ಪ್ರಜ್ಞಾಶಕ್ತಿ ಎಂಬುದು ದೇಹ ದೊಳಗಿನ ಅಂತಃಕರಣನಿಷ್ಠಧರ್ಮವೇ ಹೊರತು ಬಾಹ್ಯಪದಾರ್ಥವಲ್ಲ.

ಆದುದರಿಂದ ಈ ಮಂತ್ರವು ದಹರಾಕಾಶದಲ್ಲಿರುವ ಜ್ಯೋತಿರ್ಲಿಂಗೋಪಾಸನೆಯನ್ನು ಬೋಧಿಸುವುದಲ್ಲದೆ ಹೊರಗಿನ ಇಷ್ಟಲಿಂಗೋಪಾಸನೆಯನ್ನು ಬೋಧಿಸುವುದಿಲ್ಲ.

ಸಮಾಧಾನ :—

"ಸ ನೋ ದೇವಶ್ಶುಭಯಾ ಸ್ಮೃತ್ಯಾ ಸಂಯುನಕ್ತು"

(ತೈತ್ತಿರೀಯ)

ಲಿಂಗಾಂಗಸಂಗಿನೋ ವತ್ಸ ಪುನರ್ಜನ್ಮ ನ ವಿದ್ಯತೇ ।
ಯುಗಪತ್‌ಜ್ಞಾನ ಸಂಸಿದ್ಧಿಸ್ಸ್ಯಾತ್ತತೋ ಮೋಕ್ಷಮವಾಪ್ನುಯಾತ್ ॥

(ಶಂಕರ ಸಂಹಿತೆ)

ಇತ್ಯಾದಿ ಪ್ರಮಾಣಗಳಿಂದ ಪರಶಿವಬ್ರಹ್ಮವು ಸರ್ವಸಾಮರ್ಥ್ಯವುಳ್ಳುದೂ, ಸರ್ವವ್ಯಾಪಕವಾದುದೂ ಆಗಿರುವುದರಿಂದ ಆ ಪರಶಿವಬ್ರಹ್ಮದ ಪರಿಚ್ಛಿನ್ನರೂಪವಾದ ಇಷ್ಟಲಿಂಗೋಪಾಸನೆಯು ಸಹ ಮೋಕ್ಷರೂಪ ಮಹಾ ಫಲವನ್ನು ಕೊಡುವುದರಲ್ಲಿ ಶಕ್ತವಾಗಿರುತ್ತದೆ.

ಶಂಕೆ :—ಬಾಹ್ಯಕರ್ಮಗಳು ಮೋಕ್ಷದಾಯಕಗಳಲ್ಲವಾದುದರಿಂದ ಅಂತಹ ಬಾಹ್ಯಕರ್ಮಗಳಲ್ಲೊಂದಾದ ಇಷ್ಟಲಿಂಗೋಪಾಸನೆಯು ಮೋಕ್ಷವನ್ನು ಕೊಡಲಾರದು.

ಸಮಾಧಾನ :—

"ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ"

ಜನಕಾದಿ ಮಹರ್ಷಿಗಳು ಅಂತಹ ಬಾಹ್ಯಕರ್ಮಗಳನ್ನು ಮಾಡುವುದರಿಂದಲೇ ಮೋಕ್ಷವನ್ನು ಪಡೆದಿರುತ್ತಾರೆ. ಮತ್ತು ತೀರ್ಥಯಾತ್ರಾ, ಗಂಗಾಸ್ನಾನಾದಿ ಬಾಹ್ಯಕರ್ಮಗಳಿಂದ ಅನೇಕರು ಮೋಕ್ಷವನ್ನು ಪಡೆದಿರುತ್ತಾರೆ. ಬಾಹ್ಯಕರ್ಮಗಳು ಮುಕ್ತಿಗೆ ಸಹಕಾರಿಗಳೆಂದು ಅನೇಕ ಮಹರ್ಷಿಗಳು ಒಪ್ಪಿರುತ್ತಾರೆ. ಇಂತಹ ಬಾಹ್ಯಕರ್ಮಗಳೆಲ್ಲ ವ್ಯರ್ಥವಾಗಬೇಕಾಗುವುದರಿಂದ ಬಾಹ್ಯಕರ್ಮಗಳು ಮುಕ್ತಿಗೆ ಸಹಾಯವನ್ನು ಕೊಡುವುವೆಂದು ಒಪ್ಪಲೇಬೇಕು. ಆದುದರಿಂದ ಇಲ್ಲಿ ಸ್ಥೂಲದೇಹದಲ್ಲಿ ಧರಿಸಲ್ಪಟ್ಟ ಇಷ್ಟಲಿಂಗೋಪಾಸನೆಯೂ ಸಹ ಕ್ರಮವಾಗಿ ಆತ್ಮನಲ್ಲಿ ಒಂದು ಅದೃಷ್ಟವನ್ನುಂಟುಮಾಡುವ ಮೂಲಕ ಮೋಕ್ಷವೆಂಬ ಮಹಾಫಲವನ್ನು ಕೊಡುತ್ತದೆಂದು ಸಿದ್ಧ

ವಾಗುವುದು. ಇದಲ್ಲದೆ ಈ ಮಂತ್ರದಲ್ಲಿ "ಶರೀರಂ ಮೇ ವಿಚರ್ಷಣಂ" ಜಿಹ್ವಾ ಮೇ ಮಧುಮತ್ತಮಾ, ಕರ್ಣಾಭ್ಯಾಂ ಭೂರಿವಿಶ್ರುತಂ" ಎಂದು ಸ್ಥೂಲದೇಹದಲ್ಲಿರುವ ನಾಲಿಗೆಗೆ ಮಧುರಭಾಷಣ ಮತ್ತು ಕಿವಿಗಳಿಗೆ ಶಾಸ್ತ್ರ ಶ್ರವಣಗಳ ಮೂಲಕ ಪರಿಶುದ್ಧಿಯನ್ನೂ ಪ್ರಾರ್ಥಿಸುವುದರಿಂದ "ಯಶ್ಛಂದಸಾಂ........ಗೋಪಾಯ" ಎಂಬೀ ಮಂತ್ರವು ಇಷ್ಟಲಿಂಗಧಾರಣ ಪರ ವಾಗುವುದೆಂಬುದು ನಿರ್ವಿವಾದವಾಗಿದೆ. ಈ ವಿಷಯದಲ್ಲಿ

ವೈದಿಕತ್ವಂ ಯಥಾ ವಹ್ನೇಃ ಸರ್ವ ವೇದಪ್ರಮಾಣತಃ ।
ತಥಾ ವೈದಿಕಸಿದ್ಧತ್ವಾದ್ವೈದಿಕಂ ಲಿಂಗಧಾರಣಮ್ ॥
ವೇದವೇದಾಂತಶಾಸ್ತ್ರೇಷು ಪುರಾಣೇಷ್ವಾಗಮೇಷು ಚ ।
ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಮ್ ॥
ವೇದೋತ್ತಮೇ ಯಜುರ್ವೇದೇ ತೈತ್ತಿರೀಯೇ ವಿಶೇಷತಃ ।
ಮೋಕ್ಷಾರ್ಥಿನಾಂ ಮುಕ್ತಿಹೇತುರ್ಲಿಂಗಧಾರಣಮೀರ್ಯತೇ ॥
ಛಂದೋಭ್ಯಸ್ಸರ್ವದೇವೇಭ್ಯೋ ಹ್ಯಮೃತಾತ್ಸಂಬಭೂವ ಹಿ ।
ಇಂದ್ರಸ್ತು ಪರಮೈಶ್ವರ್ಯಶಾಲೀ ಸಾಂಬಸ್ತ್ರಿಲೋಚನಃ ॥
ಮಾಂ ಮೇಧಯಾ ಚ ಸ್ತೃಣೋತು ಪ್ರೀಣಯತ್ವಥ ವಿಶ್ರುತಮ್ ।
ಅಮೃತಸ್ಯ ಮೋಕ್ಷಲಾಭಾಯ ಸರ್ವದೇಹೇಷು ಸರ್ವದಾ ॥
ದೇಹಸ್ಯ ಲಿಂಗರೂಪಸ್ಯ ಶಿವಸ್ಯ ಪರಮಾತ್ಮನಃ ।
ಧಾರಣಂ ತದ್ಧೃತಿರ್ಯಸ್ಯ ದೇವಧಾರಣ ಇಷ್ಯತೇ ॥
ತಸ್ಮಾಚ್ಛರೀರಂ ಮೇ ಲೋಕೇ ವಿಚರ್ಷಣಮಕಿಲ್ಬಿಷಮ್ ।
ಜಿಹ್ವಾ ಮೇ ರಸನಾ ಭೂಯಾನ್ಮಧುರಾಲಾಪಭಾಷಿಣೀ ॥
ಕರ್ಣಾಭ್ಯಾಂ ಶ್ರೋತ್ರಯುಗ್ಮೇನ ಭೂರಿ ವಿಶ್ರುತಮಸ್ಮ್ಯಹಮ್ ।
ಬ್ರಾಹ್ಮಣಃ ಪಾರ್ವತೀಶಸ್ಯ ಕೋಶಾಧಿಷ್ಠಾನಮೇವ ಹಿ ॥
ಅಸೇರಿವ ಯದಾ ಲೋಕೇ ಪ್ರಜ್ಞಯಾ ಮೇಧಯಾ ವೃತಃ ।
ಶ್ರುತಂ ತಚ್ಛ್ರವಣಾದೀನಿ ಮೇ ಗೋಪಯ ಪ್ರಯತ್ನತಃ ॥

(ಲಿಂಗಪುರಾಣ)

ಅಗ್ನಿದೇವತೆಯು ಹೇಗೆ ವೇದೋಕ್ತವಾದುದೋ ಹಾಗೆ ಸ್ಥೂಲ ದೇಹದಲ್ಲಿ ಲಿಂಗವನ್ನು ಧರಿಸುವುದೂ ವೇದೋಕ್ತವಾದುದರಿಂದ ಲಿಂಗಧಾರ ಣಕ್ಕೆ ವೈದಿಕತ್ವವು ಸಿದ್ಧವಾಗುವುದು. ವೇದೋಪನಿಷತ್ತುಗಳಲ್ಲಿಯೂ, ಸ್ಕಾಂದಾದಿ ಮಹಾಪುರಾಣಗಳಲ್ಲಿಯೂ, ಬ್ರಾಹ್ಮಣನಿಗೆ ಲಿಂಗಧಾರಣವು

ಹೇಳಲ್ಪಟ್ಟಿರುತ್ತದೆ. ಋಗಾದಿ ನಾಲ್ಕು ವೇದಗಳಲ್ಲಿ ಉತ್ತಮವಾದ ಯಜು ರ್ವೇದದ ತೈತ್ತಿರೀಯ ಶಾಖೆಯಲ್ಲಿ " **ಯಶ್ಛಂದಸಾಂ....ಗೋಪಾಯ** " ಎಂಬ ಮಂತ್ರವು ಶಿವಲಿಂಗಧಾರಣವು ಮುಕ್ತಿಗೆ ಸಾಧನವಾದುದೆಂದು ಬೋಧಿಸಿರುತ್ತದೆ. ಯಾವ ವಸ್ತುವು ಸಕಲ ವೇದಗಳಿಗೆ ಅಧಿಪತಿಯಾಗಿ ರುವುದೋ ಅಂತಹ ಪರಮೈಶ್ವರ್ಯಶಾಲಿಯಾದ ಶಿವಲಿಂಗವು ನನಗೆ ಪ್ರಜ್ಞಾ ಶಕ್ತಿಯನ್ನೀಯಲಿ. ದೇವ ಶಬ್ದವಾಚ್ಯವಾದ ಆ ಲಿಂಗವನ್ನು ಮೋಕ್ಷಕ್ಕೋ ಸ್ಕರ ದೀಕ್ಷೆಯಿಂದ ಪರಿಶುದ್ಧವಾದ ದೇಹದಲ್ಲಿ ಧರಿಸುವುದರಿಂದ ಈ ದೇಹವು ಪಾಪಶೂನ್ಯವಾದುದು. ನನ್ನ ನಾಲಗೆಯು ಮಧುರ ಭಾಷಣಗಳನ್ನಾಡುವುದು. ಕಿವಿಗಳು ಶಿವಜ್ಞಾನಯೋಗ್ಯವಾದ ಕಾರಣಸಮೂಹವುಳವುಗಳು. ಕತ್ತಿಯ ಒರೆಯು ಕತ್ತಿಗೆ ಆಶ್ರಯವಾಗಿರುವಂತೆ ಈ ಇಷ್ಟಲಿಂಗವು ಆ ನಿಷ್ಕಲನಾದ ಶಿವನಿಗೆ ಆಶ್ರಯವಾಗಿರುತ್ತದೆ. ಈ ಲಿಂಗವು ಸಂಸಾರದಲ್ಲಿ ಮುಳುಗಿರುವ ನನಗೆ ಜ್ಞಾನವೈರಾಗ್ಯಗಳನ್ನುಂಟುಮಾಡಿ ಮುಕ್ತಿಸಂಪತ್ತನ್ನೀಯಲಿ.

ಹೀಗೆ ಮಂತ್ರದಲ್ಲಿರುವ ಶರೀರ, ಕರ್ಣ, ಜಿಹ್ವಾದಿ ಪದಗಳನ್ನೇ ತೆಗೆದು ಕೊಂಡು ಶ್ರೀ ಭಗವಾನ್ ವ್ಯಾಸಮಹರ್ಷಿಯು ಇಷ್ಟಲಿಂಗಧಾರಣಪರವಾಗಿ ಅನುವಾದ ಮಾಡಿರುವುದನ್ನು ನೋಡಿದರೆ ಲಿಂಗಧಾರಣವು ವೇದೋಕ್ತ ವಾದುದೆಂದು ಹೇಳುವಲ್ಲಿ ಸಂಶಯವಿಲ್ಲ. ಮತ್ತು

ರುದ್ರೋ ಭೂತ್ವಾ ಯಜೇದ್ರುದ್ರಂ ನಾರುದ್ರೋ ರುದ್ರಮರ್ಚಯೇತ್ ।
ಪ್ರಾಣಲಿಂಗಾಂಗಸಂಬಂಧೀ ಸ ರುದ್ರೋ ನಾತ್ರ ಸಂಶಯಃ ॥

(ಶಂಕರ ಸಂಹಿತೆ)

ತಾನು ರುದ್ರನಾಗಿ ರುದ್ರನನ್ನು ಪೂಜಿಸಬೇಕು, ರುದ್ರನಾಗದೆ ರುದ್ರ ನನ್ನು ಪೂಜಿಸಬಾರದು. ಯಾವನು ದೀಕ್ಷಾಸಂಸ್ಕಾರದಿಂದ ಪರಿಶುದ್ಧನಾಗಿ ಸ್ಥೂಲದೇಹದಲ್ಲಿ ಇಷ್ಟಲಿಂಗವನ್ನು ಧರಿಸುತ್ತಾನೆಯೋ ಅವನೇ ರುದ್ರ ಸ್ವರೂಪನು. ಎಂದು ಸ್ಕಾಂದಪುರಾಣಾಂತರ್ಗತ ಶಂಕರ ಸಂಹಿತೆಯಲ್ಲಿ ಹೇಳಿರುವುದರಿಂದ ದೇಹವು ಲಿಂಗ ವಿಶಿಷ್ಟವಾಗಿರುವುದರಿಂದ ಈ ದೇಹದಲ್ಲಿ ರುವ ನಾಲಗೆ ಮುಂತಾದ ಅವಯವಗಳಿಗೆ ಪಟುತ್ವವನ್ನು ತೋರಿಸುವುದ ಕ್ಕಾಗಿ ಇಷ್ಟಲಿಂಗದ ಭೇದವೆನಿಸಿದ ಗುರುಲಿಂಗವು ಸ್ವಭಾವಿಕವಾಗಿ ಜಲ ತತ್ತ್ವಾಭಿಮಾನಿಯಾಗಿರುವುದರಿಂದ ನಾಲಗೆಯಲ್ಲಿ ನೆಲಸಿ ರಸಾಸ್ವಾದನ

ಮಾಡುತ್ತ ಮಧುರಭಾಷಣಗಳನ್ನಾಡುತ್ತಿರುವದು. ಭಾವಲಿಂಗದ ಅವಯವ ವೆನಿಸಿದ ಪ್ರಸಾದಲಿಂಗವು ಸ್ವಭಾವವಾಗಿ ಆಕಾಶತತ್ತ್ವಾಭಿಮಾನಿಯಾದುದ ರಿಂದ ಶ್ರೋತ್ರೇಂದ್ರಿಯದಲ್ಲಿ ನೆಲೆಸಿ ಶಬ್ದಗ್ರಹಣಮಾಡುತ್ತ ಶ್ರವಣಸಿದ್ಧಿ ಯನ್ನು ಪಡೆವುದು. ಹೀಗೆ ಇಷ್ಟಲಿಂಗಧಾರಣದಿಂದ ತನ್ನಲ್ಲಿ ರುದ್ರತ್ವ ಪ್ರಾಪ್ತಿಯಿಂದ ರುದ್ರನನ್ನು ಆರಾಧಿಸುವುದಕ್ಕಾಗಿ "ಜಿಹ್ವಾ ಮೇ ಮಧು ಮತ್ತಮಾ" "ಕರ್ಣಾಭ್ಯಾಂ ಭೂರಿ ವಿಶ್ರುತಂ" ಎಂದು ವಾಕ್ಪಟುತ್ವ, ಶ್ರವಣಯೋಗ್ಯತ್ವಾದಿಗಳನ್ನು ಪ್ರಾರ್ಥಿಸಿರುತ್ತದೆ.

ಶಂಕೆ:—ಈ ಮಂತ್ರದಲ್ಲಿ "ವಿಶ್ವರೂಪಃ" "ಬ್ರಹ್ಮಣಃ" ಎಂಬ ಸಾಧಾರಣ ಪದಗಳು ಕಾಣುವುದರಿಂದ ಸರ್ವಕಾರಣವಾದ, ಅಪರಿಚ್ಛಿನ್ನ ವಾದ ಇಷ್ಟಲಿಂಗಧಾರಣಪರವೆಂದು ಹೇಳಲವಕಾಶವಿಲ್ಲ.

ಸಮಾಧಾನ :—

"ಪ್ರಾಂಚೋಽಹಂ, ಪ್ರತ್ಯಂಚೋಽಹಂ ಪ್ರಾಚೀನೋಽಹಂ,
ಅರ್ವಾಚೀನೋಽಹಂ"

ನಾನು ಪೂರ್ವದಿಕ್ಕಿನಲ್ಲಿರುವೆನು. ನಾನು ಪಶ್ಚಿಮ ದಿಕ್ಕಿನಲ್ಲಿರುವೆನು. ನಾನು ಪುರಾತನಕಾಲದಲ್ಲಿದ್ದೆನು. ಈಚೆಗೂ ಇರುವೆನು ಇತ್ಯಾದಿ, ಶ್ರುತಿ ಗಳು ಬ್ರಹ್ಮವು ವಸ್ತುತಃ ಅಪರಿಚ್ಛಿನ್ನವಾದರೂ ಭಕ್ತಾನುಗ್ರಹಕ್ಕಾಗಿ ಆಯಾಯ ಸಮಯಗಳಲ್ಲಿ ಒಂದೊಂದು ಆಕಾರವನ್ನು ಹೊಂದುವುದೆಂದು ಹೇಳುವುದರಿಂದ ಲಿಂಗಕ್ಕೆ ವಿಶ್ವರೂಪತ್ವವೂ ಬ್ರಹ್ಮತ್ವವೂ ಸಿದ್ಧಿಸುವುದು. ಈ ವಿಷಯದಲ್ಲಿ

ಪರಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಮ್ ।
ತದೇವ ಸರ್ವಭೂತಾನಾಮಂತಸ್ತ್ರಿಸ್ಥಾನಗೋಚರಮ್ ॥
ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಮ್ ।
ಜ್ಯೋತಿರ್ಲಿಂಗಂ ಸದಾ ಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ ॥
ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮಸನಾತನಮ್ ।
ಉಪಾಸನಾರ್ಥಮಂತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ॥

(ಸಿದ್ಧಾಂತ ಶಿಖಾಮಣಿ ಪ. ೬.)

ಪರಬ್ರಹ್ಮನಾಮಕವಾದ ಆ ಮಹಾಲಿಂಗವು ಪ್ರಪಂಚಾತೀತವಾಗಿಯೂ, ನಾಶರಹಿತವಾಗಿಯೂ ಇರುವುದು. ನಿಖಿಲಪ್ರಾಣಿಗಳ ಆಧಾರ, ಹೃದಯ, ಭ್ರೂಮಧ್ಯಗಳೆಂಬ ಮೂರು ಸ್ಥಾನಗಳಲ್ಲಿ ಬೆಳಗುತ್ತಿರುವುದು. ಆಗಮಗಳು ಯಾವುದನ್ನು ಬ್ರಹ್ಮವೆಂದು ಹೇಳುತ್ತವೆಯೋ ಆ ವಸ್ತುವೇ ಅಪರಿಚ್ಛಿನ್ನವೂ ಅವ್ಯಕ್ತವೂ, ಸನಾತನವೂ, ಅಂತಸ್ಥಿತವೂ ಆದ ಜ್ಯೋತಿರ್ಲಿಂಗವೆನಿಸುತ್ತದೆ. ಭಕ್ತರ ಉಪಾಸನಾಸಿದ್ಧಿಗಾಗಿ ತನ್ನಲ್ಲಿ ಅವಿನಾಭಾವದಿಂದ ಇರುವ ಮಾಯಾಶಕ್ತಿಯಿಂದ ವಿಭಾಗವನ್ನು ಹೊಂದಿತು ಎಂದು ಶ್ರೀ ರೇಣುಕ ಭಗವತ್ಪಾದರು ಉಪದೇಶಿಸಿರುತ್ತಾರೆ.

ಶಂಕೆ :— ಈ ಶ್ರುತಿಯಲ್ಲಿ "**ಗೋಪಾಯ**" ಎಂದು ಮಧ್ಯಮ ಪುರುಷದ ಏಕವಚನವನ್ನು ಪ್ರಯೋಗಿಸಿರುವುದರಿಂದ ಇದು ಸಂಬೋಧನ ವಿಭಕ್ತಿಯನ್ನು ಅಪೇಕ್ಷಿಸುತ್ತದೆ. "**ದೇವಧಾರಣೋ ಭೂಯಾಸಂ**" ಎಂಬ ವಾಕ್ಯದಲ್ಲಿ "**ದೇವ**" ಎಂದು ಪದವಿಭಾಗಮಾಡಿ ಎಲೈ ದೇವನೇ ಮೇ – ನನ್ನನ್ನು, ಗೋಪಾಯ – ರಕ್ಷಿಸು, ಅಮೃತಸ್ಯ – ಮೋಕ್ಷಕ್ಕಾಗಿ, ಧಾರಣಃ–ಧರಿಸುವವನಾಗಿ, ಭೂಯಾಸಂ–ಆಗುವೆನು. ಎಂದು ಸಾಮಾನ್ಯವಾಗಿ ಅರ್ಥವಾಗುವುದಲ್ಲದೆ ಲಿಂಗಧಾರಣರೂಪವಾದ ವಿಶೇಷಾರ್ಥವನ್ನು ಹೇಳಲು ಆಗುವುದಿಲ್ಲ.

ಸಮಾಧಾನ :— "**ದೇವಧಾರಣೋ ಭೂಯಾಸಂ**" ಎಂಬ ವಾಕ್ಯದಲ್ಲಿರುವ "**ದೇವ**" ಎಂಬ ಪದವನ್ನು ಸಂಬೋಧನ ವಿಭಕ್ತಿಯನ್ನಾಗಿ ಮಾಡಿ ದೂರದಲ್ಲಿರುವ "**ಗೋಪಾಯ**" ಎಂಬ ಕ್ರಿಯಾಪದದಲ್ಲಿ ಅನ್ವಯಿಸುವುದಕ್ಕಿಂತಲೂ "**ದೇವ**" "**ಧಾರಣ**" ಈ ಎರಡು ಪದಗಳನ್ನು ಸಮಾಸಪದಮಾಡಿ ದೇವಪದವನ್ನು ಸಮೀಪದಲ್ಲಿರುವ ಧಾರಣಪದದಲ್ಲಿ ಅನ್ವಯಿಸುವುದೇ ಉತ್ತಮವಾಗಿದೆ. ಹಾಗಿಲ್ಲದೆ "**ಗೋಪಾಯ**" ಎಂಬ ಕ್ರಿಯಾಪದದಲ್ಲಿ ಅನ್ವಯಿಸುವುದಾದರೆ ದೂರಾನ್ವಯದೋಷವುಂಟಾಗುತ್ತದೆಯಲ್ಲದೆ ಮೀಮಾಂಸಾಶಾಸ್ತ್ರದಲ್ಲಿ ಹೇಳಿದ "**ಅಪರಿಮಿತಾಧಿಕರಣ**" ನ್ಯಾಯಕ್ಕೂ (ಪುಟ ೨೯) ವಿರೋಧವಾಗುತ್ತದೆ. ಮತ್ತು "**ಗೋಪಾಯ**" ಎಂಬ ಕ್ರಿಯಾಪದದ ಸಮೀಪದಲ್ಲಿ "**ಬ್ರಹ್ಮಣಃ**" ಎಂಬುದೊಂದು ಪದ

ವಿರುತ್ತದೆ. ಷಷ್ಠ್ಯಂತವಾದ ಬ್ರಹ್ಮಪದವನ್ನು ವಿಭಕ್ತಿವ್ಯತ್ಯಾಸದಿಂದ ಸಂಬೋಧನಾವಿಭಕ್ತಿಯನ್ನಾಗಿಮಾಡಿ "ಎಲೈ ಬ್ರಹ್ಮವೇ? ಮೇ–ನನ್ನನ್ನು, ಗೋಪಾಯ – ರಕ್ಷಿಸು. ಎಂದು ಅರ್ಥಮಾಡುವುದರಿಂದ ಸಂಬೋಧನಾ ವಿಭಕ್ತಿಯ ಲಾಭವುಂಟಾಗುತ್ತದೆ. ಮತ್ತು ಸಂಯೋಗ ಎಂಬ ಅರ್ಥವನ್ನು ಕೊಡುವ ಧಾರಣಪದವನ್ನು "ಅಮೃತ" ಎಂಬ ಪದದಲ್ಲಿ ಅನ್ವಯಿಸುವುದು ಸಹ ಪ್ರಯೋಜನಕರವೂ ಅಲ್ಲ. ಆದುದರಿಂದ ದೇವಪದವನ್ನು ಧಾರಣ ಪದದಲ್ಲಿ ಅನ್ವಯಿಸುವುದೇ ಸರ್ವೋತ್ತಮವಾದುದು. ಈ ವಿಷಯದಲ್ಲಿ

ಯೂಯಂ ಶ್ರದ್ಧಾನ್ವಿತಾ ವಿಪ್ರಾಃ ಪ್ರಾಣಲಿಂಗಾಂಗಸಂಗಿನಃ ।
ಸ್ಥಾಪಯಧ್ವಮಿಮಂ ಮಾರ್ಗಂ ಭುಕ್ತಿಮುಕ್ತಿಫಲಪ್ರದಮ್ ॥

ಮಂಗಲಾತ್ಮಶಿವಲಿಂಗಧಾರಣಂ ।
ಸಂಗವರ್ಜಿತತನುಃ ಕುರುತೇ ಯಃ ॥
ಅಂಗಜೌರ್ವದಹನಂ ಭವಸಿಂಧುಂ ।
ಸಂಗಭಂಗತರಳಂ ಪ್ರತರೇತ್ಸಃ ॥

ಶಿವಭಕ್ತಾನ್ ಸದಾಚಾರನಿರತಾನ್ ಧೃತಲಿಂಗಕಾನ್ ।
ವಿಪ್ರಾನಾರಾಧಯ ಸದಾ ಭಸ್ಮರುದ್ರಾಕ್ಷಧಾರಿಣಃ ॥

(ಶಂಕರ ಸಂಹಿತೆ)

ಹೀಗೆ ಅಲ್ಲಲ್ಲಿ ಇದೇ ಶ್ರುತ್ಯರ್ಥವನ್ನು ಬೋಧಿಸುವ ಅನಂತ ಛಾಯಾ ವಾಕ್ಯಗಳು ಕಂಡುಬರುತ್ತವೆ. ಆದುದರಿಂದ " ಯಶ್ಛಂದಸಾಂ " ಎಂಬ ಶ್ರುತಿಯು ಇಷ್ಟಲಿಂಗಧಾರಣವನ್ನೇ ವಿಧಾನಮಾಡುವುದು.



# ಯಜುರ್ವೇದೀಯ ರುದ್ರಾನುವಾಕ-ಲಿಂಗಧಾರಣ

ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ ।
ತತ್ರ ಪಂಚಾಕ್ಷರೀ ತಸ್ಯಾಂ ಶಿವ ಇತ್ಯಕ್ಷರದ್ವಯಮ್ ॥

ವೇದದೊಳಗೆ ಯಜುರ್ವೇದವು ಶ್ರೇಷ್ಠವಾದುದು. ಅದರಲ್ಲಿ ಏಕಾದಶ ರುದ್ರವು ಶ್ರೇಷ್ಠ; ಅದರಲ್ಲಿ ಅಷ್ಟಮಾನುವಾಕವು ಶ್ರೇಷ್ಠ. ಅಲ್ಲಿಯೂ ಪಂಚಾಕ್ಷರಿಯು ಶ್ರೇಷ್ಠ, ಅದರಲ್ಲಿ " ಶಿವ " ಎಂಬ ಎರಡು ಅಕ್ಷರಗಳು ಪರಮಶ್ರೇಷ್ಠವು.

ಎಂಬ ಪ್ರಮಾಣಾನುಸಾರವಾಗಿ ಸರ್ವಶ್ರೇಷ್ಠವಾದ ರುದ್ರೈಕಾದ ಶಿನಿಯಲ್ಲಿ.

ಯಾ ತೇ ರುದ್ರ ಶಿವಾತನೂರಘೋರಾऽಪಾಪಕಾಶಿನೀ ।
ತಯಾ ನಸ್ತನು ವಾ ಶಂತಮಯಾ ಗಿರಿಶಂತಾऽಭಿಚಾಕಶೀಹಿ ॥

(ಪ್ರಥಮಾನುವಾಕ)

**ಅನ್ವಯುವಾರ್ಥ :—** ಹೇರುದ್ರ–ದುಃಖನಾಶಕನಾದ ಎಲೈ ಶಿವನೇ ತೇ–ನಿನ್ನ, ಅಘೋರಾ–ಶಾಂತಾಕಾರವಾದ, ಶಿವಾ–ಮಂಗಲಸ್ವರೂಪವಾದ, ಯಾ ತನೂಃ–ಯಾವ ಲಿಂಗರೂಪ ಶರೀರವು. ಅಪಾಪಕಾಶಿನೀ-ಅಪಾಪ-ಪಾಪಶೂನ್ಯರಾದ ಭಕ್ತರ ಶರೀರಗಳಲ್ಲಿ, ಕಾಶಿನೀ–ಪ್ರಕಾಶಿಸುತ್ತಿರುವುದೋ. ಶಂತಮಯಾ–ಸುಖಪ್ರದವಾದ, ತನು ವಾ – ಸೂಕ್ಷ್ಮವಾದ. ತಯಾ–ಆ ಲಿಂಗರೂಪ ಶರೀರದಿಂದ, ನಃ – ನಮ್ಮ ದೇಹದಲ್ಲಿ – ಅಭಿಚಾಕಶೀಹಿ – ಪ್ರಕಾಶಿಸುವವನಾಗು.

ಇಲ್ಲಿ ರುದ್ರ ಅಂದರೆ "ರೋದನಂ ದ್ರಾವಯತೀತಿ ರುದ್ರಃ" ಅಥವಾ "ರುದಂ ಅಜ್ಞಾನಂ ದ್ರಾವಯತೀತಿ ವಾ ರುದ್ರಃ" ಎಂಬ ವ್ಯುತ್ಪತ್ತಿಯ ಅನುಸಾರವಾಗಿ ಜನನ ಮರಣರೂಪ ಸಂಸಾರ ದುಃಖವನ್ನು ನಾಶಮಾಡು ವುದರಿಂದಾಗಲಿ, ಜೀವಾತ್ಮನನ್ನು ಆವರಿಸಿದ ಮಲತ್ರಯವನ್ನು ನಾಶಗೊಳಿ ಸುವುದರಿಂದಾಗಲಿ " ರುದ್ರ " ಎಂಬ ಹೆಸರುಂಟಾಗಿರುತ್ತದೆ.

ಈ ಮಂತ್ರದಲ್ಲಿ " ಅಘೋರಾ " ಎಂಬ ಪದವು " ತನೂಃ " ಎಂಬ ಪದದಲ್ಲಿ ವಿಶೇಷಣವಾಗಿರುವುದರಿಂದ ಶಾಂತವಾದ ಶರೀರವೆಂಬ ಅರ್ಥವುಂಟಾಗುತ್ತದೆ. ಅಂದರೆ ಶಿವನಿಗೆ ಲಿಂಗ, ಬೇರ ಎಂಬ ಎರಡು ಶರೀರಗಳಿರುತ್ತವೆ. ಇವುಗಳಲ್ಲಿ ಕರಚರಣಾದ್ಯವಯವಗಳಿಂದಲೂ, ಸರ್ಪ, ತ್ರಿಶೂಲ, ವ್ಯಾಘ್ರಾಜಿನಾದಿಗಳಿಂದಲೂ ಕೂಡಿರುವ ಶರೀರವೇ ಬೇರವು. ಪೀಠ, ಗೋಮುಖ, ವೃತ್ತ, ದೈರ್ಘ್ಯ, ವಿಸ್ತಾರ ಎಂಬ ಪಂಚಸೂತ್ರಗಳಿಂದ ಕೂಡಿರುವುದೇ ಲಿಂಗವು. ಬೇರವು ಘೋರವಾದುದರಿಂದ ಸೋಮ ಎಂಬ ನಾಮವನ್ನು ಪಡೆದಿರುವುದು. ಲಿಂಗ ಅಘೋರವಾದುದರಿಂದ ರುದ್ರನೆಂಬ ನಾಮವನ್ನು ಪಡೆದಿರುವುದು, ಇಲ್ಲಿ ಲಿಂಗಧಾರಣ, ಲಿಂಗಪೂಜಾ ವಿಧಾನವಾದರೋ ಕೇವಲ ಅಘೋರಮೂರ್ತಿಯೆನಿಸಿದ ಶಿವಲಿಂಗವನ್ನುದ್ದೇಶಿಸಿರುವುದಲ್ಲದೆ, ಘೋರವಾದ ಮೂರ್ತಿಯನ್ನುದ್ದೇಶಿಸಿರುವುದಿಲ್ಲ. ಮತ್ತು " ಅಪಾಪೇಷು ಕಾಶತ ಇತಿ ಅಪಾಪಕಾಶಿನೀ " ಎಂದು ವಿಗ್ರಹಮಾಡುವುದರಿಂದ ತ್ರಿವಿಧದೀಕ್ಷೆಯಿಂದ ತ್ರಿವಿಧಮಲಗಳನ್ನು ನಾಶಗೊಳಿಸಿ ಪರಿಶುದ್ಧವಾದ ಶಿವಭಕ್ತರ ಹೃದಯದಲ್ಲಿ ಧರಿಸಲ್ಪಡುತಕ್ಕುದೆಂದು ಸ್ಪಷ್ಟವಾಗುವುದರಿಂದ ಈ ಮಂತ್ರವು ದೇಹದಲ್ಲಿ ಶಿವಲಿಂಗಧಾರಣವನ್ನು ಪ್ರತಿಪಾದಿಸುವುದು. ಮತ್ತು "ಲಿಂಗಂ ತು ಶಿವಯೋರ್ದೇಹಃ" ಲಿಂಗಮೂರ್ತಿಯು ಶಕ್ತಿಯಿಂದೊಡಗೂಡಿದ ಪರಶಿವನ ನಿತ್ಯಾವಾಸಸ್ಥಾನವಾದ ದೇಹವಾಗಿರುವುದೆಂದು ಶಿವಾಗಮವು ಬೋಧಿಸುವುದು. ರೇಣುಕ ಭಗವತ್ಪಾದರು ಶಿಷ್ಯನ ಶಕ್ತಿಪಾತವನ್ನು (ಯೋಗ್ಯತೆ) ಪರೀಕ್ಷಿಸಿ ಕ್ರಿಯಾ, ಮನು, ವೇಧಾ, ಎಂಬ ತ್ರಿವಿಧ ದೀಕ್ಷೆಗಳೆಂಬ ಸಾಧನಗಳಿಂದ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳೆಂಬ ಮೂರು ಶರೀರಗಳಲ್ಲಿ ಅನಾದಿಕಾಲದಿಂದ ಸಂಭವಿಸಿರುವ ಕಾರ್ಮ, ಮಾಯಾಯ, ಆಣವಗಳೆಂಬ ಮಲಗಳನ್ನು ಪರಿಹರಿಸಿ ಕ್ರಮದಿಂದ ಇಷ್ಟ, ಪ್ರಾಣ, ಭಾವ ಎಂಬ ಮೂರು ಲಿಂಗಗಳನ್ನು ಧರಿಸಿ ಅವುಗಳ ಉಪಾಸನಾಕ್ರಮಗಳನ್ನು ಬೋಧಿಸಿ ಲಿಂಗಧಾರಣ ಮಹತ್ವವನ್ನು ಉಪದೇಶಿಸಿರುತ್ತಾರೆ.

ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

ಲಕ್ಷ್ಮ್ಯಾದಿ ಶಕ್ತಯಸ್ಸರ್ವಾ ಶಿವಶಕ್ತಿವಿಭಾವಿತಾಃ ।
ಧಾರಯಂತ್ಯಳಿಕಾಗ್ರೇಷು ಶಿವಲಿಂಗಮಹರ್ನಿಶಮ್ ॥
ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

ಚತುರ್ಮುಖಬ್ರಹ್ಮ, ವಿಷ್ಣು, ಇಂದ್ರ, ಅಗ್ನಿ ಮುಂತಾದ ದೇವತೆಗಳು, ಗೌತಮ, ಕಣಾದ, ಕಪಿಲ, ಪತಂಜಲಿ ಮುಂತಾದ ಮಹರ್ಷಿಗಳೂ, ತಮ್ಮ ಉತ್ತಮಾಂಗಗಳಲ್ಲಿಯೂ, ಲಕ್ಷ್ಮೀ, ಸರಸ್ವತೀ, ಶಚೀ, ಮುಂತಾದ ಮಹಾಶಕ್ತಿಯರು ತಮ್ಮ ಹಣೆಗಳಲ್ಲಿಯೂ, ಶಿವಲಿಂಗವನ್ನು ಎಡೆಬಿಡದೆ ಧರಿಸಿರುತ್ತಾರೆ. ಈ ಲಿಂಗಧಾರಣವು ವೇದ, ಆಗಮ, ಪುರಾಣಾದಿಗಳಲ್ಲಿ ವಿಶೇಷವಾಗಿ ಪ್ರಶಂಸಿಲ್ಪಟ್ಟಿರುವದರಿಂದ ಲಿಂಗವನ್ನು ಧರಿಸುವುದೇ ವೀರಶೈವರ ಮುಖ್ಯಲಕ್ಷಣವಾಗಿದೆ. ಎಂದು ಬೋಧಿಸುತ್ತ

ಅಘೋರಾ್ಯ ಪಾಪಕಾಶೀತಿ ಯಾ ತೇ ರುದ್ರ ಶಿವಾ ತನೂಃ ।
ಯಜುಷಾ ಗೀಯತೇ ಯಸ್ಮಾತ್ತಸ್ಮಾಚ್ಛ್ರೈವೋsಘವರ್ಜಿತಃ ॥

ಎಂದು ಆ ಮಂತ್ರದಲ್ಲಿರುವ ಅಘೋರಾ, ಅಪಾಪಕಾಶಿನೀ, ರುದ್ರ, ಶಿವ, ತನೂಃ ಮುಂತಾದ ಪದಗಳನ್ನು ತೆಗೆದುಕೊಂಡು ಲಿಂಗಧಾರಣಪರವಾಗಿ ಅರ್ಥಮಾಡಿರುತ್ತಾರೆ. ಮತ್ತು ಅಷ್ಟಾದಶ ಪುರಾಣ ಕರ್ತನಾದ ವ್ಯಾಸಮಹರ್ಷಿಯು

ಯಾ ತೇ ಶಿವಾ ತನೂರುದ್ರ ಲಿಂಗಂ ಮಂಗಲದಾಯಕಮ್ ।
ಲಿಂಗಂ ಶಿವಾ ತನೂಃ ಪ್ರೋಕ್ತಾ ಮೂರ್ತಿರ್ಘೋರಾ ತನುಸ್ಮೃತಾ ॥
ಅಪಾಪೇಷು ಚ ಭಕ್ತೇಷು ತಯೋರ್ಮಧ್ಯೇ ಶಿವಾ ತನೂಃ ।
ಕಾಶತೇ ಪರಮೇಶಸ್ಯ ಶಿಷ್ಯಾಸ್ತೇ ಲಿಂಗಧಾರಿಣಃ ॥
ತಯಾ ಶಂತಮಯಾ ಸೌಖ್ಯಕಾರಿಣ್ಯಾ ಲಿಂಗರೂಪಯಾ ।
ಅಭಿಚಾಕಶೀಹಿ ತನುವಾ ಗಿರಿಶಂ ತಾಭಿರಕ್ಷಮಾಮ್ ॥

(ಲಿಂಗಪುರಾಣ)

ಎಲೈ ಪರಮಾತ್ಮನೇ! ಅಖಂಡೈಕರಸನಾದ ನೀನು, ಘೋರ, ಅಘೋರ ಎಂದು ಎರಡು ಶರೀರಗಳನ್ನು ಧರಿಸಿರುವೆ. ಇವುಗಳಲ್ಲಿ ದೀಕ್ಷಾ

ಸಂಸ್ಕಾರದಿಂದ ಪರಿಶುದ್ಧರಾದ ಭಕ್ತರು ಅಘೋರ (ಲಿಂಗ) ಮೂರ್ತಿಯನ್ನು ಧರಿಸಿರುತ್ತಾರೆ. ಅಂತಹ ಲಿಂಗಧಾರಿಗಳೇ ಶಿಷ್ಟರು. ಇಂತಹ ಅಘೋರ ಮೂರ್ತಿಯು ನನ್ನ ಶರೀರದಲ್ಲಿ ಪ್ರಕಾಶಿಸುವುದರಿಂದ ನನ್ನನ್ನು ಯಾವಾಗಲೂ ಕೈಬಿಡದೆ ರಕ್ಷಿಸು.

ಹೀಗೆ ಯಜುರ್ವೇದದ ಕೆಲಮಂತ್ರಗಳಿಗೆ ಲಿಂಗಧಾರಣವನ್ನು ಪ್ರತಿಪಾದಿಸಿ ಇನ್ನು ಋಗ್ವೇದ ಮಂತ್ರಗಳಿಂದಲೂ ಲಿಂಗಧಾರಣವನ್ನು ಪ್ರತಿಪಾದಿಸುವೆವು.



# ಋಗ್ವೇದ-ಲಿಂಗಧಾರಣ

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ।
ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ॥
ಅತಪ್ತತನುರ್ನತದಾಮೋ ಅಶ್ನುತೇ ।
ಶೃತಾಸ ಇದ್ವಹಂತಸ್ತತ್ಸಮಾಶತ ॥

(ಋಗ್ವೇದ ಅ. ೭. ಅ. ೩. ವ. ೮. ......)

ಅವಯವಾರ್ಥ :–ಬ್ರಹ್ಮಣಸ್ಪತೇ-ಲಿಂಗರೂಪ ಶರೀರದಲ್ಲಿ ಯಾವಾಗಲೂ ಸನ್ನಿಹಿತವಾಗಿರುವ ಪರಮೇಶ್ವರನೇ ! ತೇ-ನಿನ್ನ, ತತ್-ಆ ಬ್ರಹ್ಮಪದ ವಾಚ್ಯವಾದ ಲಿಂಗವು–ಪವಿತ್ರಂ-ಶುಚಿ-ಅಶುಚಿ ಸಾಧಾರಣ ಕಾಲಗಳಲ್ಲಿಯೂ ಧರಿಸಲ್ಪಡತಕ್ಕುದು. ವಿತತಂ- ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಮೊದಲಾಗಿ ಅನಂತರೂಪದಿಂದಾಗಲಿ, ಅಥವಾ ಪ್ರತಿಯೊಬ್ಬ ಭಕ್ತರ ಅಂಗಗಳಲ್ಲಿ ಧರಿಸಲ್ಪಟ್ಟಿರುವುದರಿಂದಾಗಲಿ ಬಹುಪ್ರಕಾರವಾದುದು. ಪ್ರಭುಃ—ನಿಗ್ರಹಾನುಗ್ರಹಸಾಮರ್ಥ್ಯವುಳ್ಳ-ತ್ವಂ-ನೀನು, ವಿಶ್ವತಃ-ಸಮಸ್ತಗಳಾದ ಗಾತ್ರಾಣಿ-ಭಕ್ತರ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳನ್ನು-ಪರ್ಯೇಷಿ-ಲಿಂಗರೂಪ ಶರೀರದ್ವಾರಾ ವ್ಯಾಪಿಸಿರುತ್ತೀಯೆ, ಅತಪ್ತತನುಃ-ಆಣವಾದಿ ಮಲಗಳನ್ನು ನಾಶಗೊಳಿಸುವ ಶಿವದೀಕ್ಷಾ ಸಂಸ್ಕಾರವನ್ನು ಪಡೆಯದವನು–ಆಮಃ–ಪರಿಪಕ್ವಾಂತಃಕರಣ ಶೂನ್ಯನಾದುದರಿಂದ, ತತ್-ಆ ಪರಶಿವಲಿಂಗವನ್ನು, ನಾಶ್ನುತೇ-ಹೊಂದುವುದಿಲ್ಲ. ಇದ್ವಹಂತಃ–ಶಿವಜ್ಞಾನವುಳ್ಳವರು, ಶೃತಾಸಃ–ಶಿವಲಿಂಗವನ್ನಾಶ್ರಯಿಸಿದವರಾಗಿ ತತ್–ಆ ಇಷ್ಟಲಿಂಗವನ್ನು ಸಮಾಶತ–ಹೊಂದುವರು ಎಂದು ಸಾಮಾನ್ಯವಾಗಿ ಆ ಶ್ರುತಿಯ ಅರ್ಥವು.

ಈ ಮಂತ್ರದಲ್ಲಿ " ಬ್ರಹ್ಮಣಸ್ಪತೇ " ಎಂಬ ಪದದಲ್ಲಿರುವ " ಬ್ರಹ್ಮಣಃ " ಎಂಬ ಪದಕ್ಕೆ ಇಷ್ಟಲಿಂಗವೆಂತಲೂ, ಮುಂದಿರುವ " ಪತಿ " ಎಂಬ ಪದಕ್ಕೆ- ಆ ಲಿಂಗಾಧಿಷ್ಠಿತವಾದ ಪರಶಿವನೆಂತಲೂ ಅರ್ಥವು. ಶ್ರೀ ರೇಣುಕ ಭಗವತ್ಪಾದರು "ತಲ್ಲಿಂಗಂ ಬ್ರಹ್ಮಶಾಶ್ವತಂ" " ಲಿಂಗಂ ಬ್ರಹ್ಮ

ಸನಾತನಂ" ಎಂದೂ, ಶ್ರೀ ಶಂಕರಾಚಾರ್ಯರು "ಲಿಂಗಂ ತದ್ ಬ್ರಹ್ಮ ಸಂಜ್ಞಿತಂ" ಎಂದೂ ಬ್ರಹ್ಮಪದಕ್ಕೆ ಲಿಂಗವೆಂಬ ಅರ್ಥವನ್ನು ಅಂಗೀಕಾರ ಮಾಡಿರುತ್ತಾರೆ. ಮತ್ತು ಲೀನಮರ್ಥಂ ಗಮಯತೀತಿ ಲಿಂಗಂ, ಎಂಬ ವ್ಯುತ್ಪತ್ತಿಯಿಂದಲೂ "ತದಧಿಕರಣತ್ವಾತ್ತದ್ವ್ಯಪದೇಶಃ" ಎಂಬುಕ್ತಿಬಲದಿಂದಲೂ ನಿಗೂಢವಾದ ನಿಷ್ಕಲಪರಮಾತ್ಮನಿಗೆ ಈ ಇಷ್ಟ ಲಿಂಗವು ಆಶ್ರಯವಾದುದರಿಂದ ಲಿಂಗಕ್ಕೂ ಬ್ರಹ್ಮವೆಂಬ ವ್ಯವಹಾರವು ಬಂದಿರುತ್ತದೆ. ಇದಲ್ಲದೆ ಈ ಮಂತ್ರದಲ್ಲಿ "ಅತಪ್ತತನು" ಎಂಬ ಪದವು ಬ್ರಹ್ಮಪದಕ್ಕೆ ವಿಶೇಷಣವಾಗಿರುವುದರಿಂದ ವೀರಶೈವ ಸಿದ್ಧಾಂತಾನುಸಾರ ವಾಗಿ ಮುಕ್ತಿದಾಯಕವಾದ ಲಿಂಗವು ಶಿವದೀಕ್ಷೆಯಿಲ್ಲದವರಿಂದ ಧಾರಣ ಮಾಡತಕ್ಕದ್ದಲ್ಲ ಎಂಬ ಅರ್ಥವನ್ನು ಕೊಡುತ್ತದೆ. ಹೇಗೆಂದರೆ- ತಪ್ತಾ ತನುಃ ಯಸ್ಯ ತಪ್ತತನುಃ, ತಪ್ತತನುಃ ನ ಭವತೀತಿ ಅತಪ್ತತನುಃ ಎಂಬ ಸಮಾಸಬಲದಿಂದ ಶಿವಲಿಂಗಧಾರಣ ಯೋಗ್ಯವಾದ ದೀಕ್ಷಾಸಂಸ್ಕಾರ ವನ್ನು ಪಡೆಯದವನೇ "ಅತಪ್ತತನು" ಎನಿಸುವನು-ದೀಕ್ಷಾಸಂಸ್ಕಾರ ವನ್ನು ಪಡೆದವನು "ತಪ್ತತನು" ವೆನಿಸಿಕೊಳ್ಳುತ್ತಾನೆ. ಮತ್ತು "ಆಮಃ" ಎಂಬ ಪದವು ಇಂತಹ ದೀಕ್ಷಾಸಂಸ್ಕಾರವಿಲ್ಲದವನ ಬುದ್ಧಿಯು ಪರಿಪಕ್ವ ವಾಗುವುದಿಲ್ಲವೆಂಬ ಅರ್ಥವನ್ನು ಬೋಧಿಸಿರುತ್ತದೆ.

ಶಂಕೆ :—ಈ ಮಂತ್ರದಲ್ಲಿರುವ "ಬ್ರಹ್ಮಣಸ್ಪತೇ" ಎಂಬಲ್ಲಿರುವ- ಬ್ರಹ್ಮಪದಕ್ಕೆ ಭೂಮಿಯಲ್ಲಿ ಪ್ರತಿಷ್ಠಿಸಿದ ಸ್ಥಾವರಲಿಂಗವೆಂಬ ಅರ್ಥವನ್ನು ಸಹ ಮಾಡಬಹುದು. "ಹೇ ಬ್ರಹ್ಮಣಸ್ಪತೇ" ಸ್ಥಾವರಲಿಂಗಾಧಿಷ್ಠಿತ ನಾದ ಪರಶಿವನೇ! ತೇ-ನಿನ್ನ, ಬ್ರಹ್ಮಪದವಾಚ್ಯವಾದ ಸ್ಥಾವರಲಿಂಗವು, ಪವಿತ್ರಂ-ಅಧ್ವಶೋಧನಾದಿಗಳಿಂದ ಪರಿಶುದ್ಧವಾದುದು, ವಿತತಂ-ಭೂಮಿ ಯಿಂದ ಉದ್ಭವಿಸಿದ, ಅಗಸ್ತ್ಯಾದಿ ಮಹರ್ಷಿಗಳಿಂದ ಪ್ರತಿಷ್ಠಿಸಿದ, ಶ್ರೀರಾಮ ಚಂದ್ರ ಹರಿಶ್ಚಂದ್ರಾದಿ ಮಹಾರಾಜರಿಂದ ಪ್ರತಿಷ್ಠಿಸಿದ (ಸ್ವಯಂವ್ಯಕ್ತ, ಆರ್ಷ, ಪುರುಷಕೃತ) ಲಿಂಗಭೇದದಿಂದ ನಾನಾಪ್ರಕಾರವಾದುದೆಂಬ ಅರ್ಥವು ಸಿದ್ಧವಾಗುವಲ್ಲಿ ಇಷ್ಟಲಿಂಗಧಾರಣಪರವಾದುದೆಂದು ಹೇಗೆ ನಿರ್ಧರಿಸುವುದು?

**ಸಮಾಧಾನ :**—"ಪವಿತ್ರಂ ತೇ" ಎಂಬೀ ಮಂತ್ರದಲ್ಲಿ "ಗಾತ್ರಾಣಿ ಪರ್ಯೇಷಿ" "ಅತಪ್ತತನುಃ" ಎಂಬ ವಿಶೇಷ ಪದಗಳು ಭೂಮಿ ಪ್ರತಿಷ್ಠಿತ ವಾದ ಲಿಂಗವನ್ನು ಬೋಧಿಸದೆ ಶರೀರದಲ್ಲಿ ಧರಿಸಲ್ಪಟ್ಟ ಇಷ್ಟಲಿಂಗವನ್ನೆ ಬೋಧಿಸುತ್ತವೆ. ಸಾಮಾನ್ಯವಾಗಿ ಸ್ಥಾವರಲಿಂಗ ಪರವಾಗಿ ಅರ್ಥಮಾಡಿ ದರೆ ಮಂತ್ರದಲ್ಲಿರುವ ವಿಶೇಷ ಪದಗಳಿಗೆ ಪ್ರಯೋಜನವಿಲ್ಲದಂತಾಗುವುದಲ್ಲದೆ ಸ್ವಭಾವವಾಗಿ ಅಣು, ರೇಣು, ತೃಣ, ಕಾಷ್ಠಾದಿಗಳಲ್ಲಿ ವ್ಯಾಪಿಸಿಕೊಂಡಿ ರುವ ಅಪರಿಚ್ಛಿನ್ನವಾದ ಆ ಬ್ರಹ್ಮಲಿಂಗವು ಸ್ಥಾವರಲಿಂಗಾಭೇದದೃಷ್ಟಿ ಯಿಂದ ಭಕ್ತರ ಶರೀರಗಳಲ್ಲಿ ಮಾತ್ರ ವ್ಯಾಪಿಸಿರುವುದೆಂದು ಹೇಳುವುದು ಅಖಂಡವಾದ ವಸ್ತುವಿಗೆ ಸಂಕೋಚವನ್ನು ಕಲ್ಪಿಸಿದಂತಾಗುತ್ತದೆ. ಆದುದ ರಿಂದ ಈ ಮಂತ್ರಕ್ಕೆ ಇಷ್ಟಲಿಂಗಧಾರಣಪರವಾದ ಅರ್ಥವೇ ಸಾಧುವಾದುದು.

**ಶಂಕೆ :**—"ಪವಿತ್ರಂ........ಅಶ್ನುತೇ" ಈ ಮಂತ್ರವು ಸೋಮ ಯಾಗವನ್ನು ಮಾಡುವ ಸಮಯದಲ್ಲಿ "ದಶಾಪವಿತ್ರ" ಎಂಬ ಹೆಸರುಳ್ಳ ಉಣ್ಣೆಯ ಬಟ್ಟೆಯಲ್ಲಿ ಸೋಮರಸವನ್ನು ಶೋಧಿಸುವಾಗ ವಿನಿಯೋಗ ಮಾಡಲ್ಪಟ್ಟಿರುತ್ತದೆ. ಯಾವ ಮಂತ್ರವನ್ನು ಯಾವ ಪ್ರಕರಣದಲ್ಲಿ ವಿನಿ ಯೋಗ ಮಾಡಿರುತ್ತಾರೆಯೋ, ಆ ಮಂತ್ರಕ್ಕೆ ಆ ಪ್ರಕರಣಕ್ಕನುಗುಣವಾಗಿ ಅರ್ಥವನ್ನು ಮಾಡುವುದುತ್ತಮವಾಗಿದೆ.

**ಉದಾಹರಣೆ :**—ಸಂಧ್ಯಾವಂದನ ಕರ್ಮವನ್ನು ಮಾಡುವ ಸಮಯ ದಲ್ಲಿ ವಿನಿಯೋಗಿಸಲ್ಪಟ್ಟಿರುವ "ಮಿತ್ರಸ್ಯ" ಇತ್ಯಾದಿ ಮಂತ್ರಗಳಿಗೆ ಸಂಧ್ಯಾವಂದನಕಾಲದಲ್ಲಿ ಧ್ಯಾನಿಸಲ್ಪಡುವ ದೇವತಾಪರವಾಗಿಯೇ ಅರ್ಥ ಮಾಡಿದ್ದಾರಷ್ಟೆ. ಅದರಂತೆ "ಪವಿತ್ರಂ ತೇ........ಅಶ್ನುತೇ" ಎಂಬ ಮಂತ್ರಕ್ಕೆ ಸೋಮಯಾಗ ಪರವಾಗಿ ಅರ್ಥಮಾಡುವುದನ್ನು ಬಿಟ್ಟು ಇಷ್ಟ ಲಿಂಗಧಾರಣಪರವಾಗಿ ಅರ್ಥಮಾಡುವುದು ವಿರೋಧವಾಗುವುದಿಲ್ಲವೇ ?

**ಸಮಾಧಾನ :**—ಸೋಮಯಾಗದಲ್ಲಿ ವಿನಿಯೋಗಿಸಿದ ಮಾತ್ರದಿಂದ ಈ ಮಂತ್ರಕ್ಕೆ ಸೋಮಯಾಗದ ದೇವತಾ ಪರವಾಗಿ ಅರ್ಥಮಾಡಬೇಕೆಂಬ ನಿಯಮವಿಲ್ಲ. ಮತ್ತು ಈ ಮಂತ್ರದಲ್ಲಿ ಅವಯವಶಕ್ತಿಯಿಂದ ಇಷ್ಟ ಲಿಂಗವನ್ನು ದೇಹದಲ್ಲಿ ಧರಿಸಬೇಕೆಂಬ ಅರ್ಥವು ಸ್ಫುಟವಾಗಿರುವಂತೆ

ಸೋಮಯಾಗ ಸಂಬಂಧವಾದ ದೇವತಾ ಪರವಾದ ಅರ್ಥವು ಸ್ಫುಟವಾಗಿಲ್ಲ. ಮತ್ತು ಯಾವ ಮಂತ್ರಗಳು ಯಾವ ಯಾವ ದೇವತೆಗಳ ಪರವಾಗಿ ಅರ್ಥವನ್ನು ಕೊಡುತ್ತವೆಯೋ ಆಯಾಯ ಮಂತ್ರಗಳನ್ನು ಆಯಾಯ ದೇವತಾರಾಧನ ಸಮಯದಲ್ಲಿಯೇ ವಿನಿಯೋಗಿಸಬೇಕೆಂಬ ನಿಯಮವು ಸಹ ಇಲ್ಲ. ಬೇರೆ ಬೇರೆ ದೇವತೆಗಳನ್ನು ಪ್ರಶಂಸಿಸುವ ಮಂತ್ರಗಳನ್ನು ಆ ದೇವತಾ ಸಂಬಂಧವಿಲ್ಲದಿರುವ ಕರ್ಮಗಳಲ್ಲಿ ವಿನಿಯೋಗಿಸುವ ಸಂಪ್ರದಾಯವಿರುವುದಲ್ಲದೆ ಪ್ರಯೋಗದಲ್ಲಿಯೂ ಕಂಡುಬರುತ್ತದೆ. ಹೇಗೆಂದರೆ–"ಅಗ್ನಿರ್ಮೂರ್ಧಾದಿವಃ ಕಕುತ್" ಎಂಬ ಮಂತ್ರವು ಅವಯವಶಕ್ತಿಯಿಂದ ಕೇವಲ ಅಗ್ನಿದೇವತಾ ಪರವಾಗಿದ್ದರೂ ಗೃಹಯಜ್ಞವನ್ನು ಮಾಡುವ ಸಮಯದಲ್ಲಿ ಬರುವ ಸೂರ್ಯಾದಿ ನವಗ್ರಹಗಳ ಪೂಜೆಯಲ್ಲಿಯೂ ಈ ಮಂತ್ರವನ್ನು ವಿನಿಯೋಗಮಾಡಿರುತ್ತಾರೆ. ಮತ್ತು ಪರಮೇಶ್ವರನ ಸಹಸ್ರಶೀರ್ಷತ್ವಾದಿ ವಿರಾಟ್ ಸ್ವರೂಪವನ್ನು ಬೋಧಿಸುವ "ಸಹಸ್ರಶೀರ್ಷಾ ಪುರುಷಃ" ಎಂಬ ಪುರುಷಸೂಕ್ತವನ್ನು "ಯಜೇತ್ಪುರುಷಸೂಕ್ತೇನ ಧನದಂ ವಿಶ್ವರೂಪಿಣಂ" ಎಂಬ ಪ್ರಮಾಣದಿಂದ ಕುಬೇರನ ಪೂಜೆಯಲ್ಲಿ ವಿನಿಯೋಗಮಾಡಿರುತ್ತಾರೆ. ಹೀಗೆ ವಿನಿಯೋಗಮಾಡಿದ ಮಾತ್ರದಿಂದ ಆಯಾಯ ಮಂತ್ರಗಳ ವಾಚ್ಯಾರ್ಥಗಳನ್ನು ಬದಲಾಯಿಸಲು ಆಗುವುದಿಲ್ಲ. ಆದುದರಿಂದ "ಪವಿತ್ರಂ" ಎಂಬ ಮಂತ್ರವನ್ನು ಸೋಮಯಾಗದಲ್ಲಿ ಪ್ರಯೋಗಿಸಿದ್ದರೂ ಬ್ರಹ್ಮಪದವಾಚ್ಯವಾದ ಇಷ್ಟಲಿಂಗವನ್ನು ದೀಕ್ಷಾಸಂಸ್ಕಾರದಿಂದ ಪರಿಶುದ್ಧವಾದ ದೇಹದಲ್ಲಿ ಧರಿಸಬೇಕೆಂಬ ಆ ಮಂತ್ರದ ಯೌಗಿಕಾರ್ಥಕ್ಕೆ ಯಾವ ಬಾಧಕವೂ ಇಲ್ಲವು. ಮತ್ತು ಯಾವ ಮಂತ್ರವು ಯಾವ ಕರ್ಮದಲ್ಲಿ ಯಾವ ದೇವತೆಗಳಲ್ಲಿ ವಿನಿಯೋಗಿಸಲ್ಪಟ್ಟಿರುವುದೊ ಆ ಮಂತ್ರವು ಆ ಕರ್ಮದ ಆ ದೇವತೆಯ ಪರವಾಗಿ ಅರ್ಥವನ್ನು ಕೊಡುವುದೆಂಬ ನಿಯಮವೂ ಸಹ ಎಲ್ಲಾ ಕಡೆಯಲ್ಲಿಯೂ ಅನ್ವಯಿಸಲಾಗುವುದಿಲ್ಲ. ಆಯಾಯ ಪ್ರಕರಣಗಳಲ್ಲಿ ವಿನಿಯುಕ್ತಗಳಾದ ಕೆಲವು ಮಂತ್ರಗಳು ಮಾತ್ರ ಆಯಾಯ ಕರ್ಮಗಳನ್ನೂ ಆಯಾಯ ದೇವತೆಗಳನ್ನೂ ಎಲ್ಲಿ ಪ್ರಕಾಶಪಡಿಸುತ್ತವೆಯೋ ಅಂತಹ ಸ್ಥಳದಲ್ಲಿ ಮಾತ್ರ ಈ ನಿಯಮವನ್ನು ಅಂಗೀಕಾರಮಾಡಬೇಕು. ಹೇಗೆಂದರೆ—"ಕದಾಚನಸ್ತರೀರಸಿ ನೇಂದ್ರಸಶ್ಚಸಿ ದಾಸುಷೇ" ಎಂಬ

ಇಂದ್ರದೇವತಾರೂಪವಾದ ಅರ್ಥವುಳ್ಳ ಈ ಮಂತ್ರವು "ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತಿ" ಎಂಬ ಪ್ರಮಾಣದಿಂದ ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗಿಸಲ್ಪಟ್ಟಿದ್ದರೂ ಮಂತ್ರದ ವಾಚ್ಯಾರ್ಥವೆನಿಸಿದ ಇಂದ್ರದೇವತಾ ವಿಷಯತ್ವವನ್ನು ವಿರೋಧಿಸುವುದಿಲ್ಲ. ಆದರೆ ವಿಧಿಬಲದಿಂದ ಗಾರ್ಹಪತ್ಯೋಪಸ್ಥಾನಾರ್ಥವು ಲಕ್ಷಣಾದಿಗಳಿಂದಲೇ ಸಿದ್ಧಿಸುವುದು. ಇದಕ್ಕೆ "ಐಂದ್ರ್ಯಧಿಕರಣ ನ್ಯಾಯ" ವೆಂದು ಕರೆಯುತ್ತಾರೆ. ಈ ನ್ಯಾಯದಂತೆ "ಪವಿತ್ರಂ........ಅಶ್ನುತೇ" ಎಂಬ ಮಂತ್ರವು ಸೋಮಯಾಗದಲ್ಲಿ ದಶಾಪವಿತ್ರಾನು (ಸೋಮರಸವನ್ನು ಶೋಧಿಸುವ ಬಟ್ಟೆ) ಮಂತ್ರಣಕ್ಕೆ ಅಂಗವಾಗಿದ್ದರೂ ಲಿಂಗಧಾರಣ ರೂಪವಾದ ವಾಚ್ಯಾರ್ಥಕ್ಕೆ ಯಾವ ಬಾಧಕವೂ ಇಲ್ಲವೆಂದು ತಿಳಿಯಬೇಕು.

ಶಂಕೆ :—ಸೋಮಯಾಗ ಪ್ರಕರಣದಲ್ಲಿ ಹೇಳಿದ ಈ ಮಂತ್ರವನ್ನು ಲಿಂಗಧಾರಣ ಪ್ರಕರಣದಲ್ಲಿ ಅನ್ವಯಿಸುವುದು ಪ್ರಕರಣವಿರೋಧವಲ್ಲವೆ?

ಸಮಾಧಾನ :—

ಸೋಮಃ ಪವತೇರ್ಜನಿತಾ ಮತೀನಾಂ ಜನಿತಾ
ದೀವೊ ಜನಿತಾ ಪೃಥಿವ್ಯಾ ಜನಿತಾ ಸೂರ್ಯಸ್ಯ
ಜನಿತೇಂದ್ರಸ್ಯ ಜನಿತೋತ ವಿಷ್ಣೋಃ"

(ಶ್ರುತಿ)

ಅವಯವಾರ್ಥ :—ಸೋಮಃ-ಸೋಮಲತೆಯು, ಪವತೇಃ-ಪವಿತ್ರವಾದ ಯಾಗವನ್ನು, ಜನಿತಾ - ಹುಟ್ಟಿಸಿತು. ಮತೀನಾಂ - ಯಾಗಮಾಡಬೇಕೆಂಬ ಸದ್ಬುದ್ಧಿಯನ್ನು, ಜನಿತಾ-ಹುಟ್ಟಿಸಿತು. ದಿವಃ-ಯಾಗದ ಫಲವೆನಿಸಿದ ಸ್ವರ್ಗಸಿದ್ಧಿಯನ್ನು ಜನಿತಾ-ಹುಟ್ಟಿಸಿತು. ಪೃಥಿವ್ಯಾಃ-ಭೂಮಿಯನ್ನು, ಜನಿತಾ-ಹುಟ್ಟಿಸಿತು. ಸೂರ್ಯಸ್ಯ-ಸೂರ್ಯನನ್ನು, ಜನಿತಾ-ಹುಟ್ಟಿಸಿತು. ಇಂದ್ರಸ್ಯ-ಇಂದ್ರನನ್ನು, ಜನಿತಾ-ಹುಟ್ಟಿಸಿತು. ವಿಷ್ಣೋಃ-ವಿಷ್ಣುವನ್ನು, ಜನಿತಾ-ಹುಟ್ಟಿಸಿತು ಎಂದು ಸಾಮಾನ್ಯವಾದ ಅರ್ಥವು. ಇಲ್ಲಿ ಜಡಪದಾರ್ಥವಾದ ಸೋಮಲತೆಯಿಂದ ಇಂದ್ರ, ಸೂರ್ಯ, ವಿಷ್ಣು ಮುಂತಾದ ದೇವತೆಗಳು ಉತ್ಪನ್ನರಾದರೆಂದು ಹೇಳುವುದು ಸಂಭವಿಸುವುದಿಲ್ಲ. ಆದುದ

ರಿಂದ ಆ ಸೋಮಪದಕ್ಕೆ " ಉಮಯಾ ಸಹಿತಸ್ಸೋಮಃ " ಶಕ್ತಿಯಿಂದೊಡಗೂಡಿದ ಶಿವನು ಎಂಬ ವ್ಯುತ್ಪತ್ತಿಯಿಂದ ಶಿವನೆಂದು ಅರ್ಥಮಾಡುವುದೇ ಉತ್ತಮವು. ಅಂತಹ ಶಕ್ತಿವಿಶಿಷ್ಟ ಪರಶಿವನಿಗೆ ಸಕಲದೇವತಾಜನಕತ್ವವು ಸಂಭವಿಸುತ್ತದೆಯಲ್ಲದೆ ಸೋಮಯಾಗವು ರುದ್ರದೇವತಾತ್ಮಕವಾದುದರಿಂದ ಪ್ರಕರಣಕ್ಕೆ ವಿರೋಧವೂ ಸಂಭವಿಸುವುದಿಲ್ಲ. ಮತ್ತು " ಅಯಂ ಸೋಮಃ ಕಪರ್ದಿನಃ " ಎಂಬ ಶ್ರುತಿವಾಕ್ಯಾಧಾರದಿಂದ ಸೋಮಯಾಗವು ಕೇವಲ ಶಿವಸಂಬಂಧವುಳ್ಳುದೆಂದು ಸ್ಪಷ್ಟವಾಗುತ್ತದೆ. ಮತ್ತು " ರುದ್ರ ಆಹೂತಃ " ಎಂಬ ಶ್ರುತಿಬಲದಿಂದ ಸೋಮಪದಸ್ಥಾನದಲ್ಲಿ ರುದ್ರಪದವನ್ನು ಪ್ರಯೋಗಿಸಿರುವುದರಿಂದ ಸೋಮ ರುದ್ರರೀರ್ವರೂ ಒಂದೇ ಸ್ವರೂಪರಾಗಿರುತ್ತಾರೆ. ಮತ್ತು

ಅಹಂ ಹಿ ಸರ್ವಹವಿಷಾಂ ಭೋಕ್ತಾ ಚೈವ ಫಲಪ್ರದಃ ।
ಸರ್ವದೇವತನೂರ್ಭೂತ್ವಾ ಸರ್ವಾತ್ಮಾ ಸರ್ವಸಂಸ್ಥಿತಃ ॥

(ಕೂರ್ಮಪುರಾಣ)

**ಅರ್ಥ :**—ಸಮಸ್ತ ದೇವತಾಶರೀರಾಕಾರದಿಂದ ಸಮಸ್ತ ಹವಿಸ್ಸನ್ನು ಭುಂಜಿಸುವವನು, ಸರ್ವಫಲಗಳನ್ನು ಕೊಡುವವನು ನಾನೋರ್ವನೇ ಆಗಿರುವೆನು ಎಂದು ಶಿವನು ಬೋಧಿಸಿರುವುದರಿಂದ ಸೋಮಯಾಗವು ರುದ್ರದೇವತಾತ್ಮಕವೆಂದೇ ನಿಶ್ಚಯವಾಗುತ್ತದೆ. ಇದರಿಂದ "ಪವಿತ್ರಂ........ ಅಶ್ನುತೇ"ಎಂಬ ಮಂತ್ರವು ಸೋಮಯಾಗದಲ್ಲಿ ವಿನಿಯೋಗಿಸಲ್ಪಟ್ಟದ್ದರೂ ಲಿಂಗಧಾರಣಪರವಾದ ಅರ್ಥವನ್ನು ಮಾಡುವುದರಿಂದ ಪ್ರಕರಣವಿರೋಧವು ಸಂಭವಿಸುವುದಿಲ್ಲ.

**ಶಂಕೆ :**—ಈ ಮಂತ್ರವು ಲಿಂಗಧಾರಣವನ್ನು ಪ್ರತಿಪಾದಿಸಿದರೂ ವಿಧ್ಯರ್ಥವನ್ನು ಬೋಧಿಸುವ ಲಿಙ್–ಲೋಟ್–ತವ್ಯ ಪ್ರತ್ಯಯಾಂತಗಳಾದ ಪದಗಳು ಈ ಮಂತ್ರದಲ್ಲಿ ಇಲ್ಲದೆ ಇರುವುದರಿಂದ ಲಿಂಗಧಾರಣ ವಿಧಾಯಕವಾದ ಮಂತ್ರವೆಂದು ಹೇಳಲಾಗುವುದಿಲ್ಲ. ಒಂದುವೇಳೆ " ವ್ರೀಹೀನ್ ಪ್ರೋಕ್ಷತಿ " " ವ್ರೀಹೀನವಹಂತಿ " ಮುಂತಾದ ಸ್ಥಳಗಳಲ್ಲಿ ಅಂತಹ ಲಿಙಾದಿ ಪ್ರತ್ಯಯಗಳಿಲ್ಲದಿದ್ದರೂ ವಿಧಿಪ್ರಯೋಜಕ ರೂಪವನ್ನು ಪೂರ್ವ

ಇಂದ್ರದೇವತಾರೂಪವಾದ ಅರ್ಥವುಳ್ಳ ಈ ಮಂತ್ರವು "ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತಿ" ಎಂಬ ಪ್ರಮಾಣದಿಂದ ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗಿಸಲ್ಪಟ್ಟಿದ್ದರೂ ಮಂತ್ರದ ವಾಚ್ಯಾರ್ಥವೆನಿಸಿದ ಇಂದ್ರದೇವತಾ ವಿಷಯತ್ವವನ್ನು ವಿರೋಧಿಸುವುದಿಲ್ಲ. ಆದರೆ ವಿಧಿಬಲದಿಂದ ಗಾರ್ಹಪತ್ಯೋಪಸ್ಥಾನಾರ್ಥವು ಲಕ್ಷಣಾದಿಗಳಿಂದಲೇ ಸಿದ್ಧಿಸುವುದು. ಇದಕ್ಕೆ "ಐಂದ್ರ್ಯಧಿಕರಣ ನ್ಯಾಯ" ವೆಂದು ಕರೆಯುತ್ತಾರೆ. ಈ ನ್ಯಾಯದಂತೆ "ಪವಿತ್ರಂ........ಅಶ್ನುತೇ" ಎಂಬ ಮಂತ್ರವು ಸೋಮಯಾಗದಲ್ಲಿ ದಶಾಪವಿತ್ರಾನು (ಸೋಮರಸವನ್ನು ಶೋಧಿಸುವ ಬಟ್ಟೆ) ಮಂತ್ರಣಕ್ಕೆ ಅಂಗವಾಗಿದ್ದರೂ ಲಿಂಗಧಾರಣ ರೂಪವಾದ ವಾಚ್ಯಾರ್ಥಕ್ಕೆ ಯಾವ ಬಾಧಕವೂ ಇಲ್ಲವೆಂದು ತಿಳಿಯಬೇಕು.

ಶಂಕೆ :—ಸೋಮಯಾಗ ಪ್ರಕರಣದಲ್ಲಿ ಹೇಳಿದ ಈ ಮಂತ್ರವನ್ನು ಲಿಂಗಧಾರಣ ಪ್ರಕರಣದಲ್ಲಿ ಅನ್ವಯಿಸುವುದು ಪ್ರಕರಣವಿರೋಧವಲ್ಲವೆ ?

ಸಮಾಧಾನ :—

ಸೋಮಃ ಪವತೇರ್ಜನಿತಾ ಮತೀನಾಂ ಜನಿತಾ
ದೀವೊ ಜನಿತಾ ಪೃಥಿವ್ಯಾ ಜನಿತಾ ಸೂರ್ಯಸ್ಯ
ಜನಿತೇಂದ್ರಸ್ಯ ಜನಿತೋತ ವಿಷ್ಣೋಃ"

(ಶ್ರುತಿ)

ಅವಯವಾರ್ಥ :—ಸೋಮಃ-ಸೋಮಲತೆಯು, ಪವತೇಃ-ಪವಿತ್ರವಾದ ಯಾಗವನ್ನು, ಜನಿತಾ - ಹುಟ್ಟಿಸಿತು. ಮತೀನಾಂ - ಯಾಗಮಾಡಬೇಕೆಂಬ ಸದ್ಬುದ್ಧಿಯನ್ನು, ಜನಿತಾ-ಹುಟ್ಟಿಸಿತು. ದಿವಃ-ಯಾಗದ ಫಲವೆನಿಸಿದ ಸ್ವರ್ಗಸಿದ್ಧಿಯನ್ನು ಜನಿತಾ-ಹುಟ್ಟಿಸಿತು. ಪೃಥಿವ್ಯಾಃ-ಭೂಮಿಯನ್ನು, ಜನಿತಾ-ಹುಟ್ಟಿಸಿತು. ಸೂರ್ಯಸ್ಯ-ಸೂರ್ಯನನ್ನು, ಜನಿತಾ-ಹುಟ್ಟಿಸಿತು. ಇಂದ್ರಸ್ಯ-ಇಂದ್ರನನ್ನು, ಜನಿತಾ-ಹುಟ್ಟಿಸಿತು. ವಿಷ್ಣೋಃ-ವಿಷ್ಣುವನ್ನು, ಜನಿತಾ-ಹುಟ್ಟಿಸಿತು ಎಂದು ಸಾಮಾನ್ಯವಾದ ಅರ್ಥವು. ಇಲ್ಲಿ ಜಡಪದಾರ್ಥವಾದ ಸೋಮಲತೆಯಿಂದ ಇಂದ್ರ, ಸೂರ್ಯ, ವಿಷ್ಣು ಮುಂತಾದ ದೇವತೆಗಳು ಉತ್ಪನ್ನರಾದರೆಂದು ಹೇಳುವುದು ಸಂಭವಿಸುವುದಿಲ್ಲ. ಆದುದ

ರಿಂದ ಆ ಸೋಮಪದಕ್ಕೆ "ಉಮಯಾ ಸಹಿತಸ್ಸೋಮಃ" ಶಕ್ತಿಯಿಂದೊಡಗೂಡಿದ ಶಿವನು ಎಂಬ ವ್ಯುತ್ಪತ್ತಿಯಿಂದ ಶಿವನೆಂದು ಅರ್ಥಮಾಡುವುದೇ ಉತ್ತಮವು. ಅಂತಹ ಶಕ್ತಿವಿಶಿಷ್ಟ ಪರಶಿವನಿಗೆ ಸಕಲದೇವತಾಜನಕತ್ವವು ಸಂಭವಿಸುತ್ತದೆಯಲ್ಲದೆ ಸೋಮಯಾಗವು ರುದ್ರದೇವತಾತ್ಮಕವಾದುದರಿಂದ ಪ್ರಕರಣಕ್ಕೆ ವಿರೋಧವೂ ಸಂಭವಿಸುವುದಿಲ್ಲ. ಮತ್ತು "ಅಯಂ ಸೋಮಃ ಕಪರ್ದಿನಃ" ಎಂಬ ಶ್ರುತಿವಾಕ್ಯಾಧಾರದಿಂದ ಸೋಮಯಾಗವು ಕೇವಲ ಶಿವಸಂಬಂಧವುಳ್ಳುದೆಂದು ಸ್ಪಷ್ಟವಾಗುತ್ತದೆ. ಮತ್ತು "ರುದ್ರ ಆಹೂತಃ" ಎಂಬ ಶ್ರುತಿಬಲದಿಂದ ಸೋಮಪದಸ್ಥಾನದಲ್ಲಿ ರುದ್ರಪದವನ್ನು ಪ್ರಯೋಗಿಸಿರುವುದರಿಂದ ಸೋಮ ರುದ್ರರೀರ್ವರೂ ಒಂದೇ ಸ್ವರೂಪರಾಗಿರುತ್ತಾರೆ. ಮತ್ತು

ಅಹಂ ಹಿ ಸರ್ವಹವಿಷಾಂ ಭೋಕ್ತಾ ಚೈವ ಫಲಪ್ರದಃ ।
ಸರ್ವದೇವತನೂರ್ಭೂತ್ವಾ ಸರ್ವಾತ್ಮಾ ಸರ್ವಸಂಸ್ಥಿತಃ ॥

(ಕೂರ್ಮಪುರಾಣ)

**ಅರ್ಥ :**—ಸಮಸ್ತ ದೇವತಾಶರೀರಾಕಾರದಿಂದ ಸಮಸ್ತ ಹವಿಸ್ಸನ್ನು ಭುಂಜಿಸುವವನು, ಸರ್ವಫಲಗಳನ್ನು ಕೊಡುವವನು ನಾನೊರ್ವನೇ ಆಗಿರುವೆನು ಎಂದು ಶಿವನು ಬೋಧಿಸಿರುವುದರಿಂದ ಸೋಮಯಾಗವು ರುದ್ರದೇವತಾತ್ಮಕವೆಂದೇ ನಿಶ್ಚಯವಾಗುತ್ತದೆ. ಇದರಿಂದ "ಪವಿತ್ರಂ........ ಅಶ್ನುತೇ"ಎಂಬ ಮಂತ್ರವು ಸೋಮಯಾಗದಲ್ಲಿ ವಿನಿಯೋಗಿಸಲ್ಪಟ್ಟಿದ್ದರೂ ಲಿಂಗಧಾರಣಪರವಾದ ಅರ್ಥವನ್ನು ಮಾಡುವುದರಿಂದ ಪ್ರಕರಣವಿರೋಧವು ಸಂಭವಿಸುವುದಿಲ್ಲ.

**ಶಂಕೆ :**—ಈ ಮಂತ್ರವು ಲಿಂಗಧಾರಣವನ್ನು ಪ್ರತಿಪಾದಿಸಿದರೂ ವಿಧ್ಯರ್ಥವನ್ನು ಬೋಧಿಸುವ ಲಿಙ್-ಲೋಟ್-ತವ್ಯ ಪ್ರತ್ಯಯಾಂತಗಳಾದ ಪದಗಳು ಈ ಮಂತ್ರದಲ್ಲಿ ಇಲ್ಲದೆ ಇರುವುದರಿಂದ ಲಿಂಗಧಾರಣ ವಿಧಾಯಕವಾದ ಮಂತ್ರವೆಂದು ಹೇಳಲಾಗುವುದಿಲ್ಲ. ಒಂದುವೇಳೆ "ವ್ರೀಹೀನ್ ಪ್ರೋಕ್ಷತಿ" "ವ್ರೀಹೀನವಹಂತಿ" ಮುಂತಾದ ಸ್ಥಳಗಳಲ್ಲಿ ಅಂತಹ ಲಿಂಙಾದಿ ಪ್ರತ್ಯಯಗಳಿಲ್ಲದಿದ್ದರೂ ವಿಧಿಪ್ರಯೋಜಕ ರೂಪವನ್ನು ಪೂರ್ವ

ಮೀಮಾಂಸಾಕಾರರು ಅಂಗೀಕಾರಮಾಡಿರುವಂತೆ ಇಲ್ಲಿಯೂ ಅಂತಹ ವಿಧಿ ಪ್ರಯೋಜಕ ರೂಪವನ್ನು ಅಂಗೀಕರಿಸಿದರೂ ಈ ಮಂತ್ರದಿಂದ ತೋರುವ ಲಿಂಗಧಾರಣವೂ. ಆ ಲಿಂಗದ ಪವಿತ್ರತೆಯೂ ಲಿಂಗಧಾರಣ ಯೋಗ್ಯತೆ ಯನ್ನುಂಟುಮಾಡುವ ದೀಕ್ಷಾಸಂಸ್ಕಾರವೂ ಇವುಗಳೆಲ್ಲ "ಸರ್ವಲಿಂಗಂ ಸ್ಥಾಪಯತಿ" ಎಂಬ ಯಜುರ್ವೇದ ಮಂತ್ರದಿಂದಲೇ ಹೇಳಲ್ಪಟ್ಟಿರುತ್ತವೆ. ಹೀಗೆ ಒಂದು ವಾಕ್ಯದಿಂದ ಒಂದು ನಿಯಮವನ್ನು ವಿಧಾನಮಾಡಿದಮೇಲೆ ಮತ್ತೊಂದು ವಾಕ್ಯದಿಂದ ಅದೇ ನಿಯಮವನ್ನು ವಿಧಾನಮಾಡುವುದು ಅಪೂರ್ವವಿಧಿಯ ಲಕ್ಷಣಕ್ಕೆ ಭಂಗವುಂಟಾಗುತ್ತದೆ. ಅಲ್ಲದೆ. "ಅನ್ಯಥಾ ಸಿದ್ಧ" ಎಂಬ ದೋಷವು ಸಹ ಬರುತ್ತದೆ.

ಸಮಾಧಾನ:—"ಸರ್ವಲಿಂಗಂ ಸ್ಥಾಪಯತಿ" ಎಂಬ ವಾಕ್ಯವು ಯಜುರ್ವೇದದ ವಾಕ್ಯವು. "ಪವಿತ್ರಂ ತೇ" ಎಂಬ ವಾಕ್ಯವು ಋಗ್ವೇದದ ವಾಕ್ಯವು. ಹೀಗೆ ವೇದಗಳೇ ಭಿನ್ನಗಳಾದಮೇಲೆ ಅಪೂರ್ವವಿಧಿಗೆ ಆವಬಾಧಕವೂ ಇಲ್ಲ. ಮತ್ತು ಒಂದು ವೇದವಾಕ್ಯವನ್ನು ತೆಗೆದುಕೊಂಡು ಮತ್ತೊಂದು ವೇದದ ವಾಕ್ಯಕ್ಕೆ "ಅನ್ಯಥಾಸಿದ್ಧ"ವೆಂಬ ದೋಷವನ್ನು ಹೇಳಬಾರದು. ಹಾಗೆ ಭಿನ್ನ ಭಿನ್ನ ಶಾಖೆಗಳಲ್ಲಿ ಹೇಳಿರುವ ವಾಕ್ಯಗಳಿಗೆ ಅನ್ಯಥಾಸಿದ್ಧ ದೋಷವನ್ನು ಹೇಳುವುದಾದರೆ ಅಗ್ನಿಹೊತ್ರಾದಿ ಕರ್ಮಗಳು ಋಗ್ವೇದದಲ್ಲಿ ಹೇಳಿರುವಂತೆ ಯಜುರ್ವೇದದಲ್ಲಿಯೂ ಹೇಳಲ್ಪಟ್ಟಿರುವದರಿಂದ ಪ್ರಮಾಣಾಂತರದಿಂದ ಪ್ರಾಪ್ತವೇ ಉಂಟಾದುದರಿಂದ ಅಂತಹ ಅಗ್ನಿಹೋತ್ರಾದಿ ಕರ್ಮಗಳಿಗೂ ಅನ್ಯಥಾಸಿದ್ಧವೆಂಬ ದೋಷವನ್ನು ಹೇಳಬೇಕಾಗುವುದು. ಆದುದರಿಂದ ಭಿನ್ನಶಾಖೆಗಳಲ್ಲಿ ಹೇಳಲ್ಪಟ್ಟ ವಾಕ್ಯಗಳಿಗೆ ಒಂದಕ್ಕೊಂದು ಸಂಬಂಧವನ್ನು ಕಲ್ಪಿಸಿಕೊಳ್ಳದೆ ಪ್ರತ್ಯೇಕವಾಗಿ ಅವುಗಳೆಲ್ಲ ವಿಧಿವಾಕ್ಯಗಳೆಂದೇ ಅಂಗೀಕಾರಮಾಡಬೇಕಾಗಿರುವುದರಿಂದ ಪ್ರಕೃತದಲ್ಲಿ "ಪವಿತ್ರಂ ತೇ" ಎಂಬ ಮಂತ್ರವು ಭಿನ್ನಶಾಖೆಯಲ್ಲಿ ಹೇಳಲ್ಪಟ್ಟು ಲಿಂಗಧಾರಣವಿಧಾಯಕವಾಗುವುದರಿಂದ ಅನ್ಯಥಾಸಿದ್ಧ ದೋಷವನ್ನು ಹೇಳಕೂಡದು.

ಶಂಕೆ:—ಈ ಮಂತ್ರದಲ್ಲಿ ಲಿಂಗಧಾರಣತ್ವ, ಪವಿತ್ರತ್ವಾದಿಗಳು ಸ್ಪಷ್ಟವಾಗಿದ್ದರೂ ಅದರಿಂದಾಗುವ ಫಲವನ್ನು ಹೇಳದಿರುವುದರಿಂದ ಫಲವಿಲ್ಲದ ಅಂತಹ ಲಿಂಗಧಾರಣವನ್ನೇಕೆ ಅಂಗೀಕರಿಸಬೇಕು?

ಸಮಾಧಾನ :—ಲಿಂಗಧಾರಣಕ್ಕೂ, ಮೋಕ್ಷಕ್ಕೂ ಕಾರ್ಯಕಾರಣ ಭಾವವಿರುತ್ತದೆ. ಇಷ್ಟಲಿಂಗಧಾರಣವೇ ಕಾರಣವು, ಮುಕ್ತಿಯೇ ಕಾರ್ಯವು. ಎಲ್ಲಿ ಕಾರಣವಿದೆಯೋ ಅಲ್ಲಿ ಕಾರ್ಯವುಂಟೆಂಬುದೇ ಅನ್ವಯ ವ್ಯಾಪ್ತಿಯು. ಎಲ್ಲಿ ಕಾರಣವಿಲ್ಲವೋ ಅಲ್ಲಿ ಕಾರ್ಯವೂ ಇಲ್ಲವೆಂಬುದೇ ವ್ಯತಿರೇಕವ್ಯಾಪ್ತಿಯು. ಎಲ್ಲಿ ಹೊಗೆಯಾಡುವುದೊ ಅಲ್ಲಿ ಬೆಂಕಿಯುಂಟೆಂದು ಹೇಳುವುದೇ ಅನ್ವಯವ್ಯಾಪ್ತಿಗೆ ಉದಾಹರಣೆಯು. ಎಲ್ಲಿ ಹೊಗೆಯಾಡುವುದಿಲ್ಲವೋ ಅಲ್ಲಿ ಬೆಂಕಿಯಿರುವುದಿಲ್ಲವೆಂಬುದೇ ವ್ಯತಿರೇಕವ್ಯಾಪ್ತಿಗೆ ಉದಾಹರಣೆಯು. ಮೋಕ್ಷಾಪೇಕ್ಷಿಗಳಾದ ವೀರಶೈವರು ದೀಕ್ಷೆಯಿಂದ ಪರಿಶುದ್ಧರಾಗಿ ಲಿಂಗವನ್ನು ಧರಿಸಬೇಕು. ಯಾರು ಮೋಕ್ಷಾಪೇಕ್ಷಿಗಳಲ್ಲವೊ ಅವರು ಲಿಂಗವನ್ನು ಧರಿಸಬೇಕಾದುದಿಲ್ಲ. ಹೀಗೆ ಮೋಕ್ಷಾಭಾವದಲ್ಲಿ ಲಿಂಗಧಾರಣಾಭಾವವ್ಯಾಪಕತ್ವಬೋಧನದ್ವಾರಾ ಲಿಂಗಧಾರಣರಹಿತರಾದ ವೀರಶೈವರಿಗೆ ಮುಕ್ತಿಯಿಲ್ಲವೆಂದು ವ್ಯತಿರೇಕ ವ್ಯಾಪ್ತಿಯಿಂದ ಲಿಂಗಧಾರಣವು ಸಿದ್ಧವಾಗುತ್ತದೆ. ಮುಖ್ಯವಾಗಿ "ಅತಪ್ತತನುರ್ನತದಾಮೋ ಅಶ್ನುತೇ" ಎಂಬ ಉತ್ತರಾರ್ಧದ ಮಂತ್ರದಲ್ಲಿ ವೇಧಾ, ಕ್ರಿಯಾ, ಮನು, ಎಂಬ ಮೂರು ದೀಕ್ಷೆಗಳಿಂದ ಆಣವಾದಿ ಮಲಗಳನ್ನು ಯಾವನು ನಾಶಪಡಿಸಿಕೊಳ್ಳುವುದಿಲ್ಲವೋ ಅಪಕ್ವಮತಿಯಾದ ಆ ಮಾನವನು ಶಿವಸ್ವರೂಪವನ್ನು ಪಡೆಯಲಾರನೆಂದು ಸ್ಪಷ್ಟವಾಗಿ ಹೇಳಿದೆ.

ಲಿಂಗಾಂಗಸಂಗಿನೋ ವತ್ಸ ಪುನರ್ಜನ್ಮ ನ ವಿದ್ಯತೇ ॥

(ಶಂಕರ ಸಂಹಿತೆ)

ವಿಶಿಷ್ಟಂ ಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರಣಾತ್ ।
ಯೇ ಧಾರಯಂತಿ ಹೃದಯೇ ಲಿಂಗಂ ಚಿದ್ರೂಪಮೈಶ್ವರಮ್ ॥
ನ ತೇಷಾಂ ಪುನರಾವೃತ್ತಿ ಘೋರಸಂಸಾರಮಂಡಲೇ ॥

(ಸಿದ್ಧಾಂತ ಶಿಖಾಮಣಿ ಪ.೬)

ಇತ್ಯಾದಿ ಪ್ರಮಾಣಗಳು ಲಿಂಗಧಾರಣರೂಪವಾದ ದೀಕ್ಷೆಯನ್ನು ಪಡೆಯದ ಮಾನವನು ಮೋಕ್ಷರೂಪವಾದ ಮಹಾಫಲವನ್ನು ಪಡೆಯಲಾರನೆಂದು ಅನುಮಾನಿಸಿರುವುದರಿಂದ ಮೋಕ್ಷರೂಪವಾದ ಕಾರ್ಯೋತ್ಪತ್ತಿಗೆ ಲಿಂಗಧಾರಣವೇ ಅಸಾಧಾರಣಕಾರಣವೆಂಬುದು ಸ್ಪಷ್ಟವಾಗುತ್ತದೆ.

ಪೂರ್ವಾಚಾರ್ಯರು ವೇದಮಂತ್ರಗಳಿಗೆ ತಮ್ಮ ತಮ್ಮ ಮತಾನುಗುಣವಾಗಿ ವ್ಯಾಖ್ಯಾನಗಳನ್ನು ಬರೆದಿರುತ್ತಾರೆ. ವೀರಶೈವಮತಾಚಾರ್ಯರು ಈ " ಪವಿತ್ರಂ ತೇ " ಎಂಬ ಮಂತ್ರಕ್ಕೆ ಇಷ್ಟಲಿಂಗಧಾರಣ ಪರವಾಗಿ ಅರ್ಥಮಾಡಿದರೆ, ವಿಶಿಷ್ಟಾದ್ವೈತ ಮತಾಚಾರ್ಯರು ತಪ್ತಚಕ್ರಧಾರಣ ಪರವಾಗಿ ಅರ್ಥಮಾಡಿರುತ್ತಾರೆ. ಹೀಗೆ ಅವರವರ ಇಚ್ಛಾನುಸಾರವಾಗಿ ಕಾಮಧೇನು, ಚಿಂತಾಮಣಿಗಳಂತೆ ನಾನಾವಿಧವಾದ ಅರ್ಥಗಳನ್ನುಕೊಡುವ ಶಕ್ತಿಯು ಮಂತ್ರಗಳಿಗಿರುತ್ತದೆ. ಆದರೆ ಒಬ್ಬ ಮತಾಚಾರ್ಯರು ಮಾಡಿದ ವ್ಯಾಖ್ಯಾನವು ಮತ್ತೊಬ್ಬ ಮತಾಚಾರ್ಯರಿಗೆ ಸರಿಬೀಳುವುದಿಲ್ಲ. ತಾವು ಉಪಾಸಿಸದ ದೇವತಾ ವಿಷಯಕವಾದ ಮಂತ್ರಾರ್ಥದಲ್ಲಿ ಅಸ್ವರಸೋದ್ಭಾವನೆಯನ್ನುಂಟುಮಾಡಿ ತಾವು ಉಪಾಸಿಸುವ ದೇವತಾ ವಿಷಯಕವಾದ ಅರ್ಥವನ್ನು ಬಲಪಡಿಸುವದರಿಂದ ತಮ್ಮ ಉಪಾಸ್ಯದೇವತೆಯಲ್ಲಿ ಉಪಾಸಕರಿಗೆ ಆಸಕ್ತಿಯನ್ನೂ ಪ್ರವೃತ್ತಿಯನ್ನೂ ಉಂಟುಮಾಡಬೇಕೆಂಬ ಆಶಯವಲ್ಲದೆ ವಸ್ತುತಃ ಇತರ ದೇವತೆಯನ್ನಾಗಲಿ ಅಥವಾ ಇತರ ಧರ್ಮಗಳನ್ನಾಗಲಿ ನಿಂದಿಸಬೇಕೆಂಬುದು. ಅವರ ತಾತ್ಪರ್ಯವಲ್ಲ. ಇದಕ್ಕಾಗಿ ಪ್ರತಿಯೊಬ್ಬ ಮತಾಚಾರ್ಯರು " ನಹಿ ನಿಂದಾನ್ಯಾಯವನ್ನು ಉದಾಹರಿಸಿರುತ್ತಾರೆ. ಪ್ರಕೃತದಲ್ಲಿ " ಪವಿತ್ರಂ ತೇ " ಎಂಬ ಮಂತ್ರಕ್ಕೆ ಶ್ರೀರಾಮಾನುಜಾಚಾರ್ಯರು ಹೇ ಬ್ರಹ್ಮಣಸ್ಪತೇ!–ಚತುರ್ಮುಖ ಬ್ರಹ್ಮೋತ್ಪಾದಕನಾದ ನಾರಾಯಣನೇ, ತೇ–ನಿನ್ನ, ಪವಿತ್ರಂ–ಚಕ್ರಾಯುಧವು. ವಿತತಂ--ವಿಸ್ತಾರವಾದುದು, ಪ್ರಭುಃ -- ನಿಖಿಲಭುವನನಿಯಾಮಕನಾದ ನೀನು, ಗಾತ್ರಾಣಿ-ಭಕ್ತರ ದೇಹಗಳನ್ನು, ಪರ್ಯೇಷಿ-ಹೊಂದಿರುತ್ತಿ, ಆದುದರಿಂದ ಅತಪ್ತತನುಃ-ತಪ್ತಚಕ್ರಾಂಕನವಿಲ್ಲದವನು. ತತ್-ಆ ನಾರಾಯಣ ಸ್ವರೂಪವನ್ನು, ಆಮಃ-ಚಿತ್ತವು ಅಪಕ್ವವಾದುದರಿಂದ, ನಾಶ್ನುತೇ-ಸಾಕ್ಷಾತ್ಕಾರಪಡೆಯುವುದಿಲ್ಲ." ಎಂದು ವ್ಯಾಖ್ಯಾನಮಾಡಿರುತ್ತಾರೆ.

ಈ ವ್ಯಾಖ್ಯಾನದ ಮೇಲೆ ವೀರಶೈವ ಮತಾಚಾರ್ಯರು ಅನೇಕ ವಿಧವಾಗಿ ಅಸ್ವಾರಸ್ಯವನ್ನು ತೋರಿಸುವುದಲ್ಲದೆ ತಪ್ತಲಿಂಗ, ತಪ್ತಚಕ್ರಧಾರಣವು ಅಶ್ರೌತವೆಂಬುವ ವಿಷಯದಲ್ಲಿ ಪ್ರಮಾಣಗಳನ್ನು ತೋರಿಸಿ ಈ ಮಂತ್ರವು ಸೋಮಪ್ರಕರಣದಲ್ಲಿ ಹೇಳಲ್ಪಟ್ಟುದರಿಂದ ಲಿಂಗಧಾರಣ ಪರ

ವೆಂದು ಅರ್ಥಮಾಡುವುದೇ ಸಾಧುವಾದುದೆಂದು ಹೇಳಿ ಶಿವೋಪಾಸನೆಯಲ್ಲಿ ಪರಮಭಕ್ತಿಯನ್ನು ತೋರಿಸುತ್ತಾ.

ಯೋ ದೇವಾನಾಂ ಪ್ರಥಮಂ ಪುರಸ್ತಾ
ದ್ವಿಶ್ವಾಧಿಕೋ ರುದ್ರೋ ಮಹರ್ಷಿಃ ।
ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸ ನೋ ದೇವಃ
ಶುಭಯಾ ಸ್ಮೃತ್ಯಾ ಸಂಯುನಕ್ತು ॥

(ಮಹಾನಾರಾಯಣೋಪನಿಷತ್ತು.)

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ।
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥

(ಶ್ವೇತಾಶ್ವತರ)

ಶಿವನು ಚತುರ್ಮುಖ ಬ್ರಹ್ಮನನ್ನು ಹುಟ್ಟಿಸಿ ಆತನಿಗೆ ನಾಲ್ಕು ವೇದಗಳನ್ನು ಉಪದೇಶಮಾಡಿ ಪ್ರಪಂಚವನ್ನು ಸೃಷ್ಟಿಮಾಡುವುದರಲ್ಲಿ ನಿಯೋಜಿಸಿದನೆಂದು ಅನಂತಶ್ರುತಿಗಳು ಹೇಳುವುದರಿಂದ "ಬ್ರಹ್ಮಣಸ್ಪತೇ" ಎಂಬ ಪದಕ್ಕೆ ಪರಶಿವನೆಂದು ವ್ಯಾಖ್ಯಾನಮಾಡಿ "ಪವಿತ್ರಂ" ಎಂಬ ಪದಕ್ಕೆ ಶಿವಲಿಂಗವೆಂದು ನಿರ್ಧರಿಸಿರುತ್ತಾರೆ. ಇದಲ್ಲದೆ "ಸರ್ವಲಿಂಗಂ ಸ್ಥಾಪಯತಿ, ಪಾಣಿಮಂತ್ರಂ ಪವಿತ್ರಂ" ಎಂಬ ಮಂತ್ರದಲ್ಲಿರುವ ಪವಿತ್ರಪದದ ಸಮೀಪದಲ್ಲಿ ಲಿಂಗಪದವಿರುವುದರಿಂದ "ವಜ್ರೋ ವಾ ಆಜ್ಯಂ" ಎಂಬ ಶ್ರುತಿಯಲ್ಲಿರುವ ಆಜ್ಯ (ತುಪ್ಪ) ಪದದ ಸಮೀಪದಲ್ಲಿರುವ ವಜ್ರಪದವನ್ನು ಸಂಸ್ಕೃತವಾದ ಆಜ್ಯಪರವೆಂದು ಮೀಮಾಂಸಾಕಾರರು ನಿರ್ಣಯಿಸಿರುವಂತೆ ಪವಿತ್ರಪದವು ಲಿಂಗವೆಂಬ ಅರ್ಥವನ್ನೇ ಕೊಡುತ್ತದೆ. ಮತ್ತು "ಪಾಣಿಮಂತ್ರಂ" ಎಂಬಲ್ಲಿರುವ ಮಂತ್ರಪದವೂ ಸಹ "ಮನನಾತ್ ಪೂಜನಾತ್ ತ್ರಾಯತ ಇತಿ ಮಂತ್ರಃ" ಎಂಬ ವ್ಯುತ್ಪತ್ತಿಯಿಂದಲೂ "ವಾಚ್ಯವಾಚಕರೂಪೇಣ ದ್ವಿಧಾ ಮಂತ್ರಃ ಪ್ರಕೀರ್ತಿತಃ" ಎಂಬ ವ್ಯಾಸೋಕ್ತಿಯಿಂದಲೂ ಶಿವಲಿಂಗಪರವೆಂದು ಹೇಳುವಲ್ಲಿ ಸಂಶಯವಿಲ್ಲ. ಆದುದರಿಂದ "ಪವಿತ್ರಂ ತೇ" ಎಂಬ ಮಂತ್ರದಲ್ಲಿರುವ ಪವಿತ್ರ ಶಬ್ದಕ್ಕೆ ಶಿವಲಿಂಗ ಎಂಬ ಅರ್ಥವು ನಿರ್ವಿವಾದವಾದುದು. ಮತ್ತು "ಪ್ರಭು

ಗಾ್ಣತ್ರಾಣಿ ಪರ್ಯೇಷಿ" ಎಂಬ ಮುಂದಿನ ವಾಕ್ಯದಿಂದ ದೀಕ್ಷಿತರಾದ ಶಿವ ಭಕ್ತರ ಸರ್ವಾಂಗಗಳಲ್ಲಿಯೂ ಲಿಂಗಸಂಬಂಧವಿರಬೇಕೆಂದು ಸಿದ್ಧವಾಗಿದೆ.

ಸರ್ವಾಂಗೇಷು ಚ ಸರ್ವತ್ರ ಸರ್ವದಾ ಸರ್ವತೋ ಮುಖಮ್ ।
ಲಿಂಗಂ ಗುರೂಪದೇಶೇನ ಸುಪ್ರತಿಷ್ಠಿತಮಾತ್ಮನಿ ॥

ಇತ್ಯಾದಿ

ಏಕಮೇವ ಪರಂ ಲಿಂಗಮಂಗೇಽಸ್ಮಿನ್ ಸುಪ್ರತಿಷ್ಠಿತಮ್ ।
ಸರ್ವತೋ ಮುಖಮಾಭಾತಿ ನಾಮರೂಪಕ್ರಿಯಾತ್ಮನಾ ॥
ಇಷ್ಟಲಿಂಗಂ ತು ಬಾಹ್ಯಾಂಗೇ ಪ್ರಾಣಲಿಂಗಂ ತಥಾಂತರೇ ।
ಭಾವಲಿಂಗಂ ತಥೈವಾಸ್ತಿ ಆತ್ಮಾಂಗೇ ಸುಪ್ರತಿಷ್ಠಿತಮ್ ॥
ಹೃದಯಾಂಗೇ ಮಹಾಲಿಂಗಂ ಶ್ರೋತ್ರಾಂಗೇ ತು ಪ್ರಸಾದಕಮ್ ।
ತ್ವಗಂಗೇ ಚರಲಿಂಗಂ ಚ ದೃಗಂಗೇ ಶಿವಲಿಂಗಕಮ್ ॥
ಜಿಹ್ವಾಂಗೇ ಗುರುಲಿಂಗಂ ಸ್ಯಾತ್ ನಾಸಿಕಾಂಗೇ ತಥೈವ ಚ ।
ಆಚಾರಲಿಂಗಮಶ್ರಾಂತಂ ಸುಪ್ರತಿಷ್ಠಿತಮೇವ ಹಿ ॥
ಯಥಾ ಜ್ಞಾನೇಂದ್ರಿಯಾಂಗೇಷು ಕ್ರಮಾಲ್ಲಿಂಗಂ ಪ್ರತಿಷ್ಠಿತಮ್ ।
ತಥಾ ಕರ್ಮೇಂದ್ರಿಯಾಂಗೇಷು ಕ್ರಮಾಲ್ಲಿಂಗಂ ಪ್ರತಿಷ್ಠಿತಮ್ ॥

ಪರಶಿವನು ತನ್ನಲ್ಲಿ ಅವಿನಾಭಾವ ಸಂಬಂಧದಿಂದಿರುವ ವಿಮರ್ಶ ಶಕ್ತಿಯ ಸ್ಫುರಣದಿಂದ ತಾನೇ ನಾಮರೂಪ ಕ್ರಿಯಾದಿ ಅನಂತಾಕಾರವಾಗಿ ಪರಿಣಮಿಸಿ, ಭಕ್ತಶರೀರಗಳಲ್ಲಿ ಇಷ್ಟ, ಪ್ರಾಣ, ಭಾವರೂಪದಿಂದ ನೆಲೆಸಿರು ತ್ತಾನೆ. ಅವುಗಳಲ್ಲಿ ವಿರಾಟ್‌ತತ್ತ್ವವೆಂಬ ಇಷ್ಟಲಿಂಗವು ವಿಶ್ವಸಂಜ್ಞಿಕ ವಾದ ತ್ಯಾಗಾಂಗದಲ್ಲಿಯೂ, ಹಿರಣ್ಯಗರ್ಭತತ್ತ್ವವೆಂಬ ಪ್ರಾಣಲಿಂಗವು ತೈಜಸಸಂಜ್ಞಕವಾದ ಭೋಗಾಂಗ (ಸೂಕ್ಷ್ಮ ಶರೀರ) ದಲ್ಲಿಯೂ, ಈಶ್ವರ ತತ್ತ್ವವೆಂಬ ಭಾವಲಿಂಗವು ಪ್ರಾಜ್ಞಸಂಜ್ಞಿಕವಾದ ಯೋಗಾಂಗದಲ್ಲಿಯೂ ನೆಲೆಸಿದವು. ಇವುಗಳಲ್ಲಿ ಭಾವಲಿಂಗವು ಮಹಾಲಿಂಗ ಮತ್ತು ಪ್ರಸಾದ ಲಿಂಗವೆಂದೂ, ಪ್ರಾಣಲಿಂಗವು ಜಂಗಮಲಿಂಗ ಮತ್ತು ಶಿವಲಿಂಗವೆಂದೂ, ಇಷ್ಟಲಿಂಗವು ಗುರುಲಿಂಗ ಮತ್ತು ಆಚಾರಲಿಂಗವೆಂದೂ ಎರಡೆರಡು ಭೇದ ವನ್ನು ಹೊಂದಿದವು. ಇವುಗಳಲ್ಲಿ ಮಹಾಲಿಂಗವು ಹೃದಯಸ್ಥಾನವನ್ನೂ, ಪ್ರಸಾದಲಿಂಗವು ಶ್ರೋತ್ರೇಂದ್ರಿಯವನ್ನೂ, ಜಂಗಮಲಿಂಗವು ತ್ವಗಿಂ ದ್ರಿಯವನ್ನೂ ಶಿವಲಿಂಗವು ನೇತ್ರೇಂದ್ರಿಯವನ್ನೂ, ಗುರುಲಿಂಗವು ರಸ

ನೇಂದ್ರಿಯವನ್ನೂ, ಆಚಾರಲಿಂಗವು ಘ್ರಾಣೇಂದ್ರಿಯವನ್ನೂ ಆಶ್ರಯಿಸಿ ಆಯಾಯ ವಿಷಯಾನುಭವಮಾಡುತ್ತಾ ಸುಖಪರಿಣಾಮಿಯಾಗಿರುತ್ತದೆ. ಮತ್ತು ಯೋಗಾಂಗಸ್ಥಲವು ಐಕ್ಯಸ್ಥಲ, ಶರಣಸ್ಥಲವೆಂದೂ, ಭೋಗಾಂಗಸ್ಥಲವು ಪ್ರಾಣಲಿಂಗಿಸ್ಥಲ, ಪ್ರಸಾದಿಸ್ಥಲವೆಂತಲೂ, ತ್ಯಾಗಾಂಗಸ್ಥಲವು ಮಾಹೇಶ್ವರಸ್ಥಲ, ಭಕ್ತಸ್ಥಲವೆಂತಲೂ ವಿಭಾಗವನ್ನು ಪಡೆದವು. ಹೀಗೆ ಪರಬ್ರಹ್ಮವು ಪೂಜ್ಯಪೂಜಕಲೀಲಾವೈಭವದಿಂದ ಶಿವತತ್ತ್ವವೆಂದೂ, ಜೀವತತ್ತ್ವವೆಂದೂ ಎರಡು ತೆರನಾಗಿ ಶಿವತತ್ತ್ವವೇ ಲಿಂಗಸ್ಥಲವೆಂದೂ, ಜೀವತತ್ತ್ವವೇ ಅಂಗಸ್ಥಲವೆಂದೂ ಹೇಳಿಸಿಕೊಂಡವು. ಉಪಾಸ್ಯವಾದ ಲಿಂಗಸ್ಥಲವು ಆರುವಿಧವಾಗಿಯೂ, ಉಪಾಸಕವಾದ ಅಂಗಸ್ಥಲವು ಆರುವಿಧವಾಗಿಯೂ ಪರಿಣಮಿಸಿದವು. ಇವುಗಳಲ್ಲಿ ಮಹಾಲಿಂಗವು ಐಕ್ಯಸ್ಥಲದಲ್ಲಿ ಚಿಚ್ಛಕ್ತಿಯನ್ನೂ ಶಾಂತ್ಯತೀತೋತ್ತರ ಕಲೆಯನ್ನೂ ಸಮರಸಭಕ್ತಿಯನ್ನೂ ಪಡೆದು ಮನ ಇಂದ್ರಿಯ ರೂಪತ್ವವನ್ನು ತಾಳಿ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ವಿಷಯಗಳ ಗ್ರಹಣಕ್ಕೆ ಸಾಧನವಾಗಿದೆ. ಪ್ರಸಾದಲಿಂಗವು ಶರಣಸ್ಥಲದಲ್ಲಿ ಪರಾಶಕ್ತಿಯನ್ನೂ, ಶಾಂತ್ಯತೀತ ಕಲೆಯನ್ನೂ ಆನಂದಭಕ್ತಿಯನ್ನೂ ಹೊಂದಿ ಶ್ರೋತ್ರೇಂದ್ರಿಯ ರೂಪತ್ವವನ್ನು ಪಡೆದು ಶಬ್ದಗ್ರಹಣಕ್ಕೆ ಕಾರಣವಾಗಿದೆ. ಜಂಗಮಲಿಂಗವು ಪ್ರಾಣಲಿಂಗಿಸ್ಥಲದಲ್ಲಿ ಆದಿಶಕ್ತಿಯನ್ನೂ, ಶಾಂತಿ ಕಲೆಯನ್ನೂ, ಅನುಭವ ಭಕ್ತಿಯನ್ನೂ ಹೊಂದಿ ತ್ವಗಿಂದ್ರಿಯ ರೂಪತ್ವವನ್ನು ಪಡೆದು ಸ್ಪರ್ಶಗ್ರಹಣಕ್ಕೆ ಸಾಧನವಾಗಿದೆ. ಶಿವಲಿಂಗವು ಪ್ರಸಾದಿಸ್ಥಲದಲ್ಲಿ ಇಚ್ಛಾಶಕ್ತಿಯನ್ನೂ, ವಿದ್ಯಾಕಲೆಯನ್ನೂ ಅವಧಾನ ಭಕ್ತಿಯನ್ನೂ ಹೊಂದಿ ನೇತ್ರರೂಪತ್ವವನ್ನು ತಾಳಿ ರೂಪಗ್ರಹಣಕ್ಕೆ ಸಾಧನವಾಗಿರುತ್ತದೆ. ಗುರುಲಿಂಗವು ಮಹೇಶಸ್ಥಲದಲ್ಲಿ ಜ್ಞಾನಶಕ್ತಿಯನ್ನೂ, ಪ್ರತಿಷ್ಠಾಕಲೆಯನ್ನೂ, ನಿಷ್ಠಾಭಕ್ತಿಯನ್ನೂ ಹೊಂದಿ ಜಿಹ್ವಾ ರೂಪತ್ವವನ್ನು ತಾಳಿ ರಸಗ್ರಹಣಕ್ಕೆ ಸಾಧನವಾಗಿರುತ್ತದೆ. ಆಚಾರಲಿಂಗವು ಭಕ್ತಸ್ಥಲದಲ್ಲಿ ಕ್ರಿಯಾಶಕ್ತಿಯನ್ನೂ ನಿವೃತ್ತಿಕಲೆಯನ್ನೂ, ಶ್ರದ್ಧಾಭಕ್ತಿಯನ್ನೂ ಹೊಂದಿ ನಾಸಿಕಾರೂಪತ್ವವನ್ನು ತಾಳಿ ಗಂಧಗ್ರಹಣಕ್ಕೆ ಸಾಧನವಾಗಿರುತ್ತದೆ.

ಹಸಿವು, ಬಾಯಾರಿಕೆ, ಶೋಕ, ಮೋಹ, ಜರಾ, ಮೃತ್ಯುಗಳೆಂಬ ಊರ್ಮಿಷಟ್ಕದಿಂದಲೂ, ಜಾಯತೇ, ಅಸ್ತಿ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ವಿನಶ್ಯತಿ ಎಂಬ ಷಡ್ಭಾವವಿಕಾರಗಳಿಂದಲೂ ಬಿಡಲ್ಪಟ್ಟವನಾಗಿಯೂ, ವಿಕಲ್ಪರೂಪವಾದ ಭೇದಭಾವನೆಯಿಂದ ಶೂನ್ಯನಾಗಿಯೂ, ಮಹಾಲಿಂಗದಲ್ಲಿ ಐಕ್ಯವನ್ನು ಪಡೆದವನು ಐಕ್ಯಸ್ಥಲಿಯೆನಿಸುವನು. ಲಿಂಗದಲ್ಲಿ ಪತಿತ್ವ ಭಾವನೆಯನ್ನೂ ತನ್ನಲ್ಲಿ ಸತೀತ್ವ ಭಾವನೆಯನ್ನೂ ಪಡೆದು ಸತಿಗೆ ಪತ್ಯಂತರವಿಲ್ಲವೆಂಬ ನೀತಿಗನುಸಾರವಾಗಿ ಸ್ರಕ್ಚಂದನವನಿತಾದಿ ರೂಪವಾದ ಪ್ರಾಪಂಚಿಕ ಸುಖಕ್ಕೆ ತಿಲಾಂಜಲಿಯನ್ನರ್ಪಿಸಿ ಯಾವಾಗಲೂ ಶಿವಾನಂದದಿಂದೊಡಗೂಡಿದವನೇ ಶರಣಸ್ಥಲಿಯೆನಿಸುವನು. ಲಿಂಗದಲ್ಲಿ ಪ್ರಾಣವನ್ನು ಪ್ರಾಣದಲ್ಲಿ ಲಿಂಗವನ್ನೂ ಇರಿಸಿ ಸುಖದುಃಖಗಳಲ್ಲಿ ವಿಮುಖನಾಗಿರುವವನೇ ಪ್ರಾಣಲಿಂಗಿಸ್ಥಲಿಯೆನಿಸುವನು. ಲಿಂಗಾರ್ಪಿತಗಳಾದ ಪದಾರ್ಥಗಳನ್ನೇ ಶರೀರಯಾತ್ರೆಗೆ ಉಪಯೋಗಿಸುತ್ತ ಲಿಂಗದಲ್ಲಿ ವಿಶೇಷಾವಧಾನವುಳ್ಳವನಾಗಿ ಲಿಂಗಾರ್ಪಿತವಲ್ಲದ ಪದಾರ್ಥಗಳನ್ನು ತ್ಯಜಿಸುವವನೇ ಪ್ರಸಾದಿಸ್ಥಲಿಯೆನಿಸುವನು. ಪರಸ್ತ್ರೀ ಪರದ್ರವ್ಯಗಳನ್ನು ತ್ಯಜಿಸುತ್ತ ಭಾವಶುದ್ಧಿಯುಳ್ಳವನಾಗಿ ಲಿಂಗದಲ್ಲಿ ನಿಷ್ಠೆಯುಳ್ಳವನೇ ಮಹೇಶ್ವರ ಸ್ಥಲಿಯೆನಿಸುವನು. ಸದಾಚಾರಿಯಾಗಿಯೂ, ಶಿವನಲ್ಲಿ ಅವ್ಯಾಜಭಕ್ತಿಯುಳ್ಳವನಾಗಿಯೂ ಗುರು ಲಿಂಗ ಜಂಗಮರಲ್ಲಿ ಸಮತಾಬುದ್ಧಿಯುಳ್ಳವನಾಗಿಯೂ, ಭಸ್ಮರುದ್ರಾಕ್ಷಾದಿ ಶಿವಚಿಹ್ನೆಗಳಲ್ಲಿಯೂ, ಶಿವಶರಣರಲ್ಲಿಯೂ ಭಕ್ತಿಯುಳ್ಳವನೇ ಭಕ್ತಸ್ಥಲಿ ಎನಿಸುವನು. ಹೀಗೆ ಷಡಂಗಗಳಲ್ಲಿ, ಷಡ್ಲಿಂಗಗಳನ್ನು ಆರಾಧಿಸುತ್ತಿರುವವನೇ ಷಟ್‌ಸ್ಥಲಬ್ರಹ್ಮಿಯೆನಿಸುತ್ತಾನೆ.

ಮುಖ್ಯವಾಗಿ " ಗಾತ್ರಾಣಿ ಪರ್ಯೇಷಿ ವಿಶ್ವತಃ " ಎಂಬ ವಾಕ್ಯದಿಂದ ಷಡಂಗಗಳಲ್ಲಿ ಷಡ್ಲಿಂಗಗಳು ಸಂಬಂಧಿಸುವುವು. ಈ ಷಟ್‌ಸ್ಥಲ ಸಿದ್ಧಾಂತವು ಅತಿವಿಸ್ತೀರ್ಣವೂ ದುರವಗಾಹವೂ ಆಗಿದ್ದರೂ ಸಂದರ್ಭಾನುಸಾರವಾಗಿ ಇಲ್ಲಿ ದಿಗ್ದರ್ಶನಮಾಡಬೇಕಾಯಿತು. ಹೀಗೆ ಋಗ್ವೇದದ " ಪವಿತ್ರಂ ತೇ " ಎಂಬ ಮಂತ್ರವು ಲಿಂಗಧಾರಣಪರವಾದ ಅರ್ಥವನ್ನೇ ಬೋಧಿಸುವುದು. ಈ ಮಂತ್ರಾರ್ಥದ ಉಪಷ್ಟಂಭಕ ವಾಕ್ಯಗಳನ್ನು ಭಗವಾನ್ ವ್ಯಾಸ ಮಹರ್ಷಿಯು ಸ್ಪಷ್ಟವಾಗಿ ಹೇಳಿರುತ್ತಾನೆ.

ಋಗಿತ್ಯಾಹ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಮ್ ॥
ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ ।
ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಶ್ಶುಚಿಃ ॥
ಅತಪ್ತತನುರಜ್ಞೋ ವೈ ಆಮಸ್ಸಂಸ್ಕಾರವರ್ಜಿತಃ ।
ದೀಕ್ಷಯಾ ರಹಿತಸ್ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಮ್ ॥
ತಪಸ್ತಪ್ತಾ ತನುರ್ಯಸ್ಯ ಸತಪ್ತತನುರುಚ್ಯತೇ ।
ಪರಿಪಕ್ವೋ ವಿಮೋಕ್ಷಾಯ ಸೋsಶ್ನುತೇ ಲಿಂಗಧಾರಣಮ್ ॥
ನ ಕರೋತಿ ತಪಃ ಪೂರ್ವಂ ಸೋsತಪ್ತತನುರುಚ್ಯತೇ ।
ಅಪಕ್ವೋsಯಂ ವಿಮೋಕ್ಷಾಯ ನಾಶ್ನುತೇ ಲಿಂಗಧಾರಣಮ್ ॥

(ಬ್ರಹ್ಮಾಂಡ, ಲೈಂಗ್ಯ ಪುರಾಣಗಳು)

ಹೀಗೆ ಆ ಮಂತ್ರದಲ್ಲಿರುವ ಪವಿತ್ರಂ-ಬ್ರಹ್ಮಣಸ್ಪತೇ-ಅತಪ್ತತನುಃ -ಆಮಃ ಇತ್ಯಾದಿ ಪದಗಳನ್ನೇ ತೆಗೆದುಕೊಂಡು ಲಿಂಗಧಾರಣವನ್ನು ಸ್ಪಷ್ಟವಾಗಿ ತೋರಿಸಿರುವುದರಿಂದ ಈ ಮಂತ್ರದ "ಪವಿತ್ರಂ" ಎಂಬ ಪೂರ್ವಾರ್ಧವು ಇಷ್ಟಲಿಂಗಧಾರಣವನ್ನೂ "ಅತಪ್ತತನುಃ" ಎಂಬ ಉತ್ತರಾರ್ಧವು ಲಿಂಗಧಾರಣರೂಪವಾದ ಶಿವದೀಕ್ಷಾ ಸಂಸ್ಕಾರವನ್ನೂ ಬೋಧಿಸುವುದೆಂದು ತಿಳಿಯತಕ್ಕದು. ಇನ್ನು ಋಗ್ವೇದದ ಮತ್ತೊಂದು ಮಂತ್ರದಿಂದ ಲಿಂಗಧಾರಣವು ಪ್ರತಿಪಾದಿಸಲ್ಪಡುತ್ತದೆ.

ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋsಯಂ ಶಿವಾಭಿಮರ್ಶನಃ ॥
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮಾತ್
ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರೀಹಿ ॥

(ಋ ೮-೧-೩೫)

**ಅನ್ವಯಾರ್ಥ :—** ಅಯಂ ಭಗವಾನ್ – ಲಿಂಗರೂಪವಾದೀ ಸದಾಶಿವನು, ಮೇ ಹಸ್ತಃ – ನನ್ನ ಹಸ್ತವನ್ನು ಹೊಂದಿರುವನು, ಅಯಂ – ಈ ಶಿವಲಿಂಗಮೂರ್ತಿಯೇ, ಮೇ-ನನಗೆ, ಭಗವತ್ತರಃ-ಅತಿಶಯವಾದ ಐಶ್ವರ್ಯವನ್ನು ಕೊಡುವನು. ಅಯಂ-ನನ್ನ ಹಸ್ತದಲ್ಲಿರುವ ಈ ಶಿವಲಿಂಗ

ಮೂರ್ತಿಯು ಮೇ - ನನಗೆ ವಿಶ್ವಭೇಷಜಃ - ಸಮಸ್ತ ಭವರೋಗಗಳಿಗೆ ಮಹಾವೈದ್ಯನಾಗಿರುತ್ತಾನೆ. ಅಯಂ - ನನ್ನ ಹಸ್ತದಲ್ಲಿರುವ ಈ ಲಿಂಗ ಮೂರ್ತಿಯು ಶಿವಾಭಿಮರ್ಶನಃ-ಸಮಸ್ತ ಕಲ್ಯಾಣವನ್ನುಂಟುಮಾಡುವನು. ಅಯಂ-ನನ್ನ ಹಸ್ತದಲ್ಲಿರುವ ಈ ಲಿಂಗಮೂರ್ತಿಯು-ಮಾತಾ-ತಾಯಿಯಂತೆ ವಾತ್ಸಲ್ಯವುಳ್ಳವನು. ಪಿತಾ-ತಂದೆಯಂತೆ ರಕ್ಷಣೆಯುಳ್ಳವನು. ಅಯಂ-ಈ ಶಿವಲಿಂಗಮೂರ್ತಿಯು, ಜೀವಾತುಃ-ಸಂಜೀವಿನಿಯಂತೆ ಪ್ರಾಣರಕ್ಷಣೆ ಮಾಡುವನು. ಆಗಮಾತ್ - ಶಾಸ್ತ್ರಪ್ರಮಾಣದಿಂದ, ಹೇ ಸುಬಂಧೋ - ಎಲೈ ನಿರ್ವ್ಯಾಜಬಂಧುವೇ ? ಏಹಿ-ಇಲ್ಲಿಗೆ ಆಗಮಿಸು. ಇದಂ-ನನ್ನ ಹಸ್ತ ದಲ್ಲಿರುವ ಈ ಶಿವಲಿಂಗವು. ತವ-ನಿನಗೆ, ಪ್ರಸರ್ಪಣಂ-ವಿಹಾರಸ್ಥಾನವಾ ಗಿರುವುದು, ನಿರೀಹಿ-ಅತ್ತಿತ್ತ ಚಲಿಸದಂತೆ ಈ ಇಷ್ಟಲಿಂಗದಲ್ಲಿ ಯಾವಾ ಗಲೂ ನೆಲಸಿರು.

" ಈಶಾನಃ ಪಿತೃರೂಪೇಣ ಮಹಾದೇವೋ ಮಹೇಶ್ವರಃ ।
ಪ್ರೀಯತಾಂ ಭಗವಾನ್ ಈಶಃ ಪರಮಾತ್ಮಾ ಸದಾಶಿವಃ ॥ "
" ಸರ್ವವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಶ್ಶಿವಃ "
" ಯೋ ರುದ್ರಸ್ಸ ಭಗವಾನ್ಯಶ್ಚ ಬ್ರಹ್ಮ ಯೋ ವೈ ರುದ್ರಸ್ಸ
ಭಗವಾನ್ಯಶ್ಚ ವಿಷ್ಣುಃ ॥ ನಮಸ್ತೇ ಅಸ್ತು ಭಗವಾನ್
ವಿಶ್ವೇಶ್ವರಾಯ "
" ಅಥೈನಂ ಭಗವಂತಂ ರುದ್ರಂ ಕುಮಾರಃ ಪಪ್ರಚ್ಛ "
" ಕಾಲಾಗ್ನಿರುದ್ರಂ ಭಗವಂತಂ ಸನತ್ಕುಮಾರಃ ಪಪ್ರಚ್ಛ "

ಹೀಗೆ ಪಿತೃಮೇಧ, ಶ್ವೇತಾಶ್ವತರ, ಅಥರ್ವಶಿರಸ್ಸು, ಶತರುದ್ರೀಯ ಮುಂತಾದ ಅನಂತಶ್ರುತಿಗಳು ಭಗವಾನ್ ಎಂಬ ಪದವನ್ನು ಶಿವನಲ್ಲಿಯೇ ಉಪಯೋಗಿಸಿರುವುದರಿಂದ " ಅಯಂ ಮೇ ಹಸ್ತೋ ಭಗವಾನ್ " ಎಂಬ ಮಂತ್ರದಲ್ಲಿರುವ ಭಗವಾನ್ ಎಂಬ ಪದಕ್ಕೆ ಶಿವಲಿಂಗವೆಂಬ ಅರ್ಥವು ನಿರ್ವಿವಾದವಾದುದು.

ಶಂಕೆ :—

ನಾರಾಯಣೋಽಪಿ ಭಗವಾನ್ ದೇವಕೀತನಯೋ ಹರಿಃ ।

ತತಸ್ಸ ಭಗವಾನ್ ಜಜ್ಞೇ ಬ್ರಹ್ಮಾ ಲೋಕಪಿತಾಮಹಃ ॥
ಸನತ್ಕುಮಾರೋ ಭಗವಾನ್ ॥

ಇತ್ಯಾದಿ ಅನಂತ ಲೌಕಿಕ ಪ್ರಮಾಣಗಳಲ್ಲಿ ಭಗವತ್ಪದವನ್ನು ನಾರಾಯಣನಲ್ಲಿಯೂ, ಚತುರ್ಮುಖ ಬ್ರಹ್ಮನಲ್ಲಿಯೂ, ಸನತ್ಕುಮಾರಾದಿ ಮಹರ್ಷಿಗಳಲ್ಲಿಯೂ ಪ್ರಯೋಗಿಸಿರುತ್ತಾರೆ. ಹೀಗೆ ಸರ್ವಸಾಧಾರಣವಾದ ಭಗವತ್ಪದವು ಹಸ್ತದಲ್ಲಿರುವ ಶಿವಲಿಂಗಪರವೆಂದು · ನಿಯಮವಾಗಿ ಹೇಗೆ ಹೇಳುವುದು ?

ಸಮಾಧಾನ :—" ಹಸ್ತೇನಾವದ್ಯತಿ " " ಸ್ರುವೇಣಾವದ್ಯತಿ " " ಸ್ವಧಿತಿನಾವದ್ಯತಿ " ಹಸ್ತದಿಂದ ಅವದಾನಮಾಡಬೇಕು. (ಸಮುದಾಯದಿಂದ ಬೇರ್ಪಡಿಸಿ ತೆಗೆದುಕೊಳ್ಳುವುದಕ್ಕೆ ಅವದಾನವೆಂದು ಹೆಸರು). "ಸ್ರುವ (ಸವಟು) ದಿಂದ ಅವದಾನಮಾಡಬೇಕು " ಸ್ವಧಿತಿ (ಚೂರಿ) ಯಿಂದ ಅವದಾನಮಾಡಬೇಕು ಎಂಬ ಪೂರ್ವಮೀಮಾಂಸಾ ವಾಕ್ಯಗಳಲ್ಲಿ ಅವದಾನಮಾತ್ರ ಸಾಧಾರಣವಾಗುಳ್ಳ " ಅವದ್ಯತಿ ಅವದ್ಯತಿ " ಎಂಬ ಏಕಾನುಪೂರ್ವಿಯಾದ ಪದವಿದ್ದರೂ ಈ ಪದಗಳ ಸಮೀಪದಲ್ಲಿ ಹಸ್ತ, ಸ್ರುವ, ಸ್ವಧಿತಿ, ಪದಗಳಿರುವದರಿಂದ " ಹಸ್ತೇನಾವದ್ಯತಿ " ಎಂಬ ವಾಕ್ಯದಲ್ಲಿ ಹಸ್ತದಿಂದ ಪುರೋಡಾಶಾ (ಹುರಿಹಿಟ್ಟು) ವದಾನವನ್ನೂ " ಸ್ರುವೇಣಾವದ್ಯತಿ " ಎಂಬ ವಾಕ್ಯದಲ್ಲಿ ಸ್ರುವದಿಂದ ಘೃತಾ (ತುಪ್ಪ) ವದಾನವನ್ನೂ " ಸ್ವಧಿತಿನಾವದ್ಯತಿ " ಎಂಬ ವಾಕ್ಯದಲ್ಲಿ ಸ್ವಧಿತಿಯಿಂದ ಮಾಂಸದ ಅವದಾನವನ್ನೂ ಮಾಡಬೇಕೆಂದು ಪ್ರತ್ಯೇಕವಾಗಿ ಆಯಾಯ ಹಸ್ತಾದಿ ಸಾಧನಗಳಿಂದ ಪುರೋಡಾಶ ಘೃತ ಮತ್ತು ಮಾಂಸಗಳೆಂಬ ಹವಿರ್ದ್ರವ್ಯಗಳ ಪ್ರತ್ಯೇಕ ಪ್ರತ್ಯೇಕ ಸ್ವೀಕಾರವು ನಿಶ್ಚಯಿಸಿರುವಂತೆ " ಅಯಂ ಮೇ " ಎಂಬೀ ಮಂತ್ರದಲ್ಲಿರುವ ಭಗವತ್ಪದವು ಇತರ ದೇವತಾ ಸಾಧಾರಣ ಶಬ್ದವಾಗಿದ್ದರೂ ಈ ಭಗವತ್ಪದದ ಸಮೀಪದಲ್ಲಿ "ಹಸ್ತ" ಎಂಬ ಪದವು ಬಂದಿರುವುದರಿಂದ ಅಂತಹ ಹಸ್ತದಲ್ಲಿ ನಾರಾಯಣಾದಿ ಇತರ ದೇವತೆಗಳನ್ನು ಧರಿಸುವ ವ್ಯವಹಾರವಾಗಲಿ, ಪ್ರಮಾಣಗಳಾಗಲಿ, ಎಲ್ಲಿಯೂ ಕಾಣದಿರುವದರಿಂದ ಭಗವತ್ಪದಕ್ಕೆ ಶಿವಲಿಂಗವೆಂಬ ಅರ್ಥವೇ ನಿಶ್ಚಯವಾಗುತ್ತದೆ. ಮತ್ತು ಲೌಕಿಕ ಪ್ರಯೋಗಕ್ಕಿಂತಲೂ ಶ್ರೌತಪ್ರಯೋಗವು ಪ್ರಬಲವಾದುದರಿಂದ ಭಗವತ್ಪದ

ವನ್ನು ಪುರಾಣಾದಿ ಲೌಕಿಕ ವಾಕ್ಯಗಳು ಮಹರ್ಷಿಗಳಲ್ಲಿಯೂ, ಶಿವೇತರ ದೇವತೆಗಳಲ್ಲಿಯೂ ವ್ಯವಹರಿಸಿದ್ದರೂ ಅನಂತಶ್ರುತಿಗಳು ಶಿವನಲ್ಲಿಯೇ ಪ್ರಯೋಗಿಸಿರುವುದರಿಂದ ಆ ಭಗವತ್ಪದಕ್ಕೆ ಶಿವಲಿಂಗವೆಂಬ ಅರ್ಥವೇ ಪ್ರಧಾನವಾದುದೆಂದು ತಿಳಿಯಬೇಕು.

**ಶಂಕೆ :—**ಈ ಮಂತ್ರದಲ್ಲಿ " **ಅಯಂ ಮೇ ಹಸ್ತಃ** " ಎಂದು ಪ್ರಥಮಾಂತವಾದ ಪದವಿರುವುದಲ್ಲದೆ " **ಹಸ್ತಗತಃ** " ಎಂಬ ಪದವಿರುವುದಿಲ್ಲವಾದುದರಿಂದ ಹಸ್ತಪದಕ್ಕೆ ' ಕೈ ' ಎಂಬ ಅರ್ಥವಾಗುತ್ತದೆಯೇ ಹೊರತು ಹಸ್ತದಲ್ಲಿ ಧರಿಸಲ್ಪಟ್ಟ, ಎಂಬ ಅರ್ಥವಾಗುವುದಿಲ್ಲ. ಆದುದರಿಂದ ಭಗವತ್ಪದವಾಚ್ಯವಾದ ಶಿವಲಿಂಗವು ನನ್ನ ಹಸ್ತದಲ್ಲಿ ಧರಿಸಲ್ಪಟ್ಟಿರುವುದೆಂದು ಹೇಗೆ ಹೇಳುವುದಕ್ಕಾದೀತು ?

**ಸಮಾಧಾನ :—**" **ಹಸ್ತೋ ಭಗವಾನ್** " ಎಂದು ಹಸ್ತ ಪದವು ಭಗವತ್ಪದದ ಸಮೀಪದಲ್ಲಿರುವದರಿಂದ ಹಸ್ತದಲ್ಲಿ ಧರಿಸಲ್ಪಟ್ಟಿರುವ ಶಿವಲಿಂಗವೆಂದೇ ನಿಶ್ಚಯಿಸಬೇಕು.

**ಉದಾಹರಣೆ :—**

ಆದಿತ್ಯೋ ಭಗವಾನ್ ಸೂರ್ಯೋ ನೀಲಗ್ರೀವಸ್ತ್ರಿಲೋಚನಃ ।
ಅಧೀಯತೇ ಸಹಸ್ರಾಂಶು ಸಾಮಗಧ್ವರ್ಯುಹೋತೃಭಿಃ ॥

(ಆದಿತ್ಯ ಪುರಾಣ)

**ಅರ್ಥ :—**ಭಗವಾನ್-ಸರ್ವವ್ಯಾಪಿಯಾದ ಶಿವಲಿಂಗವು, ಆದಿತ್ಯಃ-ಸೂರ್ಯಮಂಡಲದಲ್ಲಿರುವುದು. ನೀಲಗ್ರೀವಃ - ಕಪ್ಪು ಕಂಠಗಳುಳ್ಳವನು. ತ್ರಿಲೋಚನಃ-ಸೂರ್ಯ, ಅಗ್ನಿ, ಚಂದ್ರರೆಂಬ ಮೂರು ಕಣ್ಣುಗಳುಳ್ಳವನು. ಸೂರ್ಯಃ - ಸೂರ್ಯಮಂಡಲಾಂತವರ್ತಿಯು. ಇಲ್ಲಿ ಭಗವಾನ್, ನೀಲಗ್ರೀವಃ, ತ್ರಿಲೋಚನಃ ಈ ಪದಗಳ ಸಮೀಪದಲ್ಲಿರುವ ಆದಿತ್ಯ ಸೂರ್ಯ ಪದಗಳಿಗೆ ಸೂರ್ಯಮಂಡಲದಲ್ಲಿರುವ ಸೂರ್ಯನಿಗಿಂತಲೂ ಭಿನ್ನವಾದ ಶಿವಲಿಂಗವೆಂದು ಹೇಳುವುದಕ್ಕಾಗಿ " **ಆದಿತ್ಯೋ ಭಗವಾನ್** " ಎಂದು ಅಭೇದೋಪಚಾರವು ಮಾಡಲ್ಪಟ್ಟಿರುವಂತೆ ಹಸ್ತಪೀಠದಲ್ಲಿ ಸದಾ ಪೂಜಿಸಲ್ಪಡತಕ್ಕುದೆಂಬ ಅರ್ಥದಲ್ಲಿ " **ಹಸ್ತೋ ಭಗವಾನ್** " ಎಂದು ಔಪಚಾರಿಕ

ವಾದ ಅಭೇದವನ್ನು ತೋರಿಸುವುದರಿಂದ ಹಸ್ತಕ್ಕೂ ಹಸ್ತದಲ್ಲಿಟ್ಟು ಪೂಜಿಸುವ ಶಿವಲಿಂಗಕ್ಕೂ ನಿತ್ಯಸಂಬಂಧವನ್ನು ಸೂಚಿಸುವುದು. ಮತ್ತು

"ಯ ಏಷೋಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತ"

ಇತ್ಯಾದಿ

ಅಂಬಿಕಾಪತಯೇ, ಉಮಾಪತಯೇ, ಪಶುಪತಯೇ
ನಮೋ ನಮಃ

(ತೈತ್ತಿರೀಯ)

ಅರ್ಥ:—ಯಾವ ಪುರುಷನು ಸುವರ್ಣಛಾಯೆಯುಳ್ಳವನಾಗಿ ಯಾವಾಗಲೂ ಸೂರ್ಯಮಂಡಲದಲ್ಲಿ ಪ್ರಕಾಶಿಸುವನೋ ಅಂತಹ ಉಮಾರೂಪ ಶಕ್ತಿಯಿಂದೊಡಗೂಡಿದ ಪರಶಿವಲಿಂಗಕ್ಕೆ ನಮಸ್ಕಾರವು.

"ಸೌರಮಂಡಲ ಮಧ್ಯಸ್ಥಂ ಸಾಂಬಂ ಸಂಸಾರಭೇಷಜಮ್ ।
ಮಂಡಲಾಂತರಗತಂ ಹಿರಣ್ಮಯಂ ಭ್ರಾಜಮಾನ
ವಪುಷಂ ಶುಚಿಸ್ಮಿತಮ್ ॥"

(ಪುರಾಣ)

ಇತ್ಯಾದಿ ಮಂತ್ರಗಳ ಉಪಬೃಂಹಣವಾಕ್ಯಗಳ ಆಧಾರದಿಂದ ಪರಶಿವ ಬ್ರಹ್ಮಲಿಂಗವು ಸೂರ್ಯಮಂಡಲದಲ್ಲಿ ಪ್ರಕಾಶಿಸುತ್ತಿದ್ದರೂ ಆ ಸೂರ್ಯಮಂಡಲಕ್ಕಿಂತ ಭಿನ್ನವಾದುದೆಂದು ಸ್ಪಷ್ಟವಾಗಿ ಕಂಡುಬರುವುದರಿಂದ "ಆದಿತ್ಯೋ ಭಗವಾನ್" ಮುಂತಾದ ವಾಕ್ಯಗಳಿಗೆ ಸೂರ್ಯನೇ ಪರಶಿವನೆಂದು ಸೂರ್ಯನಿಗೂ ಪರಶಿವನಿಗೂ ಸಾಮಾನ್ಯವಾಗಿ ತೋರುವ ಅಭೇದವು ಸೂರ್ಯಪರಮೇಶ್ವರರ ನಿತ್ಯಸಂಬಂಧವನ್ನು ತೋರಿಸುವುದಕ್ಕಾಗಿ ಹೇಳಲ್ಪಟ್ಟಿರುತ್ತದಲ್ಲದೆ ಸೂರ್ಯನೇ ಪರಶಿವನಲ್ಲವೆಂದು ನಿರ್ಣಯಿಸಲ್ಪಟ್ಟಿದೆ. ಅದರಂತೆ "ಹಸ್ತೋ ಭಗವಾನ್" ಎಂಬಲ್ಲಿಯೂ ಸಹ ಹಸ್ತಕ್ಕೂ ಹಸ್ತದಲ್ಲಿಟ್ಟು ಪೂಜಿಸಲ್ಪಡುವ ಶಿವಲಿಂಗಕ್ಕೂ ಆಧಾರಾಧೇಯಭಾವವು ಇರುವುದರಿಂದ ಸ್ವಾಭಾವಿಕವಾಗಿ ಭೇದವಿದ್ದರೂ ಈ ಇಷ್ಟಲಿಂಗಾಧಾರವಾದ ಹಸ್ತಕಂಠಾದ್ಯಂಗಗಳನ್ನು ಬಿಟ್ಟು ಆ ಲಿಂಗವು ದೇಹವಿರುವವರೆಗೂ ಅಗಲಿರಬಾರದೆಂಬ ನಿತ್ಯಸಂಬಂಧವನ್ನು ತೋರಿಸುವುದಕ್ಕಾಗಿ "ಅಯಂ ಮೇ

ಭಗವಾನ್ " ಎಂಬ ಮಂತ್ರವು ಶಿವನು ನನ್ನ ಹಸ್ತದಲ್ಲಿರುವನೆಂಬ ಸ್ಪಷ್ಟವಾದ ಅರ್ಥವನ್ನು ಕೊಡುವ " ಹಸ್ತಗತಃ ಭಗವಾನ್ " ಎಂದು ಹೇಳದೆ " ಹಸ್ತೋ ಭಗವಾನ್ " ನನ್ನ ಹಸ್ತವೇ ಶಿವಲಿಂಗವೆಂದು ಔಪಚಾರಿಕ (ಲಾಕ್ಷಣಿಕ) ವಾದ ಅಭೇದವನ್ನು ತೋರಿಸಿರುತ್ತದೆ. ಹೀಗೆ ಅಭೇದಾರ್ಥವುಳ್ಳ " ಹಸ್ತಃ ಭಗವಾನ್ " ಎಂಬ ಪ್ರಥಮಾಂತ ಪದಗಳನ್ನು ಈ ಶ್ರುತಿಯಲ್ಲಿ ತೋರಿಸದೆಹೋದರೆ ಹಸ್ತ ಕಂಠಾದ್ಯಂಗಗಳಲ್ಲಿ ಧರಿಸಲ್ಪಟ್ಟಿರುವ ಶಿವಲಿಂಗಕ್ಕೂ ದೀಕ್ಷಾಬದ್ಧವಾದ ದೇಹಕ್ಕೂ ಇರುವ ಅವಿಭಾಜ್ಯಸಂಬಂಧವೇ ಲೋಪವಾಗುತ್ತದೆ. ವೀರಶೈವ ಸಿದ್ಧಾಂತದಲ್ಲಿ ಮುಕ್ತಿದಾಯಕವೂ, ಶಿವಸ್ವರೂಪವೂ ಆದ ಇಷ್ಟಲಿಂಗವನ್ನು ಶಿಷ್ಯನು ಗುರುವಿನಿಂದ ದೀಕ್ಷಾಪೂರ್ವಕವಾಗಿ ಎಂದು ಪಡೆದನೋ ಅಂದಿನಿಂದಲೂ ಈ ಸ್ಥೂಲದೇಹವಿರುವವರೆಗೂ ಇಷ್ಟಲಿಂಗವು ದೇಹವನ್ನು ಅಗಲಿರಬಾರದು. ದೇಹಕ್ಕೂ ಶಿವಲಿಂಗಕ್ಕೂ ವಿಯೋಗವಾಗುವುದಾದರೆ ಮಹತ್ತರವಾದ ದೋಷವು ಎಂದು ಹೇಳಲ್ಪಟ್ಟಿದೆ.

ಸಂಸ್ಕೃತ್ಯ ಗುರುಣಾ ದತ್ತಂ ಷಡಧ್ವನ್ಯಾಸಪೂರ್ವಕಮ್ ।
ವಾಮಹಸ್ತಗತಂ ಲಿಂಗಂ ಸಾವಧಾನೇನ ಪೂಜಯೇತ್ ॥
ಧಾರಯೇದ್ಯಸ್ತು ಹಸ್ತಾದೌ ಲಿಂಗಾಕಾರಂ ಶಿವಂ ಸದಾ ।
ತಸ್ಯ ಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂ ಪದಮ್ ॥
ಧಾರಯೇದವಧಾನೇನ ಲಿಂಗಂ ತದ್ಗುರುಣಾರ್ಪಿತಮ್ ।
ಪ್ರಮಾದಾತ್ಪತಿತೇ ಲಿಂಗೇ ಪ್ರಾಣಾನಪಿ ಪರಿತ್ಯಜೇತ್ ॥
ಪತಿತೇ ಪ್ರಾಣಲಿಂಗೇ ಯಃ ಪ್ರಾಣಾನ್ ಧತ್ತೇ ನರಾಧಮಃ ।
ಸ ಚಂಡಾಲ ಇತಿ ಜ್ಞೇಯಃ ಶಿವದ್ರೋಹೀ ನ ಸಂಶಯಃ ॥
ಹಸ್ತಸಿಂಹಾಸನೇ ಲಿಂಗಮಪ್ರಮಾದೇನ ಧಾರಯೇತ್ ।
ಲಿಂಗಪಾತಿನಮಾಚಾರನಿಂದಕಂ ನ ಹೃದಿ ಸ್ಮರೇತ್ ॥
ಭೂಮೌ ಪ್ರತಿಷ್ಠಿತಂ ಲಿಂಗಂ ಪುನರ್ನೋತ್ಪಾಟ್ಯತೇ ಯಥಾ ।
ದೇಹೇ ಪ್ರತಿಷ್ಠಿತಂ ಲಿಂಗಮಂತೇಽಪಿ ನ ವಿಭಜ್ಯತೇ ॥

( ವಾತುಲಾಗಮ)

ಅರ್ಥ :—ಶ್ರೀ ಗುರುವು ಶಿಷ್ಯನ ಶಕ್ತಿಪಾತ (ಯೋಗ್ಯತೆ) ವನ್ನು ಪರೀಕ್ಷಿಸಿ ಯೋಗ್ಯಕಾಲದಲ್ಲಿ ಷಡಧ್ವನ್ಯಾಸಪೂರ್ವಕವಾದ ಶಿವದೀಕ್ಷೆಯಿಂದ

ಅವನನ್ನು ಪರಿಶುದ್ಧಿಗೊಳಿಸಿ ಶಿಷ್ಯನ ವಾಮಹಸ್ತವೆಂಬ ಪೀಠದಲ್ಲಿ ಶಿವ ಕಲಾಧಿಷ್ಠಿತವಾದ ಶಿವಲಿಂಗವನ್ನು "ಸರ್ವಲಿಂಗಂ............" ಎಂಬ ಮಂತ್ರವನ್ನುಚ್ಚರಿಸುತ್ತ ಸ್ಥಾಪಿಸುವನು. ಇಂತಹ ಶಿವಲಿಂಗಮೂರ್ತಿ ಯನ್ನು ಸಾವಧಾನದಿಂದ ಪೂಜಿಸಿ "ಯಜ್ಞೋಪವೀತಂ" ಎಂಬ ಮಂತ್ರದಿಂದ ಶಿರಸ್ಸು, ಕಂಠ, ವಕ್ಷಸ್ಸು, ಉದರ, ಹಸ್ತಾದಿ ಉತ್ತಮಾಂಗ ಗಳಲ್ಲಾವುದಾದರೊಂದು ಸ್ಥಳದಲ್ಲಿ ಧರಿಸತಕ್ಕದು. ಗುರುವಿನ ಆಜ್ಞೆಯ ಮೇರೆಗೆ ಈ ರೀತಿಯಾಗಿ ಯಾವ ಶಿಷ್ಯನು ಲಿಂಗಧಾರಣ, ಲಿಂಗಪೂಜೆ ಗಳಲ್ಲಿ ಆಸಕ್ತನಾಗಿರುವನೋ ಅವನಿಗೆ ಐಹಿಕಸುಖಪರಂಪರೆಯು ದೊರೆ ಯುವುದಲ್ಲದೆ ಅವನು ದೇಹಾವಸಾನದಲ್ಲಿ ಶಿವನಲ್ಲಿ ಬೆರೆಯುವನು. ಪ್ರಮಾದದಿಂದ ಈ ಲಿಂಗಮೂರ್ತಿಯು ದೇಹದಿಂದ ವಿಯೋಗವಾದರೆ ಪ್ರಾಣವನ್ನಾದರೂ ಬಿಡಲು ಸಿದ್ಧನಾಗಿರಬೇಕು. ಅಂದರೆ ಭುಕ್ತಿ ಮುಕ್ತಿಗಳ ನ್ನೀಯುವ ಲಿಂಗಮೂರ್ತಿಯನ್ನು ತನ್ನ ಪ್ರಾಣದಂತೆ ರಕ್ಷಿಸಿಕೊಳ್ಳ ಬೇಕೆಂದು ಭಾವವು. ಇಷ್ಟಲಿಂಗವನ್ನು ಕಳೆದುಕೊಂಡು ಯಾವನು ಶೂನ್ಯ ಹೃದಯನಾಗುವನೋ ಅವನು ನರಾಧಮನೆಂತಲೂ, ಚಂಡಾಲಸದೃಶ ನೆಂತಲೂ, ಶಿವದ್ರೋಹಿಯೆಂತಲೂ, ಪತಿತನೆಂತಲೂ ಶಿವಾಗಮಗಳು ಸಾರುವುವು. ಇಷ್ಟಲಿಂಗವನ್ನು ಬಿಟ್ಟವನನ್ನೂ, ಆಚಾರಭ್ರಷ್ಟನಾದವ ನನ್ನೂ ಸ್ಮರಿಸಕೂಡದು. ಭೂಮಿಯಲ್ಲಿ ಪ್ರತಿಷ್ಠಿತವಾದ ಸ್ಥಾವರಲಿಂಗ ವನ್ನು ಕಿತ್ತುಹಾಕಲು ಹೇಗೆ ಅವಕಾಶವಿಲ್ಲವೋ ಹಾಗೆ ಈ ದೇಹವೆಂಬ ಭೂಮಿಯಲ್ಲಿ ಪ್ರತಿಷ್ಠಿತವಾದ ಇಷ್ಟಲಿಂಗವನ್ನು ಯಾರೂ ಕೀಳಬಾರದು. ಮತ್ತು

"ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ
ಕಸ್ಯ ಸ್ವಿದ್ಧನಮ್"

(ಈಶಾವಾಶ್ಯೋಪನಿಷತ್)

**ಅವಯವಾರ್ಥ :**—ತೇನ – ಲಿಂಗರೂಪನಾದ ಪರಶಿವನನ್ನು, ತ್ಯಕ್ತೇ–ಪ್ರಮಾದದಿಂದ ಅಗಲಿದರೆ, ನಭುಂಜೀಥಾಃ–ಭೋಜನಮಾಡದೆ, ಅನಶನವ್ರತವನ್ನವಲಂಬಿಸಿ ಶರೀರವನ್ನು ತ್ಯಜಿಸತಕ್ಕದು. ಕಸ್ಯಸ್ವಿತ್–

ಬೇರೆಯಾದ, ಧನಂ-"ಧನಂ ವೈ ಲಿಂಗಂ" ಎಂಬ ಕೌಷೀತಕೀ ಪ್ರಮಾಣಾನುಸಾರವಾಗಿ ಶಿವಲಿಂಗವನ್ನು, ಮಾಗೃಧಃ-ಸ್ವೀಕರಿಸಬೇಡ.

ಇದರಿಂದ ಇಷ್ಟಲಿಂಗವನ್ನು ದೇಹದಿಂದ ಯಾವಾಗಲೂ ವಿಯೋಗಿಸಬಾರದೆಂಬ ತಾತ್ಪರ್ಯವು ಸಿದ್ಧವಾಗುತ್ತದೆ. ಆದುದರಿಂದ ಹಸ್ತಕ್ಕೂ ಹಸ್ತದಲ್ಲಿರುವ ಶಿವಲಿಂಗಕ್ಕೂ ನಿತ್ಯಸಂಬಂಧವನ್ನು ತೋರಿಸುವುದಕ್ಕಾಗಿಯೇ **"ಅಯಂ ಮೇ ಹಸ್ತೋ ಭಗವಾನ್"** ಎಂಬ ಮಂತ್ರವು ಹೊರಟಿರುತ್ತದೆ. ಮತ್ತು ಈ ಮಂತ್ರದಲ್ಲಿ **"ಶಿವಾಭಿಮರ್ಶನಃ"** ಎಂಬುದೊಂದು ವಿಶೇಷಪದವಿರುತ್ತದೆ. ಹಸ್ತದಲ್ಲಿರುವ ಭಗವತ್ಪದವಾಚ್ಯವಾದ ಪರಮೇಶ್ವರನು **(ಶಿವ ಇತಿ ಅಭಿಮೃಶ್ಯತ ಇತಿ ಶಿವಾಭಿಮರ್ಶನಃ)** ಶಿವನೆಂದು ಪರಾಮರ್ಶಿಸಲ್ಪಡುವವನು ಎಂಬ ವಿಗ್ರಹಸಾಮರ್ಥ್ಯದಿಂದ **"ಹಸ್ತೋ ಭಗವಾನ್"** ಎಂಬ ವಾಕ್ಯದಲ್ಲಿರುವ ಭಗವತ್ಪದವು ಸಾಮಾನ್ಯವಚನವೆಂದು ಹೇಳಿದರೂ ಪರಶಿವಲಿಂಗಪರವೆಂದೇ ಸಿದ್ಧರವಾಗುತ್ತದೆ. ಇದಲ್ಲದೆ ಪೂರ್ವಮೀಮಾಂಸೆಯಲ್ಲಿ **"ವ್ರೀಹಿಭಿರ್ಯಜೇತ" "ಯವೈರ್ಯಜೇತ"** ವ್ರೀಹಿ (ಭತ್ತ) ಎಂಬ ಧ್ಯಾನದಿಂದ ಯಜ್ಞಮಾಡಬೇಕು. ಯವ (ಗೋಧಿ) ಧಾನ್ಯದಿಂದ ಯಜ್ಞಮಾಡಬೇಕು ಎಂಬ ವಾಕ್ಯಗಳಲ್ಲಿ 'ಯವ' ಮತ್ತು 'ವ್ರೀಹಿ' ಪದಗಳನ್ನು ಯಜ್ಞಸಾಧನಗಳನ್ನಾಗಿ ಹೇಳಿರುತ್ತಾರೆ. ಇಲ್ಲಿ ಮ್ಲೇಂಛರು 'ಪ್ರಿಯಂಗು' (ನವಣೆ) ಎಂಬ ಧಾನ್ಯಕ್ಕೆ 'ಯವ' ಎಂದು ಹೇಳುತ್ತಾರೆ. ಆರ್ಯರು ಇದೇ 'ಯವ' ಶಬ್ದವನ್ನು 'ದೀರ್ಘಶೂಕ' (ಉದ್ದವಾದ ಮುಳ್ಳುಗಳುಳ್ಳ) ಧಾನ್ಯವಿಶೇಷದಲ್ಲಿ ಪ್ರಯೋಗಿಸುತ್ತಾರೆ. ಹೀಗೆ 'ಯವ' ಶಬ್ದಕ್ಕೆ ಎರಡು ವಿಧ ಅರ್ಥವುಂಟಾಗುವಲ್ಲಿ ಯಾವ ಅರ್ಥವನ್ನು ಗ್ರಹಿಸಬೇಕೆಂಬ ಸಂಶಯವುಂಟಾಗಲು **"ಯತ್ರಾನ್ಯಾ ಓಷಧಯೋ ಮ್ಲಾಯಂತೇ ಅಥೈತೇನೋದಮಾನಾ ಇವೋಪತಿಷ್ಠಂತೇ"** "ಯಾವ ಕಾಲದಲ್ಲಿ ಇತರ ಸಸ್ಯಾದಿಗಳೆಲ್ಲ ಮ್ಲಾನಗಳಾಗಿ (ಬಾಡಿ) ದೀರ್ಘಶೂಕಧಾನ್ಯ (ಗೋಧಿ) ಗಳು ಮಾತ್ರ ಅಭಿವೃದ್ಧಿಯಾಗುತ್ತವೆಯೋ" ಎಂಬ ವಾಕ್ಯಶೇಷ ಬಲದಿಂದ 'ಯವ' ಶಬ್ದಕ್ಕೆ ದೀರ್ಘಶೂಕ ವಿಶಿಷ್ಟ ಧಾನ್ಯ (ಜವೆಗೋಧಿ) ವೆಂದೇ ಗ್ರಹಣಮಾಡಬೇಕಲ್ಲದೆ 'ಪ್ರಿಯಂಗು' (ನವಣೆ) ಧಾನ್ಯವನ್ನು ಗ್ರಹಣಮಾಡಬಾರದೆಂದು ನಿಯಮಮಾಡಿರುತ್ತಾರೆ.

ಇದಕ್ಕೆ " ಯವವ್ರೀಹ್ಯಧಿಕರಣನ್ಯಾಯ "ವೆಂದು ಹೇಳಿರುತ್ತಾರೆ. ಈ ನ್ಯಾಯಾನುಗುಣವಾಗಿ "ಅಯಂ ಮೇ ಹಸ್ತೋ ಭಗವಾನ್" ಎಂಬ ಮಂತ್ರದಲ್ಲಿರುವ ಭಗವತ್ಪದವು ಇಂದ್ರಾದಿದೇವತೆಗಳಲ್ಲಿಯೂ ನಾರದಾದಿ ಮಹರ್ಷಿಗಳಲ್ಲಿಯೂ ಪ್ರಯೋಗಿಸಲ್ಪಟ್ಟಿದ್ದರೂ ಮುಂದಿರುವ ." ಶಿವಾಭಿಮರ್ಶನಃ " ಎಂಬ ವಾಕ್ಯಶೇಷಬಲದಿಂದ ಆ ಭಗವತ್ಪದಕ್ಕೆ ಹಸ್ತದಲ್ಲಿರುವ ಲಿಂಗರೂಪ ಶಿವನೆಂದೇ ನಿಶ್ಚಯವಾಗುತ್ತದೆ. ಮತ್ತು ಈ ಮಂತ್ರವು ಹಸ್ತಾದಿ ಸ್ಥಾನಗಳಲ್ಲಿ ಶಿವಲಿಂಗಧಾರಣವನ್ನು ವಿಧಾನಮಾಡಿದಬಳಿಕ " ಅಯಂ ಮಾತಾ ಅಯಂ ಪಿತಾ" ಎಂದು ಸೃಷ್ಟಿಕರ್ತೃತ್ವವನ್ನೂ "ಅಯಂ ವಿಶ್ವಭೇಷಜಃ" ಎಂದು ಸ್ಥಿತಿಸಂಹಾರಕರ್ತೃತ್ವವನ್ನೂ ಬೋಧಿಸಿರುವುದನ್ನು ನೋಡಿದರೆ ಹಸ್ತದಲ್ಲಿ ಧರಿಸಲ್ಪಟ್ಟಿರುವ ಲಿಂಗಪರವೆಂದು ಹೇಳುವುದೇ ಯುಕ್ತವಾಗಿದೆ.

**ಶಂಕಾ :—**" ಅಯಂ ಶಿವಾಭಿಮರ್ಶನಃ " ಎಂಬ ವಾಕ್ಯಕ್ಕೆ ಅಯಂ–ಈ ಹಸ್ತವು " ಶಿವಾಭಿಮರ್ಶನಃ " " ಶಿವಂ ಅಭಿಮೃಶತೀತಿ ಶಿವಾಭಿಮರ್ಶನಃ " ಎಂಬ ವ್ಯುತ್ಪತ್ತಿಗನುಸಾರವಾಗಿ ಶಿವಲಿಂಗವನ್ನು ಸ್ಪರ್ಶಮಾಡುವದೆಂಬ ಅರ್ಥವಾಗುವುದರಿಂದ ಬಾಣಲಿಂಗ. ಮರಕತಲಿಂಗ, ಸ್ಫಟಿಕಲಿಂಗಗಳಲ್ಲಿ ಯಾವುದಾದರೊಂದು ಲಿಂಗವನ್ನು ದಾರು, ರಜತ, ಸುವರ್ಣಾದಿ ಪೀಠಗಳಲ್ಲಿರಿಸಿ ಪೂಜಿಸುವ ಸಮಯದಲ್ಲಿ ಪೂಜಕನು ತನ್ನ ಹಸ್ತದಿಂದ ಆ ಶಿವಲಿಂಗಕ್ಕೆ ಗಂಧಾದಿಲೇಪನ ದ್ರವ್ಯಗಳನ್ನಾಗಲಿ, ನೈವೇದ್ಯಾದಿ ಸಮರ್ಪಣೆಯನ್ನಾಗಲಿ ವಿನಿಯೋಗಿಸುತ್ತಾನೆ. ಹಾಗೆ ವಿನಿಯೋಗಿಸುವುದರಿಂದ ಈ ಹಸ್ತವನ್ನು " ಅಯಂ ಮೇ ಹಸ್ತೋ ಭಗವಾನ್ " " ಅಯಂ ಮಾತಾ ಅಯಂ ಪಿತಾ " ಎಂದು ಸ್ತುತಿಸಿರುತ್ತಾರೆ. ಆದುದರಿಂದ ಈ ಮಂತ್ರಾರ್ಥವು ಸ್ಥಾವರಲಿಂಗಪರವಾದುದೇ ಹೊರತು ಇಷ್ಟಲಿಂಗಪರವೆಂದು ಹೇಗೆ ಹೇಳುವುದು ?

**ಸಮಾಧಾನ :—**ಈ ಮಂತ್ರದಲ್ಲಿ " ಅಯಂ ಶಿವಾಭಿಮರ್ಶನಃ " ಎಂಬ ವಾಕ್ಯವಿರುವುದರಿಂದ ಈ ವಾಕ್ಯಕ್ಕೆ ಈ ಹಸ್ತವು ಯಾವಾಗಲೂ ಶಿವಲಿಂಗವನ್ನು ಸ್ಪರ್ಶಮಾಡಿರುತ್ತದೆಂಬ ಅರ್ಥವು ಸ್ಪಷ್ಟವಾಗಿ ತೋರಿಬರುತ್ತದೆ. ದಾರುಪೀಠಾದಿಗಳ ಮೇಲಿರಿಸಿ ಪೂಜಿಸಲ್ಪಡುವ ಸ್ಥಾವರಲಿಂಗದ

ಸ್ಪರ್ಶನವು ಸುಗಂಧಾದಿ ದ್ರವ್ಯಗಳನ್ನು ಲೇಪಿಸುವ ಸಮಯದಲ್ಲಿ ಮಾತ್ರ ಸಿದ್ಧಿಸುವುದಲ್ಲದೆ ಯಾವಾಗಲೂ ಸಿದ್ಧಿಸುವುದಿಲ್ಲ. ಮತ್ತು ಈ ಮಂತ್ರವು ಅಂತಹ ಗಂಧಾದಿಗಳನ್ನು ಲೇಪಿಸುವ ಕಾಲದಲ್ಲಾದರೂ ವಿನಿಯೋಗಿಸಲ್ಪಟ್ಟಿಲ್ಲ. ಜಡವಾದೀ ಹಸ್ತಕ್ಕೆ ಭಗವತ್ಸ್ವರೂಪತ್ವವೂ ಮಾತೃ, ಪಿತೃ ಸ್ವರೂಪತ್ವವೂ ಸಂಬಂಧಿಸುವುದಿಲ್ಲ. ಆದುದರಿಂದ ಈ ಮಂತ್ರವು ಹಸ್ತದಲ್ಲಿ ಧರಿಸಲ್ಪಟ್ಟಿರುವ ಇಷ್ಟಲಿಂಗಪರವಾದುದೆಂದೇ ನಿಶ್ಚಯಿಸತಕ್ಕುದು. ಆದುದರಿಂದ ಹಿಂದೆ "ಸೋಮಃ ಪವತೇ" ಎಂಬ ಮಂತ್ರದಲ್ಲಿರುವ ಸೋಮ ಪದಕ್ಕೆ ಸೋಮಲತಾಧಿಷ್ಠಿತವಾದ ಪರಶಿವಲಿಂಗವೆಂದು ಅರ್ಥಮಾಡಿದಂತೆ "ಅಯಂ ಮೇ ಹಸ್ತಃ" ಎಂಬ ಮಂತ್ರದಲ್ಲಿರುವ 'ಹಸ್ತ' ಎಂಬ ಪದವು ಜಡವಾದುದರಿಂದ ಇದಕ್ಕೆ ಭಗವತ್ಸ್ವರೂಪತ್ವವಾಗಲಿ, ಮಾತೃ ಪಿತೃಗಳಂತೆ ರಕ್ಷಣಾಶೀಲತ್ವಾದಿಗಳಾಗಲಿ ಸಂಭವಿಸದಿರುವುದರಿಂದ ಹಸ್ತದಲ್ಲಿ ಧರಿಸಲ್ಪಟ್ಟ ಶಿವಲಿಂಗವೆಂದು ಅರ್ಥಮಾಡುವುದೇ ನ್ಯಾಯವಾದುದು. ಒಂದುವೇಳೆ ಸ್ಥಾವರಲಿಂಗಪರವೆಂದೇ ಹಠಹಿಡಿಯುವುದಾದರೆ ದಕ್ಷಿಣ ಹಸ್ತವು ಗಂಧಾದಿಪದಾರ್ಥಗಳನ್ನು ಲೇಪಿಸುವ ಸಮಯದಲ್ಲಿ ಮಾತ್ರ ಆ ಲಿಂಗವನ್ನು ಸ್ಪರ್ಶಿಸುವ ಯೋಗ್ಯತೆಯನ್ನು ಪಡೆದಿರುವುದರಿಂದ ಮಾತೃ ಸ್ವರೂಪವೆಂದೂ, ಪಿತೃಸ್ವರೂಪವೆಂದೂ, ಭಗವತ್ಸ್ವರೂಪವೆಂದೂ ಸ್ತುತಿಗೆ ವಿಷಯವಾಗುವುದಾದರೆ ಇನ್ನು ಚೇತನಾಚೇತನಾತ್ಮಕವಾದೀ ಅಖಂಡ ಬ್ರಹ್ಮಾಂಡಮಂಡಲದ ಸೃಷ್ಟಿ, ಸ್ಥಿತಿ ಸಂಹಾರಗಳನ್ನು ಮಾಡುವ ಶಕ್ತಿಯುಳ್ಳ ಆ ಪರಶಿವಲಿಂಗವು ಅವಿಭಾಜ್ಯ (ನಿತ್ಯ) ಸಂಬಂಧದಿಂದ ವಾಮಹಸ್ತಪೀಠದಲ್ಲಿ ಸನ್ನಿಹಿತವಾಗಿರುವುದರಿಂದ ಅಂತಹ ವಾಮಹಸ್ತವನ್ನು ಭಗವತ್ಸ್ವರೂಪವೆಂದೂ, ಮಾತೃ, ಪಿತೃಸ್ವರೂಪವೆಂದೂ ಸ್ತುತಿಸಲು ಯಾವ ಬಾಧಕವೂ ಇಲ್ಲವೆಂದು ಕೈಮುತಿಕ ನ್ಯಾಯದಿಂದ ಸಿದ್ಧವಾಗುತ್ತದೆ. ಆದುದರಿಂದ ಹಸ್ತಗತವಾದ ಶಿವಲಿಂಗವು ತಾಯಿತಂದೆಗಳಂತೆ ನಮ್ಮನ್ನು ರಕ್ಷಿಸುವುದೆಂದು ಸ್ತುತಿಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ.

ಶಂಕಾ :— ಈ ಮಂತ್ರದ ಹಿಂದೆ "ಪವಿತ್ರಂ ತೇ ವಿತತಂ" ಎಂಬ ಮಂತ್ರವು ಇರುತ್ತದೆಯಷ್ಟೆ. ಈ ಮಂತ್ರವು ಲಿಂಗಧಾರಣ ವಿಧಾಯಕ ಮಂತ್ರವೆಂದು ಅಂಗೀಕಾರಮಾಡಿದಮೇಲೆ ಮುಂದಿರುವ "ಅಯಂ ಮೇ

ಹಸ್ತಃ" ಎಂಬ ಮಂತ್ರವೂ ಲಿಂಗಧಾರಣ ವಿಧಾಯಕವೆಂದು ಹೇಳುವು ದಾದರೆ ಇಲ್ಲಿಯೂ "ಅನ್ಯಥಾ ಸಿದ್ಧ"ವೆಂಬ ದೋಷವು ಬರುವುದಲ್ಲದೆ ಒಂದೇ ಶಾಖೆಯಲ್ಲಿ ಹೇಳಲ್ಪಟ್ಟಿರುವುದರಿಂದ ಮೀಮಾಂಸಾ ಶಾಸ್ತ್ರದ ಪ್ರಕಾರ ಅಪೂರ್ವವಿಧಿಗೆ ಭಂಗ ಬರುವುದು.

**ಸಮಾಧಾನ:**—ಇವೆರಡು ಮಂತ್ರಗಳು ಒಂದೇ ಶಾಖೆಯಲ್ಲಿ ಹೇಳ ಲ್ಪಟ್ಟಿದ್ದರೂ "ಪವಿತ್ರಂ ತೇ" ಎಂಬ ಪೂರ್ವಮಂತ್ರವು ಸಾಮಾನ್ಯವಾಗಿ ದೇಹದಲ್ಲಿ ಲಿಂಗಧಾರಣವನ್ನು ವಿಧಾನಮಾಡಿ ಅಂತಹ ದೇಹದಲ್ಲಿ ಕಂಠಾದಿ ಅನೇಕ ಉತ್ತಮಾಂಗಗಳೂ, ಪಾದಾದಿ ಅನೇಕ ನೀಚಾಂಗಗಳೂ ಇರುವುದ ರಿಂದ ಈ ಇಷ್ಟಲಿಂಗವನ್ನು ಯಾವ ಅಂಗಗಳಲ್ಲಿ ಧರಿಸಬೇಕು? ಯಾವ ಅಂಗಗಳಲ್ಲಿ ಧರಿಸಬಾರದು? ಯಾವ ಸ್ಥಲದಲ್ಲಿಟ್ಟು ಪೂಜಿಸಬೇಕು? ಯಾವ ಸ್ಥಲದಲ್ಲಿಟ್ಟು ಪೂಜಿಸಬಾರದು? ಎಂಬ ವಿಶೇಷಾಕಾರವಾದ ಸ್ಥಾನವನ್ನು ತೋರಿಸುವದಕ್ಕಾಗಿ "ಅಯಂ ಮೇ ಹಸ್ತೋ ಭಗವಾನ್" ಎಂಬ ಮಂತ್ರವು ಪ್ರವರ್ತಿಸಿರುವದರಿಂದ ಅನ್ಯಥಾ ಸಿದ್ಧದೋಷವು ಪರಿಹಾರ ವಾಗುವುದಲ್ಲದೆ ಅಪೂರ್ವವಿಧಿಗೆ ಯಾವ ಬಾಧಕವೂ ಇಲ್ಲ. ಈ ವಿಷಯದಲ್ಲಿ

ಲಿಂಗಂ ತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಮ್ ।
ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇ ತನೌ ॥
ಭಾವನಾತೀತಮವ್ಯಕ್ತಂ ಪರಬ್ರಹ್ಮ ಶಿವಾಭಿಧಮ್ ।
ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಮ್ ॥
ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ ।
ಮೂರ್ಧ್ನಿ ವಾ ಕಂಠದೇಶೇ ವಾ ಕಕ್ಷೇ ವಕ್ಷಸ್ಥಲೇಽಪಿ ವಾ ॥
ಕುಕ್ಷೌ ವಕ್ಷಸ್ಥಲೇ ವಾಪಿ ಧಾರಯೇಲ್ಲಿಂಗಮೈಶ್ವರಮ್ ।
ನಾಭೇರಧಸ್ತಾಲ್ಲಿಂಗಸ್ಯ ಧಾರಣಂ ಪಾಪಕಾರಣಮ್ ॥
ಜಟಾಗ್ರೇ ತ್ರಿಕಭಾಗೇ ಚ ಮಲಸ್ಥಾನೇ ನ ಧಾರಯೇತ್ ।
ಲಿಂಗಧಾರೀ ಸದಾ ಶುದ್ಧಃ ನಿಜಲಿಂಗಂ ಮನೋರಮಮ್ ॥
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ।
ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ವರಮ್ ।
ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರಂತರಮ್ ॥

(ಸಿದ್ಧಾಂತಶಿಖಾಮಣಿ ಪ. ೬.)

**ಅರ್ಥ :**—ಲಿಂಗವು ಇಷ್ಟಲಿಂಗವೆಂತಲೂ, ಪ್ರಾಣಲಿಂಗವೆಂತಲೂ, ಭಾವಲಿಂಗವೆಂತಲೂ ಮೂರು ತೆರನಾಗಿರುವುದು. ಇವುಗಳಲ್ಲಿ ಸ್ಥೂಲ ದೇಹದಲ್ಲಿ ಧರಿಸಲ್ಪಡುವ ಲಿಂಗವೇ ಇಷ್ಟಲಿಂಗವು. ದಹರಾಕಾಶದಲ್ಲಿ ಧ್ಯಾನಿಸಲ್ಪಡುವ ಭಾವನಾಮಯವೂ ತೇಜೋಮಯವೂ ಆಗಿರುವ ಸೂಕ್ಷ್ಮ ಲಿಂಗವೇ ಪ್ರಾಣಲಿಂಗವು. ವಾಕ್, ಮನಸ್ಸುಗಳಿಗೆ ಅಗೋಚರವೂ, ಅಮೂರ್ತವೂ, ನಿರ್ವಿಕಲ್ಪವೂ ಭಾವಾತೀತವೂ ಆಗಿರುವ ಪರಾತ್ಪರ ಲಿಂಗವೇ ಭಾವಲಿಂಗವು. ಈ ಮೂರು ಲಿಂಗಗಳ ಧಾರಣಸಿದ್ಧಿಯನ್ನು ಪಡೆಯಬೇಕಾದರೆ ತ್ರಿವಿಧದೀಕ್ಷೆಗಳಿಂದ ತ್ರಿವಿಧಶರೀರಗಳು ಪರಿಶುದ್ಧಗಳಾಗ ಬೇಕು. ನಾಭಿಯ ಮೇಲುಭಾಗಗಳೆಲ್ಲ ಉತ್ತಮಾಂಗಗಳು. ಕೆಳಭಾಗ ಗಳೆಲ್ಲಾ ನೀಚಾಂಗಗಳು. ನೀಚಾಂಗಗಳಲ್ಲಿ ಇಷ್ಟಲಿಂಗವನ್ನು ಧರಿಸು ವುದು ಮಹಾಪಾಪದಾಯಕವು ಮತ್ತು ಕೂದಲಿನ ತುದಿಯಲ್ಲೂ, ಪೃಷ್ಠ ಭಾಗದಲ್ಲೂ ಧರಿಸಬಾರದು. ಇಷ್ಟಲಿಂಗಧಾರಿಯು ಯಾವ ಆಶೌಚಗಳು ಸಂಭವಿಸಿದರೂ ಸ್ನಾನದಿಂದ ಪರಿಶುದ್ಧನಾಗಿ ವಾಮಹಸ್ತದಲ್ಲಿ ಲಿಂಗವನ್ನಿ ರಿಸಿ ಗಂಧಪುಷ್ಪಾದಿಗಳಿಂದ ಅರ್ಚಿಸುತ್ತಿರಬೇಕು. ಬಾಹ್ಯಪೀಠಾರ್ಚನೆ ಗಿಂತಲೂ ಕರಪೀಠಾರ್ಚನೆಯು ವೀರಶೈವರಿಗೆ ಉತ್ತಮ ಫಲದಾಯಕ ವೆಂದು ಅನುಜ್ಞೆಯಿತ್ತಿರುವರು. "**ಪೀನೋ ದೇವದತ್ತಃ ದಿವಾ ನ ಭುಂಕ್ತೇ**" "ದೇವದತ್ತನು ದಪ್ಪನಾಗಿದ್ದಾನೆ. ಹಗಲು ಊಟವನ್ನೇ ಮಾಡುವುದಿಲ್ಲ" ಎಂಬ ವಾಕ್ಯದಲ್ಲಿ ದೇವದತ್ತನು ದಪ್ಪನಾಗಿರಬೇಕಾದರೆ ಭೋಜನವು ಅತ್ಯವಶ್ಯಕವು. ಭೋಜನವಿಲ್ಲದೆ ಅಂತಹ ಸ್ಥೂಲತ್ವವುಂಟಾ ಗುವುದಿಲ್ಲ. ಆದುದರಿಂದ ದೇವದತ್ತನು ಹಗಲು ಊಟಮಾಡದಿದ್ದರೂ ಸ್ಥೂಲವಾಗಿರುವುದನ್ನು ನೋಡಿದರೆ ರಾತ್ರಿಯಲ್ಲಿ ಊಟಮಾಡುತ್ತಾನೆಂದು ಅರ್ಥಾತ್ ಊಹಿಸಬೇಕಾಗುವುದು. ಇದಕ್ಕೆ **ಅರ್ಥಾಪತ್ತಿ** ಪ್ರಮಾಣ ವೆನ್ನುತ್ತಾರೆ. "**ಅಯಂ ಮೇ ಹಸ್ತಃ..................ನಿರೀಹಿ**" ಎಂಬ ಮಂತ್ರದ ಮಧ್ಯಭಾಗದಲ್ಲಿ "**ಶಿವಾಭಿಮರ್ಶನಃ**" ಎಂಬುದೊಂದು ವಿಶೇಷ ಪದವಿರುತ್ತದೆ. ಇದಕ್ಕೆ ಈ ಹಸ್ತವು "**ಶಿವಂ ಅಭಿತಃ ಸ್ಪೃಶ ತೀತಿ ಶಿವಾಭಿಮರ್ಶನಃ**" ಎಂಬ ವ್ಯುತ್ಪತ್ತಿಗನುಸಾರವಾಗಿ ಈ ಹಸ್ತವು ಎಡೆಬಿಡದೆ ಲಿಂಗವನ್ನು ಸ್ಪರ್ಶಮಾಡಿರಬೇಕೆಂಬ ಅರ್ಥವು ಸಿದ್ಧವಾಗುತ್ತದೆ.

ಇಂತಹ ಸಾರ್ವಕಾಲಿಕ ಸ್ಪರ್ಶವು ದೇಹದಲ್ಲಿ ಲಿಂಗಧಾರಣವಿಲ್ಲದ ಹೊರತು ಸಿದ್ಧಿಸುವುದಿಲ್ಲ. ಆದುದರಿಂದ ಅರ್ಥಾತ್ ಲಿಂಗಧಾರಣವು ಸಿದ್ಧಿಸುವುದು.

**ಶಂಕಾ :**—"ಅಭಿತಃಸ್ಪೃಶತಿ" ಎಂಬ ವ್ಯುತ್ಪತ್ತಿಯಿಂದ ದೇಶ ಸಂಬಂಧವಾದ ವ್ಯಾಪ್ತಿಯನ್ನು ಅಂಗೀಕರಿಸಲು ಅವಕಾಶವಿರುವುದರಿಂದ ಅಂತಹ ದೈಶಿಕಸ್ಪರ್ಶವು ಭೂಮಿಯಲ್ಲಿ ಸ್ಥಾಪಿತವಾದ ಸ್ಥಾವರಲಿಂಗದಲ್ಲೂ ಸಂಭವಿಸುವುದರಿಂದ ಈ ಮಂತ್ರಕ್ಕೆ ಸ್ಥಾವರಲಿಂಗಪರವಾದ ಅರ್ಥವನ್ನಾದರೂ ಅಂಗೀಕರಿಸಬಹುದಲ್ಲವೆ?

**ಸಮಾಧಾನ :**—ಈ ಮಂತ್ರದಲ್ಲಿರುವ "ಅಭಿಮರ್ಶನಃ" ಎಂಬ ಪದದಲ್ಲಿರುವ "ಅಭಿ" ಎಂಬ ಉಪಸರ್ಗಕ್ಕೆ 'ಎಲ್ಲಾ ಕಾಲಗಳಲ್ಲಿಯೂ', 'ಎಲ್ಲಾ ಪ್ರದೇಶಗಳಲ್ಲಿಯೂ' ಎಂಬ ಅರ್ಥವನ್ನೇ ಅಂಗೀಕರಿಸಬೇಕಲ್ಲದೆ ಕೇವಲ ದೈಶಿಕ (ಯತ್ಕಿಂಚಿತ್) ಸ್ಪರ್ಶವನ್ನಂಗೀಕರಿಸುವುದು ಉಚಿತವಲ್ಲ. ಹೀಗೆ ಸರ್ವಕಾಲ ಸರ್ವದೇಶವ್ಯಾಪ್ತಿಯು ಭೂಮಿಯಲ್ಲಿ ಪ್ರತಿಷ್ಠಿಸಿದ ಸ್ಥಾವರಲಿಂಗದಲ್ಲಿ ಸರ್ವಾವಯವಾವಚ್ಛೇದದಿಂದ ಸಂಭವಿಸುವುದಿಲ್ಲ. ಯಾವ ಜ್ಜೀವವೂ ದೇಹದಲ್ಲಿ ಧರಿಸಲ್ಪಟ್ಟು ಹಸ್ತದಲ್ಲಿ ಪೂಜಿಸಲ್ಪಡುತ್ತಿರುವ ಇಷ್ಟ ಲಿಂಗದಲ್ಲಾದರೋ ಸರ್ವಕಾಲ, ಸರ್ವದೇಶರೂಪವಾದ ಉಭಯವಿಧ ವ್ಯಾಪ್ತಿಯೂ ಸಂಬಂಧಿಸುವುದರಿಂದ "ಅಭಿತಃ" ಎಂಬ ಪದದಿಂದ ತೋರಿ ಬರುವ ಅಂತಹ ಸಾರ್ವತ್ರಿಕಸ್ಪರ್ಶನವು ವಾಮಹಸ್ತದಲ್ಲಿ ಧರಿಸಲ್ಪಟ್ಟಿರುವ ಇಷ್ಟಲಿಂಗದಲ್ಲಿ ಸಿದ್ಧಿಸುವಂತೆ ಸ್ಥಾವರಲಿಂಗದಲ್ಲಿ ಸಿದ್ಧಿಸುವುದಿಲ್ಲ. ಇದಲ್ಲದೆ ಯಾವ ಕಾರಣದಿಂದ ನನ್ನ ಹಸ್ತವು ನಿತ್ಯವಾಗಿ ಲಿಂಗಸಂಬಂಧವುಳ್ಳುದಾಗಿರುವುದೋ ಆ ಕಾರಣದಿಂದ, ಮೇ–ನನ್ನ, ಹಸ್ತಃ–ಕೈಯು, ಹೇ ಸುಬಂಧೋ-ಎಲೈ ಅವ್ಯಾಜಕರುಣಾಮೂರ್ತಿಯಾದ ಪರಶಿವನೇ! ತೇ ಪ್ರಸರ್ಪಣಂ–ಯಾವಾಗಲೂ ನಿನ್ನನ್ನು ಅನುಸರಿಸುತ್ತದೆ. ನೀನೆ ತಂದೆಯು, ನೀನೆ ತಾಯಿಯು, ನೀನೆ ದೈವವು, ನೀನೆ ಭವರೋಗಪರಿಹಾರಕನು ಎಂದು ಹಸ್ತದಲ್ಲಿರುವ ಇಷ್ಟಲಿಂಗವನ್ನು ಸ್ತುತಿಸುತ್ತಿರುವ ಪದಗಳೇ ವಿಶೇಷವಾಗಿ ಕಾಣುತ್ತಿರುವುದರಿಂದ ಈ ಮಂತ್ರವು ಇಷ್ಟಲಿಂಗಧಾರಣಪರವೆಂದು ನಿರ್ಧರವಾಗುತ್ತದೆ. ಇದಲ್ಲದೆ **ದಂಡಾಪೂಪಿಕಾ ನ್ಯಾಯದಿಂದಲೂ** ಈ

ಮಂತ್ರವು ಇಷ್ಟಲಿಂಗಧಾರಣವನ್ನು ಪ್ರತಿಪಾದಿಸುವುದು. 'ಚಕ್ಕುಲಿಗಳನ್ನು ಪೋಣಿಸಿಟ್ಟಿರುವ ದಂಡವನ್ನು ಯಾವುದೋ ಒಂದು ಆನೆಯು ತಿಂದು ಹೋಯಿತೆಂದು ಒಬ್ಬನು ಮತ್ತೊಬ್ಬನಿಗೆ " ದಂಡೋ ಭಕ್ಷಿತಃ " ಎಂದು ಹೇಳುತ್ತಾನೆ. ಆಗ ಆ ದಂಡವನ್ನು ಮಾತ್ರ ತಿಂದು ಆ ದಂಡದಲ್ಲಿ ಪೋಣಿಸಿದ್ದ ಚಕ್ಕುಲಿಗಳನ್ನು ಸಹ ತಿಂದಿತೆಂದು ಬೇರೆ ಹೇಳಬೇಕಾಗಿಲ್ಲವು. ಅಂತಹ ಬಿರುಸಾದ ಕೋಲನ್ನೇ ತಿಂದಿರುವಾಗ ಅದರಲ್ಲಿರುವ ಮೃದುವೂ, ಸ್ವಾದವೂ ಆದ ಚಕ್ಕುಲಿಗಳನ್ನು ತಿಂದಿತೆಂದು ಹೇಳದೆ ಇದ್ದರೂ ಅದು ತಾನಾಗಿಯೆ ಸಿದ್ಧಿಸುತ್ತದೆ. ಇದೇ ದಂಡಾಪೂಪಿಕನ್ಯಾಯಸ್ವರೂಪವು. ಇದನ್ನೇ ಕೈಮುತಿಕನ್ಯಾಯವೆಂದೂ ಹೇಳುತ್ತಾರೆ. ಇಲ್ಲಿ ಭೂಮಿ ಪ್ರತಿಷ್ಠಿತವಾದ ಶಿವಲಿಂಗವನ್ನು ಪೂಜಿಸುವುದರಲ್ಲಿ ದಕ್ಷಿಣಹಸ್ತವು ಕರಣ (ಸಾಧನ) ವಾಗಿರುತ್ತದೆ. ಗಂಧಾದಿಗಳನ್ನು ಲೇಪಿಸುವುದರಲ್ಲಿ ಈ ಹಸ್ತವು ಸಾಧಕವೆಂದು ಹೇಳಿದಮಾತ್ರದಿಂದ ಆ ಹಸ್ತವನ್ನು ಭಗವಾನ್ ಎಂತಲೂ, ಪಿತೃವೆಂತಲೂ, ಮಾತೃವೆಂತಲೂ ಸ್ತುತಿಸುವಾಗ ಅಂತಹ ಶಿವಲಿಂಗವನ್ನು ಸರ್ವಕಾಲದಲ್ಲಿ ಎಡೆಬಿಡದೆ ದೇಹದಲ್ಲಿ ಧರಿಸಿದ್ದು ಪ್ರತಿದಿವಸ ವಾಮಹಸ್ತದಲ್ಲಿರಿಸಿ ದಕ್ಷಿಣಹಸ್ತದಿಂದ ಆ ಲಿಂಗಕ್ಕೆ ಗಂಧಾಕ್ಷತೆ ಬಿಲ್ವಾದಿಗಳನ್ನು ಅರ್ಪಿಸುತ್ತಿರುವುದರಿಂದ ಸರ್ವದಾ ಶಿವಲಿಂಗ ಸಂಬಂಧವುಳ್ಳ ಆ ಹಸ್ತಕ್ಕೆ ಭಗವತ್ಸ್ವರೂಪತ್ವವೂ, ಮಾತೃಸ್ವರೂಪತ್ವವೂ, ಪಿತೃಸ್ವರೂಪತ್ವವೂ ತಾನಾಗಿಯೇ ಸಿದ್ಧಿಸುವುದೆಂದು ಭಾವವು.

ಪ್ರಾಣಲಿಂಗಾಂಗಸಂಬಂಧೀ ಸ ರುದ್ರೋ ನಾತ್ರ ಸಂಶಯಃ ।
ಯಾವಜ್ಜೀವಮಿದಂ ದತ್ತಮಿಷ್ಟಲಿಂಗಂ ಸಮರ್ಚಯ ॥
ಕರಾಬ್ಜಪೀಠೇ ವಿನ್ಯಸ್ಯ ತದ್ಧ್ಯಾನಾಸಕ್ತಮಾನಸಃ ।
ಹಸ್ತಲಿಂಗಾಂಗಸಂಬಂಧೀ ಸದಾನಂದಾಹ್ವಯೋ ಮುನಿಃ ॥
ಸರ್ವೋಪನಿಷದರ್ಥಜ್ಞಃ ಶಿವಜ್ಞಾನಪರಾಯಣಃ ।
ಏವಂ ಷಟ್‌ಸ್ಥಲನಿರ್ಣಯಂ ಶಿವಪದಪ್ರಾಪ್ತ್ಯೈಕಹೇತುಂ ಸದಾ ॥
ಯಸ್ಸೇವೇತ ಕರಾಬ್ಜಪೀಠನಿಹಿತಃ ಶ್ರೀಕಂಠಲಿಂಗಾರ್ಚಕಃ ।
ಸ ಜ್ಞಾನೀ ಸ ಪುರಾತನಸ್ಸ ಚ ಮಹಾನ್‌ಮಾಹೇಶ್ವರೇಷೂತ್ತಮಃ ॥
ಮರ್ತ್ಯಸ್ತೇನ ಜಗತ್ತ್ರಯೇऽಪಿ ಸದೃಶೋ ವಿದ್ಯೇತ ದೇವೋऽಪಿ ವಾ ।

ಲಿಂಗಮಂತ್ರೋಪದೇಶಶ್ಚ ಕರಪೀಠಾರ್ಚನಂ ಜಪಃ ।
ಮಲ್ಲಿಂಗಧಾರಣ ತ್ವತ್ರ ಲೋಕಾಚಾರ ಪ್ರವರ್ತನಮ್ ॥

( ಶಂಕರಸಂಹಿತೆ )

ಅರ್ಥ :—ಗುರುವಿನಿಂದ ಷಡಧ್ವಶೋಧನ ಸಂಸ್ಕಾರಪೂರ್ವಕವಾಗಿ ಅನುಗ್ರಹಿಸಲ್ಪಟ್ಟ ಇಷ್ಟಲಿಂಗವನ್ನು ಯಾವನು ದೇಹವಿರುವವರೆಗೂ ಧರಿಸುವನೋ ಅವನು ರುದ್ರನೇ ಆಗುತ್ತಾನೆಂಬುವದರಲ್ಲಿ ಸಂಶಯವಿಲ್ಲ. ಇಂತಹ ಇಷ್ಟಲಿಂಗವನ್ನು ವಾಮಹಸ್ತವೆಂಬ ಪೀಠದಲ್ಲಿರಿಸಿ ದಕ್ಷಿಣಹಸ್ತದಿಂದ ಪೂಜಿಸುತ್ತಿರಬೇಕು. ಸರ್ವೋಪನಿಷದ್ರಹಸ್ಯವನ್ನು ತಿಳಿದು ಶಿವಜ್ಞಾನಿಯಾದ ಸದಾನಂದಮುನಿಯು ಈ ಇಷ್ಟಲಿಂಗವನ್ನು ಹಸ್ತಪೀಠದಲ್ಲಿ ಪೂಜಿಸುತ್ತಿದ್ದುದರಿಂದಲೇ ಲಿಂಗಾಂಗಸಾಮರಸ್ಯಸಿದ್ಧಿಯನ್ನು ಪಡೆದನು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಮುಕ್ತಿ ಸೋಪಾನಗಳಾಗಿರುವ ಷಟ್‌ಸ್ಥಲಗಳೂ, ಈ ಇಷ್ಟಲಿಂಗಧಾರಣೆಯೂ, ವಾಮಹಸ್ತದಲ್ಲಿ ಪೂಜೆಯೂ, ಶಿವಮಂತ್ರೋಪದೇಶವೂ, ಶಿವಮಂತ್ರ ಪುರಶ್ಚರಣೆಯೂ ಲಿಂಗಾಂಗಿಯ ಪರಮಧರ್ಮವು – ಇತ್ಯಾದಿ ಅನೇಕ ಉಪಬೃಂಹಣ ವಾಕ್ಯಗಳು "ಅಯಂ ಮೇ ಹಸ್ತಃ" ಎಂಬ ಮಂತ್ರಾರ್ಥವನ್ನು ಪುಷ್ಟೀಕರಿಸುವದರಲ್ಲಿ ಜಾಗರೂಕಗಳಾಗಿರುತ್ತವೆ.



# ಅಲಂಕಾರಶಾಸ್ತ್ರ - ಲಿಂಗಧಾರಣ

ಹೀಗೆ ಋಗಾದಿ ಮಂತ್ರಗಳ ಆಧಾರದಿಂದ ಲಿಂಗಧಾರಣವನ್ನು ಪ್ರತಿಪಾದಿಸಲಾಯಿತು. ಇನ್ನು ಅರ್ಥಾಲಂಕಾರದಲ್ಲಿ ಪ್ರಧಾನಗಳಾದ ಉಪಮಾ ದೃಷ್ಟಾಂತಾಲಂಕಾರಗಳ ಆಧಾರದಿಂದ ಲಿಂಗಧಾರಣವು ಸಾಧಿಸಲ್ಪಡುವುದು.

"ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ"

(೬-೧೨) (ಜಾಬಾಲೋಪನಿಷತ್ತು)

ಅರ್ಥ :—ಯಾರು ಭಸ್ಮವನ್ನು ದೂಷಿಸುತ್ತಾರೆಯೋ ಅವರು ಶಿವನನ್ನು ದೂಷಿಸುವವರಿಗೆ ಸಮಾನರಾಗುತ್ತಾರೆ.

ನೇಕ್ಷೇತ ಪೂಜಾವೇಳಾಯಾಂ ಷರಂ ವತ್ಸ ಬಹಿಷ್ಕೃತಮ್ ।
ದಧೀಚಿನಾ ಗೌತಮೇನ ಯೇ ಶಪ್ತಾ ಬ್ರಾಹ್ಮಣಾಧಮಾಃ ॥
ಕಲಾವವತರಿಷ್ಯಂತಿ ನಿಂದಕಾಸ್ತೇ ಬಹಿಷ್ಕೃತಾಃ ।
ಬ್ರಹ್ಮಹತ್ಯಾ ಸುರಾಪಾನ ಸ್ವರ್ಣಸ್ತೇಯಕೃತಃ ಪುರಾ ॥
ಬಹಿರ್ನರಾ ಭವಿಷ್ಯಂತಿ ಕಲಾವೀಶ್ವರನಿಂದಕಾಃ ॥

(ಜಾಬಾಲೋಪನಿಷತ್ತು)

ಅರ್ಥ :—ದಧೀಚಿ, ಗೌತಮಾದಿ ಮಹರ್ಷಿಗಳ ಶಾಪದಿಂದ ದಗ್ಧರಾದ ಮಾನವರು ಬಹಿಷ್ಕೃತರೆನಿಸುತ್ತಾರೆ. ಮತ್ತು ಕಲಿಯುಗದಲ್ಲಿ ಜನ್ಮಧಾರಣಮಾಡುತ್ತ ಶಿವಲಿಂಗಾರಾಧಕರನ್ನೂ ಶಿವಲಿಂಗವನ್ನೂ ದೂಷಿಸುವುದೇ ಅವರ ಸ್ವಭಾವವಾಗಿರುತ್ತದೆ. ಬ್ರಹ್ಮಹತ್ಯೆಮಾಡುವವರಾಗಲಿ, ಸುರಾಪಾನ ಮಾಡುವವರಾಗಲಿ, ಸ್ವರ್ಣಸ್ತೇಯ ಮಾಡುವವರಾಗಲಿ ಇವರೆಲ್ಲರನ್ನೂ ಬಹಿಷ್ಕರಿಸತಕ್ಕುದು. ಇಂತಹ ಕ್ರೂರಜನಗಳು ಕಲಿಯುಗದಲ್ಲಿ ಹುಟ್ಟಿ ಈಶ್ವರನನ್ನೂ, ಈಶ್ವರಾರಾಧಕರನ್ನೂ ದೂಷಿಸುವರು. ಆದುದರಿಂದ ಶಿವಲಿಂಗಾರಾಧಕರು ಇಂತಹ ಜನಗಳನ್ನು ಶಿವಲಿಂಗಪೂಜಾ ಸಮಯದಲ್ಲಿ ನೋಡಬಾರದು – ಇತ್ಯಾದಿ ಪ್ರಮಾಣಗಳಿಂದ ಶಿವನಿಂದೆಯು ಪಾಪದಾಯಕವೆಂದೂ, ತ್ರಿಪುಂಡ್ರದೂಷಣೆಯು ಶಿವದೂಷಣೆಗೆ ಸಮಾನವೆಂದೂ ಸ್ಪಷ್ಟವಾಗುತ್ತದೆ.

ಲಿಂಗಧಾರಣಕಂ ನಾಮ ವ್ರತಂ ಮಾಹೇಶ್ವರಾಭಿಧಮ್ ।
ಯೇ ಧಾರಣಂ ಪ್ರಕುರ್ವಂತಿ ತೇ ಯಾಂತಿ ಪರಮಾಂ ಗತಿಮ್ ॥

ಅರ್ಥ :— ಶಿವಲಿಂಗಧಾರಣೆಯು ಮಾಹೇಶ್ವರವ್ರತವಾಗಿದೆ. ಇಂತಹ ಲಿಂಗವನ್ನು ಯಾರು ಅನವರತವೂ ಧರಿಸುತ್ತಾರೆಯೋ ಅವರು ಜನನಮರಣರೂಪವಾದ ದುಃಖಸಮುದ್ರವನ್ನು ದಾಟುವರು. ಹೀಗೆ ಅನಂತ ಉಪೋದ್ವಲಕ ವಾಕ್ಯಗಳು ಶಿವಲಿಂಗಧಾರಣೆಯ ಪ್ರಶಂಸೆಮಾಡಿರುತ್ತವೆ. ಇಂತಹ ಲಿಂಗಧಾರಣೆಯ ಹೋಲಿಕೆಯನ್ನು ತ್ರಿಪುಂಡ್ರಧಾರಣೆಗೆ ಕೊಟ್ಟಿರುವುದರಿಂದ ತ್ರಿಪುಂಡ್ರಧಾರಣವು ಲಿಂಗಧಾರಣ ಸದೃಶವಾದುದೆಂದು ಸಿದ್ಧವಾಗುವುದು. ಹೀಗೆ "ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ" ಎಂಬ ಜಾಬಾಲೋಪನಿಷದ್ವಾಕ್ಯದಲ್ಲಿ ಉಪಮಾನೋಪಮೇಯ ಭಾವಗಳು ತೋರುತ್ತವೆ– ಇಲ್ಲಿ ತ್ರಿಪುಂಡ್ರನಿಂದೆಯು ಮತ್ತು ತ್ರಿಪುಂಡ್ರಧಾರಣ ನಿಂದೆಯು ಇವೆರಡೂ ಉಪಮೇಯಗಳಾಗಿವೆ. ಶಿವಲಿಂಗ ನಿಂದೆಯು ಮತ್ತು ಶಿವಲಿಂಗಧಾರಣನಿಂದೆಯು ಇವೆರಡೂ ಉಪಮಾನಗಳಾಗಿವೆ. ಅಂದರೆ ಭಸ್ಮವನ್ನು ನಿಂದಿಸುವವರು ಶಿವಲಿಂಗವನ್ನು ನಿಂದಿಸುವವರಂತೆ ನರಕವನ್ನೈದುವರು. ಭಸ್ಮಧಾರಣವನ್ನು ನಿಂದಿಸುವವರು ಶಿವಲಿಂಗಧಾರಣವನ್ನು ನಿಂದಿಸುವವರಂತೆ ನರಕವನ್ನೈದುವರು ಎಂಬುದಾಗಿ ಉಪಮಾಲಂಕಾರದ ಮರ್ಯಾದೆಯಿಂದ ಶಿವಲಿಂಗನಿಂದಾ ಸಾದೃಶ್ಯವು ತ್ರಿಪುಂಡ್ರಧಾರಣನಿಂದೆಗೂ ಹೇಳಲ್ಪಟ್ಟಿತು. ಇಲ್ಲಿ ಸಾದೃಶ್ಯವೆಂದರೆ—

"ತದ್ಭಿನ್ನತ್ವೇ ಸತಿ ತದ್ಗತಭೂಯೋ ಧರ್ಮವತ್ವಮ್" ಎಂಬ ಆಲಂಕಾರಿಕೋಕ್ತಿಯಂತೆ ಉಪಮಾನೋಪಮೇಯವಾಕ್ಯಗಳು ಭಿನ್ನಭಿನ್ನಗಳಾಗಿದ್ದು ಉಪಮಾನದಲ್ಲಿರುವ ಧರ್ಮಗಳು ಉಪಮೇಯದಲ್ಲಿ ತೋರುವುದೇ ಸಾದೃಶ್ಯವೆಂದೆನಿಸಿಕೊಳ್ಳುತ್ತದೆ.

"ಧೈರ್ಯೇಣ ಹಿಮವಾನಿವ" "ಈ ಶೂರನಾದ ಮಹಾರಾಜನು ಧೈರ್ಯದಲ್ಲಿ ಹಿಮವತ್ಪರ್ವತಕ್ಕೆ ಸಮಾನನು" ಎಂಬುದೇ ಉದಾಹರಣೆ. ಇಲ್ಲಿ ಹಿಮವತ್ಪರ್ವತವೇ ಉಪಮಾನವು, ರಾಜನೇ ಉಪಮೇಯವು.

ಈ ಉಪಮಾನೋಪಮೇಯ ವಾಕ್ಯಗಳೆರಡೂ ಬೇರೆಬೇರೆಯಾಗಿದ್ದು ಹಿಮವತ್ಪರ್ವತವು ಯಾವಾಗಲೂ ಹೇಗೆ ಅಲುಗಾಡದೆ ಸ್ಥಿರವಾಗಿರುತ್ತದೆಯೋ ಹಾಗೆ ಈ ಮಹಾರಾಜನು ಎಂತಹ ಶತ್ರುಗಳು ಪ್ರತಿಭಟಿಸಿದರೂ ವಿಕಾರಗೊಳ್ಳದೆ ಸ್ಥಿರವಾಗಿ ನಿಂತು ಯುದ್ಧಮಾಡುವನು ಎಂಬ ಸಾದೃಶ್ಯದಿಂದ ಉಪಮಾನವೆನಿಸಿದ ಹಿಮವತ್ಪರ್ವತದಲ್ಲಿರುವ ಅಚಂಚಲತೆ, ಸ್ಥಿರತೆ, ನಿರ್ವಿಕಾರತೆ ಮುಂತಾದ ಧರ್ಮಗಳು ರಾಜನಲ್ಲಿ ತೋರುತ್ತವೆ. ಅದರಂತೆ ಉಪಮಾನವೆನಿಸಿದ ತ್ರಿಪುಂಡ್ರಧಾರಣವೂ ಉಪಮೇಯವೆನಿಸಿದ ಲಿಂಗಧಾರಣೆಯೂ ಇವೆರಡೂ ಬೇರೆಬೇರೆಯಾಗಿದ್ದು ಅಧಿಕಗುಣದಿಂದ ಕೂಡಿರುವ ಪ್ರಸಿದ್ಧೋಪಮಾನವೆನಿಸಿದ ಲಿಂಗಧಾರಣದಿಂದಾಗುವ ಪಾಪನಾಶಕತ್ವ, ಮುಕ್ತಿಜನಕತ್ವ, ಅಪೂರ್ವದಾಯಕತ್ವ ಮುಂತಾದ ಧರ್ಮಗಳು ಉಪಮೇಯವೆನಿಸಿದ ತ್ರಿಪುಂಡ್ರಧಾರಣದಲ್ಲಿಯೂ ಸಂಭವಿಸುತ್ತವೆ. ಹೀಗೆ ತ್ರಿಪುಂಡ್ರಧಾರಣಕ್ಕೆ ವ್ಯಂಜನಾವೃತ್ತಿಯಿಂದ ತಾದಾತ್ಮ್ಯಬೋಧಕವಾದ " ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ " ಎಂಬ ವಾಕ್ಯವು ಉಪಮಾನೋಪಮೇಯಭಾವವನ್ನು ಪ್ರತಿಪಾದಿಸುವುದರಿಂದ ಉಪಮಾಲಂಕಾರವು ಸ್ಪಷ್ಟವಾಗುತ್ತದೆ. ಮುಖ್ಯವಾಗಿ ವೇದಾಗಮಪ್ರಣೀತವಾದ ಶಿವಲಿಂಗವನ್ನು ಶಿವದೀಕ್ಷೆಯಿಂದ ಪರಿಶುದ್ಧಿಗೊಂಡ ದೇಹದಲ್ಲಿ ಧರಿಸುತ್ತ, ವಾಮಹಸ್ತದಲ್ಲಿಟ್ಟು ಪೂಜಿಸುತ್ತ, ಧ್ಯಾನ, ಜಪ, ತಪ, ಅರ್ಚನ, ಜ್ಞಾನಗಳೆಂಬ ಪಂಚಮಹಾಯಜ್ಞಗಳನ್ನು ಅನುಷ್ಠಿಸುತ್ತಲಿರುವವನಿಗೆ ಪಾಪವೆಲ್ಲವೂ ನಾಶವಾಗಿ ಮುಕ್ತಿಯು ಹೇಗೆ ಸಂಭವಿಸುವುದೋ ಹಾಗೆ ಲಿಂಗಧಾರಣೆಗೆ ಅಂಗವೆನಿಸಿದ ತ್ರಿಪುಂಡ್ರವನ್ನು ಧರಿಸಿದವನಿಗೂ ಸಂಚಿತಾದಿ ಕರ್ಮರಾಶಿಯು ನಷ್ಟವಾಗಿ ಮುಕ್ತಿಯು ಕೈಸೇರುವುದೆಂದು ತಾತ್ಪರ್ಯವನ್ನು ಕೊಡುವ ಉಪಮಾಲಂಕಾರ ವಿಚಾರದಿಂದ ಲಿಂಗಧಾರಣವು ಸಾಧಿಸಲ್ಪಟ್ಟಿತು.

**ಶಂಕಾ :—** ಉದಾಹರಿಸಿದ " ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ " ಎಂಬ ಜಾಬಾಲೋಪನಿಷತ್ತಿನಲ್ಲಿ ತ್ರಿಪುಂಡ್ರಧಾರಣ, ಲಿಂಗಧಾರಣಗಳಿಗೆ ಉಪಮಾನೋಪಮೇಯಭಾವವು ತೋರುವುದರಿಂದ ಉಪಮಾಲಂಕಾರವನ್ನು ಹೇಳಬಹುದಾದರೂ ಉಪಮಾನ, ಉಪಮೇಯ, ಸಾಧಾರಣಧರ್ಮ ಉಪಮಾವಾಚಕ ಈ ನಾಲ್ಕೂ

ಒಂದು ವಾಕ್ಯದಲ್ಲಿ ಸ್ಪಷ್ಟವಾಗಿದ್ದರೆ ಉಪಮಾಲಂಕಾರವನ್ನು ಹೇಳ ಬಹುದು. "ಧೈರ್ಯೇಣ ಹಿಮವಾನಿವ" ಎಂಬಲ್ಲಿಯಾದರೋ ಇವು ನಾಲ್ಕೂ ಸ್ಪಷ್ಟವಾಗಿರುವುದರಿಂದ ಉಪಮಾಲಂಕಾರವನ್ನು ಹೇಳಲು ಅವ ಕಾಶವಿರುವಂತೆ "ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವ ಮೇವ ತೇ" ಎಂಬುವಲ್ಲಿ ತ್ರಿಪುಂಡ್ರಧಾರಣವೆಂಬ ಉಪಮೇಯವು, ಲಿಂಗ ಧಾರಣವೆಂಬ ಉಪಮಾನವೂ ನಿಂದಾರೂಪವಾದ ಉಭಯನಿಷ್ಠ ಧರ್ಮವೂ ಈ ಮೂರೂ ಸ್ಪಷ್ಟವಾಗಿದ್ದರೂ ಸಾದೃಶ್ಯವಾಚಕಗಳಾದ ಇವ ಯಥಾದಿ ಪದಗಳಿಲ್ಲದುದರಿಂದ ಲಿಂಗಧಾರಣವು ಹೇಗೆ ಸಿದ್ಧಿಸುವುದು?

ಸಮಾಧಾನ :—"ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವ ಮೇವ ತೇ" ಎಂಬಲ್ಲಿ ಸಾದೃಶ್ಯವಾಚಕವಾದ ಇವಶಬ್ದವಿಲ್ಲದ ಮಾತ್ರದಿಂದ ಉಪಮಾಲಂಕಾರವೇ ಸಂಭವಿಸುವುದಿಲ್ಲವೆಂದು ಹೇಳಬಾರದು. ಏತ ಕ್ಕೆಂದರೆ ಉಪಮಾಲಂಕಾರವು ಪೂರ್ಣೋಪಮಾಲಂಕಾರವೆಂತಲೂ, ಲುಪ್ತೋಪಮಾಲಂಕಾರವೆಂತಲೂ ಎರಡು ಪ್ರಕಾರವು. ಇವುಗಳಲ್ಲಿ ಉಪಮಾನ, ಉಪಮೇಯ, ಧರ್ಮ, ವಾಚಕ ಈ ನಾಲ್ಕು ಸ್ಪಷ್ಟವಾಗಿದ್ದರೆ ಅದು ಪೂರ್ಣೋಪಮಾಲಂಕಾರವು. ಈ ನಾಲ್ಕರಲ್ಲಿ ಒಂದೆರಡು ಮೂರನ್ನು ಹೇಳದಿದ್ದರೆ ಲುಪ್ತೋಪಮಾಲಂಕಾರವು ಎಂದು ಅಲಂಕಾರಶಾಸ್ತ್ರದ ನಿಯಮವಿರುವುದರಿಂದ "ತ್ರಿಪುಂಡ್ರಂ......................ಶಿವಮೇವ ತೇ" ಎಂಬ ವಾಕ್ಯದಲ್ಲಾದರೋ ಪ್ರಸಿದ್ಧಪ್ರತಿಯೋಗಿ (ಉಪಮಾನ) ಯಾದ ಶಿವಲಿಂಗಧಾರಣವೂ ಉಪಮೇಯವಾಗಿರುವ ತ್ರಿಪುಂಡ್ರಧಾರಣವೂ ನಿಂದಾ ರೂಪ ಸಾಧಾರಣಧರ್ಮವೂ ಸ್ಪಷ್ಟವಾಗಿರುತ್ತವೆ. ಸಾದೃಶ್ಯವಾಚಕವಾದ ಇವಶಬ್ದವು ಲೋಪವಾಗಿರುವುದರಿಂದ ವಾಚಕ ಲುಪ್ತೋಪಮಾಲಂಕಾರ ವೆಂದು ಹೇಳುತ್ತಾರೆ. ಇದರಂತೆ ಲೋಕದಲ್ಲಿ ಅನೇಕ ಉದಾಹರಣೆಗಳು ಕಂಡುಬರುತ್ತವೆ. ಹೇಗೆಂದರೆ "ವಾಕ್ಪಟುತ್ವೇ ಬೃಹಸ್ಪತಿಃ" ಈತನು ಮಾತನಾಡುವುದರಲ್ಲಿ ಬೃಹಸ್ಪತಿಯಾಗಿರುತ್ತಾನೆ ಎಂಬ ಪ್ರಯೋಗದಲ್ಲಿ ಪ್ರಸಿದ್ಧೋಪಮಾನವಾದ ಬೃಹಸ್ಪತಿಶಬ್ದವೂ ಉಪಮೇಯವಾದ ಪುರು ಷನೂ ವಾಚಾಲತೆಯೆಂಬ ಉಭಯನಿಷ್ಠಧರ್ಮವೂ ಸ್ಪಷ್ಟವಾಗಿ ಹೇಳ ಲ್ಪಟ್ಟಿರುತ್ತದೆ. ಇಲ್ಲಿ ಸಾದೃಶ್ಯವಾಚಕವಾದ ಇವಶಬ್ದವು ಹೇಳಲ್ಪಟ್ಟಿಲ್ಲ

ವಾದರೂ, ಈತನು ಮಾತನಾಡುವುದರಲ್ಲಿ ಬೃಹಸ್ಪತಿಗೆ ಸಮಾನನಾಗಿರುತ್ತಾನೆಂಬುದೇ ಕವಿಯ ಆಶಯವಾಗಿರುತ್ತದೆ. ಇಲ್ಲಿ ಸಾದೃಶ್ಯವು ಬುದ್ಧಿಸ್ಥವಾಗಿ ತೋರುವುದರಿಂದ ವಾಚಕಲುಪ್ತೋಪಮಾಲಂಕಾರವನ್ನು ಆಲಂಕಾರಿಕರು ಒಪ್ಪಿರುತ್ತಾರೆ.

ಇನ್ನು ದೃಷ್ಟಾಂತಾಲಂಕಾರದಿಂದ ಲಿಂಗಧಾರಣವು ಸಿದ್ಧಮಾಡಲ್ಪಡುತ್ತದೆ.

" ಚೇದ್ಬಿಂಬಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿಃ "

ಯಾವ ವಾಕ್ಯದಲ್ಲಿ ಬಿಂಬಪ್ರತಿಬಿಂಬಭಾವವಿರುವುದೋ ಅಲ್ಲಿ ದೃಷ್ಟಾಂತಾಲಂಕಾರವು "ವಸ್ತುತಃ ಭಿನ್ನಯೋರಪಿ ಪರಸ್ಪರಸಾದೃಶ್ಯಾದಭಿನ್ನಯೋಃ ಪೃಥಗುಪಾದಾನಂ ಬಿಂಬಪ್ರತಿಬಿಂಬಭಾವಃ" ಎಂಬುವ ಲಕ್ಷಣವಾಕ್ಯದಿಂದ ಯಾವ ಸ್ಥಲದಲ್ಲಿ ಉಪಮಾನೋಪಮೇಯಗಳು ಒಂದೇ ವಾಕ್ಯದಲ್ಲಿಲ್ಲದೆ ಭಿನ್ನ ಭಿನ್ನವಾಕ್ಯಗಳಲ್ಲಿದ್ದು ಒಂದಕ್ಕೊಂದು ಸಾದೃಶ್ಯದಿಂದ ಅಭಿನ್ನಗಳಾಗಿ ತೋರುವುವೋ ಆ ಸ್ಥಳಗಳಲ್ಲಿ ಬಿಂಬಪ್ರತಿಬಿಂಬಭಾವವೆಂದು ಅಲಂಕಾರಿಕರ ಅಭಿಪ್ರಾಯವಾಗಿದೆ. "ತ್ವಮೇವ ಕೀರ್ತಿಮಾನ್ ರಾಜನ್ ವಿಧುರೇವ ಹಿ ಕಾಂತಿಮಾನ್" ಎಂಬಲ್ಲಿ ಎಲೈ ರಾಜನೇ ನೀನು ಕೀರ್ತಿಯುಳ್ಳವನಾಗಿರುವಿ. ಚಂದ್ರನೇ ಕಾಂತಿಯುಳ್ಳವನಾಗಿರುತ್ತಾನೆ, ಎಂದು ಒಬ್ಬ ರಾಜನನ್ನು ಕವಿಯು ವರ್ಣಿಸಿರುತ್ತಾನೆ. ಇಲ್ಲಿ ಚಂದ್ರನ ಕಾಂತಿಯಂತೆ ಮಹಾರಾಜನ ಕೀರ್ತಿಯು ಭೂಮ್ಯಂತರಿಕ್ಷಗಳನ್ನು ವ್ಯಾಪಿಸಿ, ಪ್ರಜಾನಂದಕಾರಿಯಾಗಿರುವುದೆಂದು ಕೀರ್ತಿಕಾಂತಿಗಳಿಗೆ ಪರಸ್ಪರ ಹೋಲಿಕೆಯು ತೋರುವುದರಿಂದ ದೃಷ್ಟಾಂತಾಲಂಕಾರವನ್ನು ಹೇಳುವರು. ಇದರಂತೆ " ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ" ಎಂಬುವಲ್ಲಿ ತ್ರಿಪುಂಡ್ರಧಾರಣನಿಂದೆಯೇ ಬಿಂಬವಾಕ್ಯವು. ಶಿವಲಿಂಗಧಾರಣನಿಂದೆಯೇ ಪ್ರತಿಬಿಂಬವಾಕ್ಯವು. ಈ ಎರಡು ವಾಕ್ಯಗಳು ಭಿನ್ನಭಿನ್ನವಾಕ್ಯಗಳಾಗಿರುವುದರಿಂದ ಶಿವಲಿಂಗಧಾರಣನಿಂದೆಯು ಹೇಗೆ ಪಾಪವನ್ನುಂಟುಮಾಡುವುದೋ, ಹಾಗೆ ತ್ರಿಪುಂಡ್ರದಾರಣ ನಿಂದೆಯು ಪಾಪವನುಂಟುಮಾಡುವುದು ಎಂಬುದಾಗಿ ತ್ರಿಪುಂಡ್ರ

ಧಾರಣ ಲಿಂಗಧಾರಣ ರೂಪಗಳಾದ ಉಪಮೇಯ ಉಪಮಾನಗಳಿಗೆ ಬಿಂಬಪ್ರತಿಬಿಂಬ ಭಾವದಿಂದ ಸಾದೃಶ್ಯವು ತೋರುತ್ತದೆ. ಹೀಗೆ ಬಿಂಬ ಪ್ರತಿಬಿಂಬ ಭಾವದಿಂದ ಚಂದ್ರನ ಕಾಂತಿಗೆ ಪ್ರಸಿದ್ಧ ಪ್ರತಿಯೋಗಿ (ಉಪಮಾನ) ತ್ವವು ಸಿದ್ಧವಾಗುವಂತೆ ಲಿಂಗಧಾರಣಕ್ಕೂ ಪ್ರಸಿದ್ಧ ಪ್ರತಿಯೋಗಿ (ಉಪಮಾನ) ತ್ವವು ಸ್ಥಿರವಾಗುವುದರಿಂದ ದೃಷ್ಟಾಂತಾಲಂಕಾರದಿಂದ ಲಿಂಗ ಧಾರಣವು ಸಿದ್ಧವಾಯಿತು.

**ಶಂಕಾ :—"ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ"** ಎಂಬ ವಾಕ್ಯದಿಂದ ಸಾಮಾನ್ಯವಾಗಿ ಲಿಂಗಧಾರಣವು ಸಿದ್ಧವಾದರೂ ವೀರಶೈವ ಸಿದ್ಧಾಂತಾನುಸಾರವಾಗಿ ಕಂಠ ಹೃದಯಾದಿ ಉತ್ತಮಾಂಗಗಳಲ್ಲಿ ಧರಿಸಲ್ಪಡುವ, ವಾಮಹಸ್ತದಲ್ಲಿಟ್ಟು ಪೂಜಿಸಲ್ಪಡುವ, ಇಷ್ಟಲಿಂಗವೆಂದು ಸ್ಪಷ್ಟವಾಗಲಿಲ್ಲ. ಏಕೆಂದರೆ ಆ ವಾಕ್ಯದಲ್ಲಿ ಸಾಮಾನ್ಯವಾಗಿ ಲಿಂಗಧಾರಣವು ತೋರುವುದರಿಂದ ಅಂತರ್ಲಿಂಗಧಾರಣವೆಂದಾಗಲಿ ಇಷ್ಟಲಿಂಗಧಾರಣವೆಂದಾಗಲಿ ಉಭಯವಿಧವಾಗಿ ಅರ್ಥವಾಗುತ್ತದೆಯಲ್ಲದೆ ನಿಯಮದಿಂದ ಇಷ್ಟಲಿಂಗಧಾರಣ ಪರವಾದುದೆಂದು ಹೇಳಲವಕಾಶವಿಲ್ಲ.

**ಸಮಾಧಾನ :—**ದೇಹದಲ್ಲಿ ಧರಿಸಲ್ಪಡುವ ಸ್ಥೂಲವಾದ ತ್ರಿಪುಂಡ್ರವು ಬಿಂಬ (ಉಪಮೇಯ)ವಾಕ್ಯವಾದರೆ ಮೇಲೆ ಸ್ಥೂಲದೇಹದಲ್ಲಿ ಧರಿಸಲ್ಪಡುವ ಇಷ್ಟಲಿಂಗವು ಪ್ರತಿಬಿಂಬ (ಉಪಮಾನ) ವಾಕ್ಯವಾಗಿರಬೇಕು. ಹಾಗಿಲ್ಲದೆ ಹೋದರೆ ಲಲಾಟಾದಿ ಸ್ಥೂಲಾಂಗಗಳಲ್ಲಿ ಧರಿಸಲ್ಪಡುವ ಭಸ್ಮರೇಖೆಗಳಿಗೂ ಮನಸ್ಸಿನಲ್ಲಿ ಸ್ಮರಿಸಲ್ಪಡುವ ಸೂಕ್ಷ್ಮಲಿಂಗಕ್ಕೂ ಹೋಲಿಕೆ ಬರದಿರುವುದರಿಂದ ದೃಷ್ಟಾಂತಾಲಂಕಾರವೇ ಇಲ್ಲದಂತಾಗುವುದು ಆದುದರಿಂದ **"ತ್ರಿಪುಂಡ್ರಂ............ನಿಂದಂತಿ ಶಿವಮೇವ ತೇ"** ಎಂಬ ಉಪನಿಷತ್ತು ಇಷ್ಟಲಿಂಗಧಾರಣಪರವಾದುದೆಂದೇ ನಿಶ್ಚಯಿಸಬೇಕು. ಮತ್ತು ಭಸ್ಮದ ಮೂರು ರೇಖೆಗಳಲ್ಲಿ ಮೊದಲನೆಯ ರೇಖೆಯು ಮಹೇಶ್ವರ ಸ್ವರೂಪವೆಂದೂ, ಎರಡನೆಯ ರೇಖೆಯು ರುದ್ರಸ್ವರೂಪವೆಂದೂ, ಮೂರನೆಯ ರೇಖೆಯು ಸದಾಶಿವ ಸ್ವರೂಪವೆಂದೂ ಕಾಲಾಗ್ನಿ ರುದ್ರೋಪನಿಷತ್ತಿನಲ್ಲಿ

ಭಸ್ಮದ ಮಹಿಮೆಯನ್ನು ವರ್ಣಿಸಿರುವುದನ್ನು ನೋಡಿದರೆ ಇಂತಹ ಶಿವ ಸ್ವರೂಪವಾದ ತ್ರಿಪುಂಡ್ರಧಾರಣೆಯು ಸಿದ್ಧಿಸುವಲ್ಲಿ ಇನ್ನು ಪ್ರತ್ಯಕ್ಷಸಿದ್ಧವಾದ ಇಷ್ಟಲಿಂಗಧಾರಣವು ಕಾವ್ಯಾರ್ಥಾಪತ್ತಿ ನ್ಯಾಯದಿಂದ ತಾನೇ ಸಿದ್ಧ ವಾಗುತ್ತದೆ.



## ತತ್ತ್ವಮಸ್ಯಾದಿ ಮಹಾವಾಕ್ಯಗಳು - ಲಿಂಗಧಾರಣೆ

ಇನ್ನು "ತತ್ತ್ವಮಸಿ" "ಅಹಂ ಬ್ರಹ್ಮಾಸ್ಮಿ" ಎಂಬ ಮಹಾವಾಕ್ಯಗಳಿಂದಲೂ ಇಷ್ಟಲಿಂಗಧಾರಣವು ಸಿದ್ಧಿಸಲ್ಪಡುವುದು. "ತತ್ ತ್ವಂ ಅಸಿ" 'ಆ ಬ್ರಹ್ಮವೇ ನೀನಾಗಿರುವಿ' (ಛಾಂದೋಗ್ಯ) ಎಂಬ ಮೂರು ಪದಗಳಿಂದ ಕೂಡಿರುವ ಈ ವಾಕ್ಯದಲ್ಲಿ ತತ್ ಎಂಬ ಪದವು ಮಾಯೋಪಹಿತ ಈಶ್ವರನನ್ನೂ, ತ್ವಂ ಎಂಬ ಪದವು ಅವಿದ್ಯೋಪಹಿತವಾದ ಜೀವನನ್ನೂ, ಅಸಿ ಎಂಬ ಕ್ರಿಯಾಪದವು ಜೀವೇಶ್ವರರ ಐಕ್ಯವನ್ನೂ ಬೋಧಿಸುತ್ತದೆ. ಇದರಂತೆ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯವು ಜೀವೇಶ್ವರರಿಗೆ ಏಕತ್ವವನ್ನು ಬೋಧಿಸುತ್ತದೆ. ಶುದ್ಧ ಸತ್ವಪ್ರಧಾನವಾದ ಮಾಯೆಯಲ್ಲಿ ಪ್ರತಿಫಲಿಸಿದ ಬ್ರಹ್ಮವೇ ಈಶ್ವರನು. ಮಲಿನ ಸತ್ವಪ್ರಧಾನವಾದ ಅವಿದ್ಯೆಯಲ್ಲಿ ಪ್ರತಿಫಲಿಸಿದ ಬ್ರಹ್ಮವೇ ಜೀವನು. ಇವೆರಡು ಚೇತನಗಳಲ್ಲಿ ಈಶ್ವರನು ಸರ್ವಜ್ಞನು, ಸರ್ವಕರ್ತನು, ಸಮಷ್ಟ್ಯಭಿಮಾನಿಯೂ ಆಗಿರುತ್ತಾನೆ. ಜೀವನು ಕಿಂಚಿಜ್ಞನು, ಅಲ್ಪಕರ್ತನು, ವ್ಯಷ್ಟ್ಯಭಿಮಾನಿಯೂ ಆಗಿರುತ್ತಾನೆ. ಯಾವನು ಸರ್ವಜ್ಞನೋ ಅವನು ಕಿಂಚಿಜ್ಞನಲ್ಲ. ಯಾವನು ಕಿಂಚಿಜ್ಞನೋ ಅವನು ಸರ್ವಜ್ಞನಲ್ಲ. ಹೀಗೆ ಜೀವೇಶ್ವರರು ಕತ್ತಲೆ ಬೆಳಕುಗಳಂತೆ ವಿರುದ್ಧಸ್ವಭಾವವುಳ್ಳವರಾದುದರಿಂದ ಈ ಜೀವೇಶ್ವರರಿಗೆ ವಾಚ್ಯಾರ್ಥದಿಂದ ಅಭೇದವು ಸಂಭವಿಸುವುದಿಲ್ಲ. ಆದುದರಿಂದ ಜೀವೇಶ್ವರರಲ್ಲಿರುವ ಆಯಾಯ ಸರ್ವಜ್ಞತ್ವ ಕಿಂಚಿಜ್ಞತ್ವಾದಿ ವಿಶೇಷಣಾಂಶಗಳನ್ನು ಬಿಟ್ಟರೆ ವಿಶೇಷ್ಯವಸ್ತುವೊಂದೇ ಉಳಿಯುವುದು. ಇದನ್ನು ಭಾಗತ್ಯಾಗಲಕ್ಷಣವೆಂದೂ ಜಹದಜಹಲ್ಲಕ್ಷಣವೆಂದೂ ಕರೆಯುತ್ತಾರೆ.

ಉದಾಹರಣೆ:—"ಸೋಽಯಂ ದೇವದತ್ತಃ" 'ಹಿಂದೆ ನೋಡಿದ ದೇವದತ್ತನೇ ಇವನು' ಎಂಬ ವ್ಯವಹಾರದಲ್ಲಿ ಈ ಕಾಲ, ಈ ದೇಶ, ಈ ವಯಸ್ಸುಗಳಿಂದೊಡಗೂಡಿದ ದೇವದತ್ತನಲ್ಲಿ ಅತೀತಗಳಾದ ಆ ದೇಶ, ಆ ಕಾಲ, ಆ ವಯಸ್ಸುಗಳು ಇಲ್ಲವಾದುದರಿಂದ ವಾಚ್ಯಾರ್ಥಕ್ಕೆ ಬಾಧೆಯುಂಟಾಗುತ್ತದೆ. ಆದುದರಿಂದ ತಚ್ಛಬ್ದವಾಚ್ಯನಾದ ದೇವದತ್ತನಲ್ಲಿ ವಿಶೇಷಣಗಳಾಗಿರುವ ಅತೀತಗಳಾದ ಆ ಕಾಲ, ಆ ದೇಶ, ಆ ವಯಸ್ಸು

ಗಳನ್ನೂ, ಈ ದೇಶ, ಈ ಕಾಲ, ಈ ವಯಸ್ಸುಗಳನ್ನೂ ತೆಗೆದುಹಾಕಿದರೆ ವಿಶೇಷ್ಯವಾಗಿರುವ ದೇವದತ್ತನೊರ್ವನೇ ಉಳಿಯುವನು. ಮತ್ತು ಜಡಾ ಜಡಾತ್ಮಕ ಪ್ರಪಂಚವು ಮಾಯೆಯಿಂದ ಕಲ್ಪಿತವಾದುದು. ಇಲ್ಲಿ ಮಾಯೆ ಯೆಂದರೆ "ಯಾ ಮಾ ಸಾ - ಮಾಯಾ" ಯಾವುದು 'ಒಂದು ಕಾಲ ದಲ್ಲಿಯೂ ಇಲ್ಲವೋ ಅದುವೆ ಮಾಯೆಯು' ಎಂಬ ವ್ಯುತ್ಪತ್ತಿಗನುಸಾರ ವಾಗಿ ಮಿಥ್ಯೆಯೆಂದು ಅರ್ಥವು. ತೋರಿಕೆಗೆ ಪದಾರ್ಥರೂಪವಾಗಿ ಕಂಡರೂ ವಸ್ತುತಃ ಅದು ವಾಸ್ತವವಾದುದಲ್ಲ. ಹಗ್ಗದಲ್ಲಿ ತೋರಿದ ಹಾವು ಆ ನಿಜವಾದ ಹಗ್ಗವನ್ನು ಮರೆಮಾಡುವಂತೆ ಬ್ರಹ್ಮದಲ್ಲಿ ತೋರಿದ ಮಾಯೆಯು ಬ್ರಹ್ಮವನ್ನು ಮರೆಮಾಡುವುದು. ಆಗ ಅಖಂಡವಾದ ಬ್ರಹ್ಮ ಚೈತನ್ಯದಲ್ಲಿ ಜೀವೇಶ್ವರರೆಂಬ ಉಭಯಚೈತನ್ಯಗಳು ತೋರುವವು. ಘಟವು ನಷ್ಟವಾದಮೇಲೆ ಆಕಾಶವೊಂದೇ ಉಳಿಯುವಂತೆ, ಮಾಯೆಯೂ ಅವಿದ್ಯೆ ಯೂ ನಷ್ಟವಾದಮೇಲೆ ಜೀವೇಶ್ವರರೆಂಬ ಕಲ್ಪನೆಯೂ ಹೋಗಿ ಬ್ರಹ್ಮ ವೊಂದೇ ಉಳಿವುದು. ಇದುವೇ ಅದ್ವೈತ ಸಿದ್ಧಾಂತದ ಪ್ರಕಾರ ಮೋಕ್ಷವು. ಈ ಅರ್ಥದಲ್ಲಿ "ಮಾಯಾಭಾಸೇನ ಜೀವೇಶೌ ಕರೋತಿ" ಮುಂತಾದ ಶ್ರುತಿಗಳು ಪ್ರಮಾಣಗಳಾಗಿವೆ.

ಇದರಂತೆ ವೀರಶೈವ ಮತದಲ್ಲಿಯೂ ತತ್ತ್ವಮಸ್ಯಾದಿ ಮಹಾವಾಕ್ಯ ಗಳು ಲಿಂಗಾಂಗಸಾಮರಸ್ಯರೂಪವಾದ ಏಕಾರ್ಥವನ್ನು ಲಕ್ಷಣಾವೃತ್ತಿ ಯಿಂದ ಬೋಧಿಸುತ್ತವೆ. ಅಂದರೆ ತತ್ ಎಂಬ ಪದವು ಲಿಂಗ (ಬ್ರಹ್ಮ) ವನ್ನೂ, ತ್ವಂ ಎಂಬ ಪದವು ಅಂಗ (ಜೀವ) ವನ್ನೂ, ಅಸಿ ಎಂಬ ಪದವು ಸಮರಸ (ಐಕ್ಯ) ವನ್ನೂ ತೋರಿಸುತ್ತವೆ. ಇಲ್ಲಿ ಸಮರಸವೆಂದರೆ ಭಿನ್ನ ವಾಗಿ ತೋರುವ ಲಿಂಗ, ಅಂಗಗಳೆಂಬ ಎರಡು ವಸ್ತುಗಳು ಒಂದೇ ಆಕಾರ ವನ್ನು ಪಡೆವುದೆಂಬ ಅರ್ಥವು. ಅಂದರೆ ನಿರಂತರಾಭ್ಯಾಸದಿಂದ ದೇಹಾದಿ ಕರಣಗಳು ಪೂರ್ವಪೂರ್ವಕಾರಣಗಳಲ್ಲಿಯೂ, ಆ ಕಾರಣವು ಪ್ರಕೃತಿಯ ಲ್ಲಿಯೂ, ಪ್ರಕೃತಿಯು ಶಕ್ತಿಯಲ್ಲಿಯೂ, ಆ ಶಕ್ತಿಯು ಶಿವನಲ್ಲಿಯೂ ವಿಲೀನವಾಗಿ "ಶಿವೋऽಹಂ" ಎಂಬ ಏಕಾಕಾರವೃತ್ತಿಯುಂಟಾಗಿ ಆನಂದಘನನಾಗುವನು. ಹೀಗೆ ತತ್ತ್ವಮಸ್ಯಾದಿ ಮಹಾವಾಕ್ಯಗಳನ್ನು ವಿವರಿಸಿರುವದರಿಂದ ವೀರಶೈವ ಸಿದ್ಧಾಂತವೂ ಅದ್ವೈತ ಸಿದ್ಧಾಂತವೂ

ಒಂದೇ ಎಂಬ ಬುದ್ಧಿಯು ಉತ್ಪನ್ನವಾಗಬಹುದು. ಎರಡು ಸಿದ್ಧಾಂತಗಳೂ ಒಂದಾಗಲಾರವು. ಅದ್ವೈತ ಸಿದ್ಧಾಂತದಲ್ಲಿ – ಮಾಯೆ ಮತ್ತು ಅವಿದ್ಯೆ ಅದರಿಂದ ತೋರುವ ಜಗತ್ತು ಮಿಥ್ಯೆಯಾದುವು. ತೋರಿಕೆಗೆ ಮಾತ್ರ ಘಟ, ಪಟಾದಿವಸ್ತುಗಳೆಂದು ಕಂಡರೂ ಅವೆಲ್ಲವೂ ಪುಸಿಯೆಂದು ಹೇಳಲ್ಪಟ್ಟಿರುತ್ತದೆ. ವೀರಶೈವ ಸಿದ್ಧಾಂತದಲ್ಲಿ – ಅಂತಹ ಮಾಯಾ ರೂಪಗಳಾದ ಯಾವ ಉಪಾಧಿಗಳೂ ಪುಸಿಯಲ್ಲ. ಹುಟ್ಟುವುದು ಮತ್ತು ಲಯಿಸುವುದು (ಉತ್ಪತ್ತಿ-ವಿನಾಶ) ಇವುಗಳಿಂದ ಮಾತ್ರ ಘಟಪಟಾದಿ ವಸ್ತುಗಳು ಅನಿತ್ಯಗಳಾಗಿಹವು. ಶ್ರೀಗುರುವು ಶಿಷ್ಯನ ಶಕ್ತಿಪಾತ (ಯೋಗ್ಯತೆ) ಪರೀಕ್ಷಿಸಿ ಕ್ರಿಯಾ, ಮನು, ವೇಧಾ ಎಂಬ ಮೂರು ವಿಧಗಳಾದ ದೀಕ್ಷಾಸಂಸ್ಕಾರಗಳಿಂದ ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಲ್ಲಿರುವ ಜನನಮರಣಗಳನ್ನುಂಟುಮಾಡುವ ಕಾರ್ಮಿಕ ಮಲ, ಮಾಯಿಯುಮಲ, ಅಣವಮಲ ಎಂಬ ಮೂರು ವಿಧವಾದ ಮಲಗಳನ್ನು ಕ್ರಮದಿಂದ ದಹಿಸಿ ಪರಿಶುದ್ಧವಾದ ಆ ಅಂಗಗಳಲ್ಲಿ ಇಷ್ಟ ಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಮೂರು ಲಿಂಗಗಳನ್ನು ಧರಿಸಿದ ನಂತರ ಆ ಗುರುವು ಇಂತಹ "ತತ್ತ್ವಮಸ್ಯಾದಿ" ಮಹಾವಾಕ್ಯಗಳನ್ನು ಬೋಧಿಸುತ್ತ "ಲೀನಂ ಗಚ್ಛತೀತಿ ಲಿಂಗಂ" ಎಂಬ ವ್ಯುತ್ಪತ್ತಿಗನುಗುಣವಾಗಿ ಚರಾಚರಾತ್ಮಕವಾದೀ ಜಗತ್ತು ಯಾವ ವಸ್ತುವಿನಲ್ಲಿ ತೋರಿ ಅದೇ ವಸ್ತುವಿನಲ್ಲಿ ಮರೆಯಾಗುವುದೋ ಅಂತಹ ಸರ್ವಾಧಾರವಾದ ವಸ್ತುವೇ ಲಿಂಗವೆನಿಸುವುದು.

"ಯಥಾಗ್ನೇಃ ಕ್ಷುದ್ರಾಃ ವಿಸ್ಫುಲಿಂಗಾ ವ್ಯುಚ್ಚರಂ-
ತ್ಯೇವಮೇವ ಅಸ್ಮಾದಾತ್ಮನಃ ಸರ್ವೇ ಪ್ರಾಣಾಃ
ಸರ್ವೇಲೋಕಾಃ ಸರ್ವೇ ದೇವಾಃ ಸರ್ವಾಣಿ
ಭೂತಾನಿ ವ್ಯುಚ್ಚರಂತಿ"

(ಬೃಹದಾರಣ್ಯಕ)

ಬೆಂಕಿಯಿಂದ ಕಿಡಿಗಳು ಏಳುವಂತೆ ಲಿಂಗರೂಪಿಯಾದ ಬ್ರಹ್ಮದಿಂದ ಸಕಲ ಪ್ರಾಣಿಗಳೂ, ಸಕಲ ಲೋಕಗಳೂ, ಸಕಲ ಭೂತಗಳೂ, ಸಕಲ

ದೇವತೆಗಳೂ ಉದಿಸಿ (ವ್ಯಕ್ತ) ದವು ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ.

"ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಮೋಷದಯಸ್ಸಂಭವಂತಿ
...............ತಥಾಕ್ಷರಾತ್ಸಂಭವತೀಹ ವಿಶ್ವಮ್"

(ಮುಂಡಕಶ್ರುತಿ)

ಜೇಡರಹುಳವು ತನ್ನ ಹೊಟ್ಟೆಯೊಳಗೆ ಅವ್ಯಕ್ತವಾಗಿರುವ ನೂಲನ್ನು ಹೊರಗೆ ಜಾಲಾಕಾರವಾಗಿ ಮಾಡಿ ಪುನಃ ತನ್ನೊಳಗೆ ಸೇರಿಸಿಕೊಳ್ಳುವಂತೆಯೂ, ಭೂಮಿಯು ತನ್ನೊಳಗಿರುವ ವೃಕ್ಷಾದಿಗಳನ್ನು ಹೊರಗೆ ತೋರಿಸಿ ಪುನಃ ತನ್ನಲ್ಲಿಯೇ ಸೇರಿಸಿಕೊಳ್ಳುವಂತೆಯೂ, ಚರಾಚರಾತ್ಮಕವಾದೀ ಪ್ರಪಂಚವು ಸೃಷ್ಟಿಪೂರ್ವ ಲಿಂಗ(ಬ್ರಹ್ಮ)ದಲ್ಲಿ ಸೂಕ್ಷ್ಮರೂಪ (ನಾಮರೂಪ ಕ್ರಿಯಾರಹಿತ) ದಿಂದಿದ್ದು ಸೃಷ್ಟಿಸಮಯದಲ್ಲಿ ಆ ಲಿಂಗದಲ್ಲಿಯೇ ತೋರಿ ಪ್ರಳಯ (ಉಪಸಂಹಾರ) ಕಾಲದಲ್ಲಿ ಆ ಲಿಂಗದಲ್ಲಿಯೇ ಸೇರುತ್ತದೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಆ ಬ್ರಹ್ಮಪದವಾಚ್ಯವಾದ ಶಿವಲಿಂಗದಿಂದ ಆವಿರ್ಭವಿಸಿದ ನ್ಯೂನಾಂಶವೆನಿಸಿದ ಜೀವಾತ್ಮನು "ಅಂ ಗಚ್ಛತೀತ್ಯಂಗಂ" ಎಂಬ ವ್ಯುತ್ಪತ್ತಿಬಲದಿಂದ ಆ ಲಿಂಗದಲ್ಲಿಯೇ ಸಮರಸವನ್ನು ಪಡೆಯುವುದರಿಂದ ಜೀವಾತ್ಮನನ್ನು ವೀರಶೈವ ಸಿದ್ಧಾಂತಿಗಳು ಅಂಗವೆಂದು ಕರೆಯುತ್ತಾರೆ. ಆದುದರಿಂದ ಮಹಾವಾಕ್ಯಗಳಲ್ಲಿ ಸೇರಿದ ತತ್ (ಬ್ರಹ್ಮ) ಎಂಬ ಪದವು ಲಿಂಗವನ್ನು ಬೋಧಿಸುವುದಾಗಿಯೂ, ತ್ವಂ (ಅಹಂ) ಎಂಬ ಪದವು ಜೀವನನ್ನು ಬೋಧಿಸುವುದಾಗಿಯೂ, ಅಸಿ ಎಂಬ ಪದವು ಸಾಮರಸ್ಯ (ಐಕ್ಯ) ವನ್ನು ಬೋಧಿಸುವುದಾಗಿಯೂ ಆಗಿರುವುದೆಂದು ನಿಶ್ಚಯಿಸತಕ್ಕುದು.

ಲೀನಂ ಗಚ್ಛತಿ ಯಸ್ಮಿನ್ ಸಾ ಮಾಯಾ ದುರ್ಘಟಕಾರಿಣೀ ।
ತಲ್ಲಿಂಗಮಿತಿ ಸನ್ಮಾತ್ರಂ ರೂಪ್ಯತೇ ಪಾರಮಾರ್ಥಿಕೈಃ ॥
ಏತಸ್ಮಾತ್ಕಾರಣಾದೇವ ಲಿಂಗರೂಪತ್ವಮಾಪತುಃ ।
ಅಮಿತಿ ಬ್ರಹ್ಮಸನ್ಮಾತ್ರಂ ಗಚ್ಛತೀತ್ಯಂಗಮುಚ್ಯತೇ ॥
ರೂಪ್ಯತೇಽಂಗಮಿತಿ ಪ್ರಾಜ್ಞೈರಂಗತತ್ವವಿಚಿಂತಕೈಃ ।
ತಸ್ಮಾದಂಗರೂಪೋಽಸೌ ಜೀವಸ್ಸಂಸಾರವೃತ್ತಿಭಾಕ್ ॥

ಇತ್ಯಾದಿ ಸ್ಕಾಂದ, ಕಾಮಿಕಾದಿ ಅನಂತಪುರಾಣಗಳು ಮತ್ತು ಅನುಭವ ಸೂತ್ರ ಇವುಗಳು ಇದೇ ಅಭಿಪ್ರಾಯವನ್ನು ದೃಢಪಡಿಸುತ್ತವೆ.

ಶಂಕಾ:—ಅಂಗಶಬ್ದಕ್ಕೆ ಶರೀರವೆಂಬ ಅರ್ಥವು ಸಿದ್ಧವಾಗುವಂತೆ ಶರೀರದೊಳಗಣ ಜೀವವೆಂಬ ಅರ್ಥವನ್ನು ಮಾಡಲವಕಾಶವಿಲ್ಲ. ಇಂತಹ ಸ್ಥೂಲವಾದ ಅಂಗ (ಶರೀರ)ಕ್ಕೂ ಸೂಕ್ಷ್ಮವಾದ ಲಿಂಗಕ್ಕೂ ಸಮರಸವನ್ನು ಕಲ್ಪಿಸುವುದು ಉಚಿತವಲ್ಲ. ಆದುದರಿಂದ ತತ್, ತ್ವಂ ಎಂಬ ಪದಗಳಿಗೆ ಅಭೇದವು ಹೇಗೆ ಸಂಭವಿಸುವುದು ?

ಸಮಾಧಾನ:—

"ಯ ಏಷ ಆತ್ಮನಿ ತಿಷ್ಠನ್ ಆತ್ಮಾನಮಂತರೋ ।
ಯಮಯತಿ, ಯಸ್ಯ ಚಾತ್ಮಾ ಶರೀರಂ ಯಮಾತ್ಮಾ
ನಂ ವೇದ"

(ಅಂತರ್ಯಾಮಿ ಬ್ರಾಹ್ಮಣ)

ಎಂಬ ಶ್ರುತಿಯಲ್ಲಿ ಜೀವಾತ್ಮನು ಪರಮಾತ್ಮನ ಶರೀರ (ಅಂಗ) ವೆಂದು ಹೇಳಿರುವುದರಿಂದ ಚೇತನಗಳಾದ ಅಂಗಲಿಂಗಗಳೆರಡಕ್ಕೂ ಸಾಮರಸ್ಯವು ಸಂಭವಿಸುವುದರಲ್ಲಿ ಯಾವ ಸಂಶಯವೂ ಇಲ್ಲ.

ಶ್ರೀ ರೇಣುಕ ಭಗವತ್ಪಾದರೂ ಸಹ

ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಮ್ ।
ಪುನಃ ಪುನಸ್ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಮ್ ॥
ತಸ್ಮಾಲ್ಲಿಂಗಮಿತಿ ಖ್ಯಾತಂ ಸತ್ತಾನಂದಚಿದಾತ್ಮಕಮ್ ।
ಬೃಹತ್ವಾದ್ಬೃಹ್ಮಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಮ್ ॥

(ಸಿದ್ಧಾಂತಶಿಖಾಮಣಿ ಪ. ೬)

ಎಂದು ಅನುಜ್ಞೆಯಿತ್ತಿರುವರಲ್ಲದೆ—

ವಿಗ್ರಹಂ ದೇವದೇವಸ್ಯ ಜಗದೇತಚ್ಚರಾಚರಮ್ ।
ಏತಮರ್ಥಂ ನ ಜಾನಂತಿ ಪಶವಃ ಪಾಶಗೌರವಾತ್ ॥

(ಸಿದ್ಧಾಂತಶಿಖಾಮಣಿ)

ಚರಾಚರಾತ್ಮಕವಾದೀ ಜಗತ್ತೆಲ್ಲವೂ ಪರಮಾತ್ಮನ ಶರೀರವಾಗಿರುವುದು. ಪರಮಾತ್ಮನೇ ಶರೀರಿಯಾಗಿರುವನು. ಮಲಪಾಶದಿಂದಾವೃತ

ರಾದೀ ಜನರು ಈ ಅರ್ಥವನ್ನೇ ತಿಳಿಯರು ಎಂಬ ಪ್ರಮಾಣವಾಕ್ಯವು ಸಹ ಆ ಶ್ರುತ್ಯರ್ಥವನ್ನೇ ಪ್ರತಿಪಾದಿಸುತ್ತದೆ. ಆದುದರಿಂದ ತತ್ ತ್ವಂ ಪದಗಳಿಗೆ ಏಕತ್ವವನ್ನು ಹೇಳಲು ಯಾವ ಸಂಶಯವೂ ಇಲ್ಲವು.

**ಶಂಕಾ :—** ವೀರಶೈವ ಸಿದ್ಧಾಂತವು ಬೇಧಾಬೇಧವನ್ನು ಹೇಳುವುದರಿಂದ ಅಂಗಶಬ್ದವಾಚ್ಯವಾದ ಜೀವಾತ್ಮನಲ್ಲಿರುವ ಕಿಂಚಿಜ್ಞತ್ವಾದಿ ಹೇಯ ಧರ್ಮಗಳು ಯಾವಾಗಲೂ ನಾಶವಾಗದಿರಬೇಕಾಗುವುದರಿಂದ "ಲಿಂಗವೇ ನೀನಾಗಿರುವಿ" ಎಂಬ ಅಸಿಪದಾರ್ಥವೆನಿಸಿದ ಸಾಮರಸ್ಯವು ಸಮಂಜಸವಾಗಲಾರದು. ಆದುದರಿಂದ "ಅಹಂ ಬ್ರಹ್ಮಾಸ್ಮಿ", "ತತ್ತ್ವಮಸಿ" ಮುಂತಾದ ಮಹಾವಾಕ್ಯಗಳು ಲಿಂಗಾಂಗ ಸಾಮರಸ್ಯವನ್ನು ಬೋಧಿಸಲಾರವು.

**ಸಮಾಧಾನ :—** ಲಿಂಗಕ್ಕಿಂತಲೂ ಅಂಗವೂ ಮತ್ತು ಅಂಗಧರ್ಮಗಳೂ ಬೇರೆಯಾದರೂ ಲಿಂಗೋಪಾಸನೆಯಿಂದ,

"ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ"

(ಕೈವಲ್ಯ)

ಶಿವಧ್ಯಾನವೆಂಬ ಮಥನದಿಂದ ಅಂಗಧರ್ಮಗಳೆಲ್ಲವೂ ನಷ್ಟವಾಗಿ ಜೀವನು ಪರಮಾತ್ಮನಲ್ಲಿ ಬೆರೆಯುವನು ಮತ್ತು ನಿತ್ಯಸುಖವನ್ನನುಭವಿಸುವನೆಂದು ಶ್ರುತಿಯು ಹೇಳಿರುವುದಲ್ಲದೆ—

ಮೇರುಮಂದರಮಾಸಾದ್ಯ ಕಾಕೋಽಪಿ ಕನಕಾಯತೇ ।
ತಥಾ ಭಕ್ತ್ಯಾ ಶಿವಂ ಪ್ರಾಪ್ಯ ಜೀವೋ ಭವತಿ ಶಂಕರಃ ॥
ಶುಕ್ತಿಲಬ್ಧಂ ಜಲಂ ಲೋಕೇ ಮೌಕ್ತಿಕಂ ಭವತಿ ಧ್ರುವಮ್ ।
ಭಕ್ತಿಸಂಯುಕ್ತಜೀವೋ ಹಿ ಶಿವೋ ಭವತಿ ನಾನ್ಯಥಾ ॥
ರಸವೇಧಾದ್ಯಥಾ ತಾಮ್ರಂ ಕಾಂಚನಂ ಭವತಿ ಧ್ರುವಮ್ ।
ಗುರೋಃ ಕಟಾಕ್ಷವೇಧೇನ ಜೀವೋ ಭವತಿ ಶಂಕರಃ ॥

(ವೀ. ಧ. ಶಿರೋಮಣಿ)

ಅಂದರೆ ನೀಚಪ್ರಾಣಿಯಾದ ಕಾಗೆಯು ಸಹ ಮೇರುಪರ್ವತವನ್ನು ಸೇರುವುದರಿಂದ ತನ್ನ ಹೇಯಧರ್ಮಗಳನ್ನು ಬಿಟ್ಟು ಸುವರ್ಣಾಕಾರವನ್ನು ಪಡೆಯುವಂತೆಯೂ, ಕಪ್ಪೆಚಿಪ್ಪಿನಲ್ಲಿ ಬಿದ್ದ ಮಳೆಯಹನಿಯು ಮುತ್ತಾಗು

ವಂತೆಯೂ, ತಾಮ್ರವು ರಸಸಂಪರ್ಕದಿಂದ,ತನ್ನ ತಾಮ್ರಸ್ವರೂಪವನ್ನು ಬಿಟ್ಟು ಸುವರ್ಣಮಯವಾಗುವಂತೆಯೂ ಜೀವಾತ್ಮನು ಗುರುವಿನ ಕಟಾಕ್ಷದಿಂದ ಶಿವನನ್ನು ಸೇರಿ ತನ್ನ ಹೇಯಧರ್ಮಗಳನ್ನು ಬಿಟ್ಟು ಶಿವಸ್ವರೂಪನಾಗು ತ್ತಾನೆಂದು ಲೋಕಾನುಭವದಿಂದಲೂ ನಮಗೆ ಗೊತ್ತಾಗುತ್ತದೆ. ಇದಲ್ಲದೆ—

"ಯಥಾ ನದ್ಯಸ್ಸ್ಯಂದಮಾನಾಸ್ಸಮುದ್ರೇಽಸ್ತಂ ಗಚ್ಛಂತಿ
ನಾಮರೂಪೇ ವಿಹಾಯ। ತಥಾ ವಿದ್ವಾನ್ ನಾಮರೂಪಾ
ದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್"

(ಮುಂಡಕ)

ಹರಿಯುತ್ತಿರುವ ಗಂಗಾ ಗೋದಾವರ್ಯಾದಿ ನದಿಗಳು ತಮ್ಮ ತಮ್ಮ ಸ್ವಭಾವಸಿದ್ಧಗಳಾದ ನಾಮರೂಪಕ್ರಿಯೆಗಳನ್ನು ಬಿಟ್ಟು ಸಮುದ್ರನಲ್ಲಿ ಸೇರು ವಂತೆ ಲಿಂಗನಿಷ್ಠನಾದ ಶಿವಯೋಗಿಯು ತನ್ನ ಕಿಂಚಿಜ್ಞತ್ವಾದಿ ಹೇಯ ಧರ್ಮಗಳನ್ನು ಬಿಟ್ಟು ಲಿಂಗರೂಪವಾದ ಪರಮಾತ್ಮನಲ್ಲಿ ಸೇರಿ ಅಖಂಡಾ ನಂದವನ್ನನುಭವಿಸುವನು.

"ಬ್ರಹ್ಮವಿತ್ ಬ್ರಹ್ಮೈವ ಭವತಿ"

ಯಾವನು ಬ್ರಹ್ಮವನ್ನು ತಿಳಿಯುವನೋ ಅವನು ಬ್ರಹ್ಮನೇ ಆಗುತ್ತಾನೆ. ಹೀಗೆ ಅನಂತಶ್ರುತಿಗಳು ಈ ಅರ್ಥದಲ್ಲಿ ಪ್ರವರ್ತಿಸುವುದರಿಂದ ಅಂಗಶಬ್ದ ವಾಚ್ಯನಾದ ಜೀವನು ಲಿಂಗಶಬ್ದವಾಚ್ಯನಾದ ಪರಶಿವನ ಉಪಾಸನೆಯಿಂದ ಜೀವನ ಕಿಂಚಿಜ್ಞತ್ವಾದಿ ಅಂಗಧರ್ಮ (ಮಲಾವರಣ) ಗಳೆಲ್ಲವೂ ನಷ್ಟವಾಗಿ ಶಿವಸ್ವರೂಪನಾಗುತ್ತಾನೆ. ಮತ್ತು ಲೋಕದಲ್ಲಿ ತುಚ್ಛಜೀವವೆನಿಸಿದ ಭ್ರಮರವು ತನಗಿಂತ ಭಿನ್ನಜಾತಿಯೆನಿಸಿದ ಕೀಟವೆಂಬ ಹುಳವನ್ನು ಹಿಡಿದು ತನ್ನ ಗೂಡಿನಲ್ಲಿರಿಸಿದಮೇಲೆ ಆ ಕೀಟವು ವಿಚ್ಛಿತ್ತಿಯಿಲ್ಲದೆ ಭ್ರಮರ ವನ್ನೇ ನೋಡುತ್ತಿರುವಲ್ಲಿ ಆ ಕೀಟವು ತನ್ನ ಕೀಟಾಕಾರವನ್ನೂ ಕೀಟದ ಸ್ವಭಾವವನ್ನು ಅಳಿದು ಭ್ರಮರಾಕಾರವನ್ನು ಹೊಂದುತ್ತದೆಂದು ಹೇಳು ವಲ್ಲಿ ಸತ್ಯಸಂಕಲ್ಪನೂ ಸತ್ಯಕಾಮನೂ ಸಮರ್ಥನೂ ಆದ ಪರಶಿವನು ಭಕ್ತಾಭೀಷ್ಟಪ್ರದನೆಂಬ ಅವ್ಯಾಜಮುದ್ರೆಯನ್ನು ಧರಿಸಿರುವುದರಿಂದ

ತನ್ನನ್ನು ಉಪಾಸನೆಮಾಡುವ ಭಕ್ತನ ಜೀವಭಾವವನ್ನು ನಿವಾರಿಸಿ ತನ್ನಂತೆ ಶಿವಭಾವವನ್ನುಂಟುಮಾಡುವುದರಲ್ಲಿ ಸಂಶಯವಿಲ್ಲವೆಂದು ನಿಶ್ಚಯಿಸತಕ್ಕದ್ದು.

ಶಂಕಾ :—ಆದರೆ ಲಿಂಗಸಂಬಂಧದಿಂದ ಅಂಗಭಾವವು ಅಡಗಿದರೂ ಆ ಲಿಂಗಸಂಬಂಧವಿರುವವರೆಗೆ ಮಾತ್ರ ಅಡಗಿರುವುದು. ಲಿಂಗಸಂಬಂಧವು ತಪ್ಪಿದಮೇಲೆ ಪುನಃ ಎಂದಿನಂತೆ ಕಿಂಚಿಜ್ಞತ್ವಾದಿ ಅಂಗನಿಷ್ಠ ಹೇಯಧರ್ಮಗಳು ತೋರಲೇಬೇಕು. ಹೇಗೆಂದರೆ ನೀರಲ್ಲಿ ಶೈತ್ಯಗುಣವೆಂಬುದು ಸ್ವಾಭಾವಿಕ ಗುಣವಾದುದರಿಂದ ಬೆಂಕಿಯ ಸಂಬಂಧವಿರುವವರೆಗೆ ಆ ನೀರಿನ ಶೈತ್ಯ ಗುಣವು ತೋರದಿದ್ದರೂ ಆ ಬೆಂಕಿಯು ಆರಿದಬಳಿಕ ಪುನಃ ಆ ನೀರಿನಲ್ಲಿ ಶೈತ್ಯಗುಣವೇ ತೋರುತ್ತದಲ್ಲವೆ ?

ಸಮಾಧಾನ :—ಹಾಲು ಮೊಸರಾದ ಬಳಿಕ ಆ ಮೊಸರು ಪುನಃ ಹಾಲಾಗಲಾರದು. ಅದರಂತೆ ಶಿವಲಿಂಗೋಪಾಸನೆಯಿಂದ ಜೀವಭಾವ ವಳಿದಮೇಲೆ ಪುನಃ ಅಲ್ಲಿ ಜೀವಭಾವವುದಿಸದು. ಆದುದರಿಂದ ಅಸಿ ಪದವಾಚ್ಯನಾದ ಶಿವನೇ ತಾನಾಗುವನೆಂಬುದರಲ್ಲಿ ಸಂಶಯವಿಲ್ಲ. ಆದುದರಿಂದ ಅಂಗವೆನಿಸಿದ ಜೀವನು ಲಿಂಗೋಪಾಸನೆಮಾಡುತ್ತಾ ಮೇಲೆ ಉದಾಹರಿಸಿದ ಭ್ರಮರಕೀಟನ್ಯಾಯಾನುಸಾರವಾಗಿ " ತತ್ತ್ವಮಸಿ " ಎಂಬ ಗುರೂಪದೇಶಶ್ರವಣದಿಂದ " ಅಹಂ ಬ್ರಹ್ಮಾಸ್ಮಿ " ನಾನು ಶಿವಸ್ವರೂಪನಾಗಿರುವೆನೆಂಬ ಮಹಾವಾಕ್ಯಾರ್ಥಾನುಭವಮಾಡುವನು. ಈ ರೀತಿಯಾಗಿ ಛಾಂದೋಗ್ಯಾಂತರ್ಗತ ಮಹಾವಾಕ್ಯಗಳೂ ವೀರಶೈವ ಸಿದ್ಧಾಂತಾನುಗುಣವಾಗಿ ಲಿಂಗಾಂಗಸಾಮರಸ್ಯವನ್ನು ಬೋಧಿಸುತ್ತವೆ. ಇದಲ್ಲದೆ—

ಕೋಽಹಮಿತ್ಯಬ್ರವೀದ್ದೇಹೀ ಗುರುಂ ಪರಮಕಾರಣಮ್ ।
ಗುರುಸ್ತತ್ತ್ವಮಸೀತ್ಯಾಹ ಸತ್ಯಾರ್ಥಂ ಕರುಣಾನಿಧಿಃ ॥
ಲಿಂಗಂ ಕಿಮಂಗಮಿತಿ ಕಿಂ ಸಂಬಂಧಃ ಕೋಽನಯೋರೇತಯೋಃ ।
ಲಿಂಗಾಂಗಸಂಬಂಧಪದಾನ್ಯೇವಮೇವ ವಿಚಿಂತಯೇತ್ ॥
ಲಿಂಗರೂಪೋ ಮಹಾದೇವಸ್ಸಚ್ಚಿದಾನಂದಲಕ್ಷಣಃ ।
ಅಂಗರೂಪೋ ಹಿ ಜೀವಾತ್ಮಾ ಭವಭಾವನಿಯಂತ್ರಿತಃ ॥

ತತ್ಪದೇನೋಚ್ಯತೇ ಸದ್ಭಿರ್ಲಿಂಗರೂಪಸ್ಸದಾಶಿವಃ ।
ತ್ವಂ ಪದೇನಾಂಗರೂಪೋ ಹಿ ಜೀವಸ್ಸಂಸಾರಲಕ್ಷಣಃ ॥
ತ್ವಮರ್ಥೋsಂಗಸ್ವರೂಪೋ ಯಸ್ಸೋsಯಂ ಶಬ್ದಾರ್ಥ ಏವ ಹಿ ।
ನ ತಚ್ಛಬ್ದಾರ್ಥತಾಸ್ಯೈವ ವಿರುದ್ಧತ್ವಾತ್ತಥೈವ ಹಿ ॥
ತ್ವಮಹಂ ಪದಲಕ್ಷ್ಯಾರ್ಥೋ ಜೀವತ್ವಾಚ್ಚಾಂಗರೂಪಕಃ ।
ಅಶಿವಶ್ಚೇತ್ಸದಾನಂದಸ್ತತೋ ನೈವ ವಿಲೋಕಯೇತ್ ॥

ನಾನಾರೆಂದು ಶಿಷ್ಯನು ಕೇಳುವಲ್ಲಿ ಕರುಣಾಶೀಲನಾದ ಗುರುವು "ತತ್ತ್ವಮಸಿ" ಆ ಲಿಂಗವೇ ನೀನಾಗಿರುತ್ತೀಯೆಂದು ಉತ್ತರವನ್ನು ಕೊಟ್ಟನು. ಬಳಿಕ ಲಿಂಗದ ಮತ್ತು ಅಂಗದ ಸ್ವರೂಪವೇನು? ಅವುಗಳಿಗಾಗುವ ಸಂಬಂಧವೆಂತಹುದು? ಎಂದು ಶಿಷ್ಯನು ಪುನಃ ಪ್ರಶ್ನೆಮಾಡಿದನು. ಅದಕ್ಕೆ ಶ್ರೀಗುರುವು ಎಲೈ ಶಿಷ್ಯೋತ್ತಮನೆ! ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹಗಳೆಂಬ ಪಂಚಕೃತ್ಯಗಳನ್ನು ಮಾಡುವವನೇ ಲಿಂಗ ಪದವಾಚ್ಯನು. ಆ ಲಿಂಗದಲ್ಲಿಯೇ ಸಕಲ ಜಗತ್ತು ತೋರುವುದು. ಮತ್ತು ಅಡಗುವುದು. ಇಂತಹ ಪರಶಿವಲಿಂಗವೇ ತತ್ಪದದ ಅರ್ಥವಾಗಿದೆ. "ಮಲಾವೃತಸ್ಸಂಸಾರೀ" ಎಂಬ ಶಿವಸೂತ್ರಾನುಸಾರವಾಗಿ ಸ್ವಸ್ವಕರ್ಮಾನುಸಾರವಾಗಿ ಜನನಮರಣರೂಪವಾದ ಸಂಸಾರಸಾಗರದಲ್ಲಿ ಮುಳುಗೇಳುತ್ತ ಅನೇಕ ಕಷ್ಟನಷ್ಟಗಳಿಗೀಡಾಗಿ ನರಳುತ್ತಿರುವ ಜೀವನೇ ಅಂಗವೆನಿಸುವನು. ಇಂತಹ ಅಂಗವೇ ತ್ವಂ ಪದದ ಅರ್ಥವು. ಈ ಅಂಗ ಲಿಂಗಗಳು ಒಂದಕ್ಕೊಂದು ವಿರುದ್ಧಸ್ವಭಾವವುಳ್ಳವುಗಳಾದುದರಿಂದ ಸಾಮರಸ್ಯವು ಘಟಿಸದು. ಆದುದರಿಂದ ಲಕ್ಷಣಾವೃತ್ತಿಯನ್ನಂಗೀಕರಿಸಿ ಉಭಯ ಚೈತನ್ಯಗಳಿಗೆ ಏಕತ್ವವನ್ನಂಗೀಕರಿಸುವುದು ಉತ್ತಮವೆಂದು ಉಸುರಿದನೆಂದು ಸ್ಕಾಂದ ಲೈಂಗ್ಯಾದಿ ಪುರಾಣಗಳು ಸ್ಪಷ್ಟಪಡಿಸುತ್ತವೆ. ಮತ್ತು ಈ ಅರ್ಥದಲ್ಲಿ—

ತತ್ತ್ವಂ ಪದಾರ್ಥೇ ಲಿಂಗಾಂಗರೂಪೇsನ್ಯೋನ್ಯವಿರುದ್ಧಕಮ್ ।
ಉಪಾಧಿಕೃತವಾಚ್ಯಾರ್ಥಂ ತ್ಯಕ್ತ್ವಾ ಸಚ್ಚಿತ್ಸುಖಾತ್ಮಕಮ್ ॥
ಲಕ್ಷ್ಯಾರ್ಥಮವಿರುದ್ಧಂ ಯಚ್ಛಿವಂ ತದಿತಿ ಯಾ ಮತಿಃ ।
ಸಾ ಸಬಂಧ ಇತಿ ಪ್ರೋಕ್ತಾ ವೇದಾಂತಾಗಮವೇದಿಭಿಃ ॥

ಯೋ ಭಾತಿ ಚಾಂಗರೂಪೋಽಹಂ ಜೀವಾತ್ಮಾ ಪರಮಾತ್ಮನಃ ।
ಸೋಽಯಮಾತ್ಮಾ ಮಹಾದೇವೋ ಲಿಂಗರೂಪೋ ಮಹೇಶ್ವರಃ ॥
ತತ್ಪದೇನೋಚ್ಯತೇ ಲಿಂಗಂ ತ್ವಂ ಪದೇನಾಂಗಮೀರಿತಮ್ ।
ಅನಯೋರೈಕ್ಯಭಾವೋಽಯಂ ಸಂಬಂಧೋಽಸಿ ಪದೇನ ಚ ॥
ಏವಂ ಲಿಂಗಾಂಗಸಂಬಂಧಭಾವನಾ ಯಸ್ಯ ವಿದ್ಯತೇ ।
ಸ ಯೋಗೀ ಸ ಚ ಸರ್ವಜ್ಞೋ ಜೀವನ್ಮುಕ್ತಸ್ಸ ಉಚ್ಯತೇ ॥

ಹೀಗೆ ಸಹಸ್ರಾವಧಿ ಪ್ರಮಾಣಗ್ರಂಥಗಳು ಬೋಧಿಸುವುದರಿಂದ ಅಂಗದಲ್ಲಿ ಶಿವಲಿಂಗಧಾರಣವು ಸ್ಪಷ್ಟವಾಗುತ್ತದೆ.

ಲಿಂಗಂ ತತ್ಪದಮಾಖ್ಯಾತಮಂಗಂ ತ್ವಂ ಪದಮೀರಿತಮ್ ।
ಸಂಯೋಗೋಽಸಿ ಪದಂ ಪ್ರೋಕ್ತಮನಯೋರಂಗಲಿಂಗಯೋಃ ॥

ಎಂದು ಅನುಭವಸೂತ್ರಕಾರರೂ ತತ್ತ್ವಮಸ್ಯಾದಿ ಮಹಾವಾಕ್ಯಾರ್ಥವನ್ನು ಲಿಂಗಾಂಗಸಾಮರಸ್ಯಾತ್ಮಕವಾಗಿ ನಿರೂಪಿಸಿರುತ್ತಾರೆ.

ಹೀಗೆ ಪರಶಿವನಿಂದ ಪ್ರಣೀತಗಳೂ ಅಪೌರುಷೇಯಗಳೂ ಆದ ಋಗಾದಿ ವೇದಮಂತ್ರಗಳ ಆಧಾರದಿಂದ ದೇಹದಲ್ಲಿ ಶಿವಲಿಂಗಧಾರಣವು ಸಮರ್ಥಿಸಲ್ಪಟ್ಟಿತು.



## ಸ್ಮೃತಿಗಳು - ಲಿಂಗಧಾರಣ

ಇನ್ನು ಇಂತಹ ವೇದಗಳನ್ನು ಹಿಂಬಾಲಿಸಿರುವ ಗೌತಮ ಮನ್ವಾದಿ ಸ್ಮೃತಿಗಳ ಆಧಾರದಿಂದ ಲಿಂಗಧಾರಣವು ಸಾಧಿಸಲ್ಪಡುತ್ತದೆ.

**"ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಮ್**
**ರುದ್ರಾಕ್ಷಂ ಚ ಶಿಖಾ ಭಸ್ಮ ಇತಿ ಬ್ರಾಹ್ಮಣಲಕ್ಷಣಮ್"**

(ಗೌತಮ ಸ್ಮೃತಿ)

**ಅರ್ಥ:—**ಬಾಯಲ್ಲಿ ಶಿವಮಂತ್ರವನ್ನುಚ್ಚರಿಸುವುದು, ಹೃದಯದಲ್ಲಿ ಶಿವಧ್ಯಾನಮಾಡುವುದು, ಶಿರಸ್ಸಿನಲ್ಲಿ ಇಷ್ಟಲಿಂಗ, ಕಂಠದಲ್ಲಿ ರುದ್ರಾಕ್ಷ, ಹಣೆಯಲ್ಲಿ ಭಸ್ಮತ್ರಿಪುಂಡ್ರ ಮತ್ತು ಮಸ್ತಕದಲ್ಲಿ ಶಿಖೆ ಇವುಗಳನ್ನು ಧರಿಸುವುದೇ ಬ್ರಾಹ್ಮಣನ ಲಕ್ಷಣವು.

ಈ ಸ್ಮೃತಿಯಲ್ಲಿ "ಹೃದಿ ಧ್ಯಾನಂ" ಎಂಬ ವಾಕ್ಯದಿಂದ ಅಂತರ್ಲಿಂಗ ಧಾರಣವೂ "ಮಸ್ತಕೇ ಲಿಂಗಧಾರಣಂ" ಎಂಬ ವಾಕ್ಯದಿಂದ ದೇಹದಲ್ಲಿ ಇಷ್ಟಲಿಂಗಧಾರಣವೂ ಹೀಗೆ ಎರಡುವಿಧ ಧಾರಣವು ಹೇಳಲ್ಪಟ್ಟಿತು. ಇಂತಹ ಎರಡುವಿಧ ಲಿಂಗಧಾರಣದ ವಿಷಯದಲ್ಲಿ ರೇಣುಕ ಭಗವತ್ಪಾದರು

ಲಿಂಗಧಾರಣಮಾಖ್ಯಾತಂ ದ್ವಿಧಾ ಸರ್ವಾರ್ಥಸಾಧಕೈಃ ।
ಬಾಹ್ಯಮಾಭ್ಯಂತರಂ ಚೈವ ಮುನಿಭಿರ್ಮೋಕ್ಷಕಾಂಕ್ಷಿಭಿಃ ॥
ಆಧಾರೇ ಹೃದಯೇ ವಾಪಿ ಭ್ರೂಮಧ್ಯೇ ವಾ ನಿರಂತರಮ್ ।
ಜ್ಯೋತಿರ್ಲಿಂಗಾನುಸಂಧಾನಂ ತದೇವಾಂತರಮುಚ್ಯತೇ ॥
ಅಂತರ್ಧಾರಯಿತುಂ ಲಿಂಗಮಶಕ್ತಶ್ಶಕ್ತ ಏವ ವಾ ।
ಬಾಹ್ಯಂ ಚ ಧಾರಯೇಲ್ಲಿಂಗಂ ತದ್ರೂಪಮಿತಿನಿಶ್ಚಯಾತ್ ॥

**ಅರ್ಥ:—**ಲಿಂಗಧಾರಣವು ಅಂತರ್ಲಿಂಗಧಾರಣವೆಂತಲೂ, ಬಹಿರ್ಲಿಂಗಧಾರಣವೆಂತಲೂ ಎರಡು ಪ್ರಕಾರವು. ಈ ಎರಡು ವಿಧ ಲಿಂಗ ಧಾರಣವು ಮೋಕ್ಷಕಾಂಕ್ಷಿಗಳಿಗೆ ಅವಶ್ಯಕವು. ಆಧಾರಸ್ಥಾನದಲ್ಲಾಗಲಿ, ಹೃದಯಸ್ಥಾನದಲ್ಲಾಗಲಿ, ಹುಬ್ಬಿನ ನಡುಭಾಗದಲ್ಲಾಗಲಿ ತೇಜೋಮಯವಾದ ಲಿಂಗಮೂರ್ತಿಯನ್ನು ಅನವರತವೂ ಧ್ಯಾನಿಸುತ್ತಿರುವುದೇ ಅಂತರ್ಲಿಂಗಧಾರಣವೆನಿಸುವುದು. ದೀಕ್ಷಾಸಂಸ್ಕಾರದಿಂದ ಪರಿಶುದ್ಧವಾದ

ದೇಹದಲ್ಲಿರುವ ಶಿರಸ್ಸು, ಕಂಠ, ಕಕ್ಷೆ, ಹೃದಯಾದಿ ಸ್ಥಾನಗಳೊಳು ಯಾವುದಾದರೊಂದು ಸ್ಥಾನದಲ್ಲಿ ಇಷ್ಟಲಿಂಗವನ್ನು ಧರಿಸುವುದೇ ಬಾಹ್ಯಲಿಂಗ ಧಾರಣವೆನಿಸುವುದು. ಈ ಎರಡು ಲಿಂಗಗಳನ್ನು ಶಾಸ್ತ್ರನಿಷ್ಣಾತರಾದ ಮಹಾ ಯೋಗಿಗಳು ಏಕಕಾಲದಲ್ಲಿ ಧರಿಸುವ ಶಕ್ತಿಯನ್ನು ಪಡೆದಿರುತ್ತಾರೆ. ಇಂತಹ ಶಕ್ತಿಯನ್ನು ಪಡೆದಿರಲಿ ಅಥವಾ ಪಡೆಯದಿರಲಿ ಬಾಹ್ಯವೆನಿಸಿದ ಇಷ್ಟಲಿಂಗವನ್ನುಮಾತ್ರ ಜ್ಯೋತಿರ್ಲಿಂಗಸ್ವರೂಪವೇ ಇದೆಂಬ ದೃಢಭಾವನೆಯಿಂದ ಧರಿಸಬೇಕೆಂದು ಅನುಜ್ಞೆಯಿತ್ತಿರುವರು. ಮತ್ತು

"ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾತ್"

(ಶ್ವೇತಾಶ್ವತರ)

ಎಂಬ ಶ್ರುತಿಯು ಸಹ ಅಂತಹ ಲಿಂಗಗಳನ್ನುಧರಿಸಬೇಕೆಂದು ಬೋಧಿಸುತ್ತದೆ.

ಶಂಕಾ:—ಆದರೆ ಮುಖದಲ್ಲಿ ಮಂತ್ರವನ್ನು ಹೃದಯದಲ್ಲಿ ಧ್ಯಾನವನ್ನು ಮಸ್ತಕದಲ್ಲಿ ಶಿವಲಿಂಗವನ್ನು ಶಿರಸ್ಸಿನಲ್ಲಿ ಶಿಖೆಯನ್ನು ಹಣೆಯಲ್ಲಿ ಭಸ್ಮವನ್ನು ಕಂಠದಲ್ಲಿ ರುದ್ರಾಕ್ಷವನ್ನು ಧರಿಸಿದವನೇ ಬ್ರಾಹ್ಮಣನೆಂದು ಗೌತಮಸ್ಮೃತಿಯು ಆರು ವಿಧವಾದ ಬ್ರಾಹ್ಮಣಧರ್ಮವನ್ನು ಹೇಳಿರುತ್ತದೆ. ಇಂತಹ ಆರು ಧರ್ಮಗಳು ಲಿಂಗಧಾರಿಗಳಲ್ಲಿ ಮಾತ್ರ ಕಂಡುಬರುತ್ತವೆಯಲ್ಲದೆ ಇನ್ನಾರಲ್ಲಿಯೂ ಕಂಡುಬರುವುದಿಲ್ಲ. ಹೇಗೆಂದರೆ – ಸ್ಮಾರ್ತಸಂಪ್ರದಾಯದ ಬ್ರಾಹ್ಮಣರಲ್ಲಿ ಮುಖದಲ್ಲಿ ಮಂತ್ರವೂ, ಹೃದಯದಲ್ಲಿ ಧ್ಯಾನವೂ; ಹಣೆಯಲ್ಲಿ ಭಸ್ಮವೂ, ಕಂಠದಲ್ಲಿ ರುದ್ರಾಕ್ಷವೂ, ಶಿರದೊಳು ಶಿಖೆಯೂ ಹೀಗೆ ಐದು ಧರ್ಮಗಳು ಮಾತ್ರ ಕಂಡುಬರುತ್ತವಲ್ಲದೆ ದೇಹದಲ್ಲಿ ಲಿಂಗಧಾರಣವು ಕಂಡುಬರುವುದಿಲ್ಲ. ಇದರಂತೆ ವೈಷ್ಣವ ಸಂಪ್ರದಾಯದ ಬ್ರಾಹ್ಮಣರಲ್ಲಿ ಬಾಯಲ್ಲಿ ಮಂತ್ರ, ಹೃದಯದೊಳು ಧ್ಯಾನ, ಶಿರದೊಳು ಶಿಖೆ ಈ ಮೂರು ಧರ್ಮಗಳು ಮಾತ್ರ ಕಂಡುಬರುವುವಲ್ಲದೆ ಭಸ್ಮ, ರುದ್ರಾಕ್ಷ ಲಿಂಗಗಳು ಕಂಡುಬರುವುದಿಲ್ಲ. ಆದುದರಿಂದ ಬ್ರಾಹ್ಮಣ ಸಾಮಾನ್ಯ ಲಕ್ಷಣವನ್ನು ವಿಧಿಸಿರುವ "ಮುಖೇ............ಇತಿ ಬ್ರಾಹ್ಮಣಲಕ್ಷಣಮ್" ಎಂಬ ಗೌತಮವಾಕ್ಯವು ಸರ್ವತ್ರ ಅನುಗತವಾಗುವುದಿಲ್ಲ.

ಸಮಾಧಾನ :—

"ಮುಖೇ ಮಂತ್ರಂ........ಇತಿ ಬ್ರಾಹ್ಮಣಲಕ್ಷಣಮ್"

ಎಂಬೀ ಗೌತಮವಾಕ್ಯವು ಲಿಂಗಧಾರಿಗಳನ್ನು ಉದ್ದೇಶಮಾಡಿ ಹೊರಟಿರುವ ವಿಶೇಷವಾಕ್ಯವಲ್ಲದೆ ಶೈವ, ವೈಷ್ಣವ, ಸ್ಮಾರ್ತಾದಿ ಎಲ್ಲ ಬ್ರಾಹ್ಮಣರ ಲಕ್ಷಣವನ್ನು ಹೇಳುವ ಸಾಮಾನ್ಯವಾಕ್ಯವಲ್ಲ. ಮತ್ತು ಈ ಸ್ಮೃತಿಯಲ್ಲಿ ಹೇಳಿದ ಆರು ಧರ್ಮಗಳೂ ದೀಕ್ಷಿತರಾದ ವೀರಶೈವರಲ್ಲಿ ಸಂಪೂರ್ಣವಾಗಿ ಕಂಡುಬರುತ್ತವೆ.

**ಶಂಕಾ :**—ಹಾಗಾದರೆ ಸಮಸ್ತವೈದಿಕಜನ ಗ್ರಾಹ್ಯವೂ, ಬ್ರಾಹ್ಮಣ ಸಾಮಾನ್ಯಬೋಧಕವೂ ಆದೀಗೌತಮಸ್ಮೃತಿಯು ವೀರಶೈವರನ್ನು ಮಾತ್ರ ಬೋಧಿಸುವುದೆಂದು ಅರ್ಥಸಂಕೋಚವನ್ನು ಕಲ್ಪಿಸುವುದುಚಿತವೆ?

**ಸಮಾಧಾನ :**—ಸ್ಮೃತಿಗಳಲ್ಲಿ ಒಂದಕ್ಕೊಂದು ವಿರೋಧವು ಕಂಡು ಬರುವ ಪಕ್ಷದಲ್ಲಿ ಪೂರ್ವಾಚಾರ್ಯರು ಅಂತಹ ಸ್ಮೃತ್ಯರ್ಥಗಳಿಗೆ ಅರ್ಥ ಸಂಕೋಚವನ್ನುಮಾಡಿ ಸಮನ್ವಯಗೊಳಿಸಿರುತ್ತಾರೆ. ಹೇಗಂದರೆ—

**"ಮೃತಾಹಂ ಸಮತಿಕ್ರಮ್ಯ ಚಾಂಡಾಲಾಃ ಕೋಟಿಜನ್ಮಸು"**

ಯಾವ ದಿವಸ ಮರಣವನ್ನು ಹೊಂದಿರುವನೋ ಆ ದಿವಸ ಶ್ರಾದ್ಧಕರ್ಮವನ್ನು ಆಚರಿಸತಕ್ಕುದು. ಹಾಗೆ ಆಚರಿಸದವನು ಹೀನಜನ್ಮವನ್ನು ಧರಿಸುವನು ಎಂದು ಧರ್ಮಶಾಸ್ತ್ರಕಾರರು ಶ್ರಾದ್ಧಕರ್ಮಾಚರಣೆಯ ನಿಯಮವನ್ನು ತೋರಿಸಿರುತ್ತಾರೆ. ಈ ನಿಯಮವನ್ನು ಸ್ಮಾರ್ತಬ್ರಾಹ್ಮಣರು ಪರಿಪಾಲಿಸುತ್ತಿದ್ದರೂ ಏಕಾದಶವ್ರತ ಪ್ರಧಾನರಾದ **ಆನಂದತೀರ್ಥೀಯರು** ಪರಿಪಾಲಿಸುವುದಿಲ್ಲ. ಅಂದರೆ ಏಕಾದಶಿ ದಿವಸ ಶ್ರಾದ್ಧಕರ್ಮವನ್ನು ಮಾಡುವ ಪ್ರಸಕ್ತಿಯೊದಗಿದರೆ ಆ ದಿವಸ ಆ ಶ್ರಾದ್ಧಕರ್ಮವನ್ನು ನಿಲ್ಲಿಸಿ ತಮ್ಮ ಪ್ರಧಾನವಾದ ಏಕಾದಶಿ ವ್ರತವನ್ನು ಆಚರಿಸುತ್ತಾರೆ. ಆಗ ಅವರಿಗೆ (ಮಾಧ್ವರಿಗೆ) ಶ್ರಾದ್ಧಾತಿಕ್ರಮಣದಿಂದುಂಟಾಗುವ ಮಹಾದೋಷವನ್ನು ಹೇಳದೆ ಇನ್ನುಳಿದ ಬ್ರಾಹ್ಮಣರಿಗೆ ಮಾತ್ರ ಶ್ರಾದ್ಧಾತಿಕ್ರಮಣದೋಷವನ್ನು ಹೇಳುವುದುಚಿತವೆಂದು ಅರ್ಥಸಂಕೋಚವನ್ನು ಕಲ್ಪಿಸಿರುತ್ತಾರೆ. ಮತ್ತು—

ರಾತ್ರಿಶ್ಶಿವಾ ಕಾಚನ ಸನ್ನಿಧತ್ತೇ
ವಿಲೋಚನೇ ಜಾಗ್ರತಮಪ್ರಮತ್ತೇ ॥
ಸಮಾನಧರ್ಮಾ ಯುವಯೋಸ್ಸಕಾಶೇ
ಸಖಾ ಭವಿಷ್ಯತ್ಯಚಿರೇಣ ಕಶ್ಚಿತ್ ॥

**ಅರ್ಥ:**—ಅಪರಿಮಿತ ಫಲವನ್ನುಂಟುಮಾಡುವ ಒಂದಾನೊಂದು ಮಂಗಳಕರವಾದ ರಾತ್ರಿಯು ವರ್ಷಕ್ಕೊಂದು ದಿವಸ ಲಭಿಸುವುದು. ಆ ದಿವಸವನ್ನು ಶಿವರಾತ್ರಿಯೆಂದು ಕರೆಯುತ್ತಾರೆ. ಎಲೈ ನೇತ್ರಗಳಿರಾ! ಇಂತಹ ಶುಭ ರಾತ್ರಿಯೊದಗಿದಾಗ ನೀವುಗಳು ರೆಪ್ಪೆಗಳನ್ನು ಸಹ ಬಡಿಯದೆ ಬಹಳ ಜಾಗರೂಕರಾಗಿದ್ದು ಸ್ವಲ್ಪವೂ ನಿದ್ರೆಮಾಡದಂತೆ ಆ ದಿವ್ಯ ಮಂಗಳ ವಿಗ್ರಹಧಾರಿಯಾದ ಲಿಂಗಮೂರ್ತಿಯನ್ನು ಧ್ಯಾನಿಸುತ್ತಿರಬೇಕು. ಹೀಗೆ ಧ್ಯಾನಿಸುವುದರಿಂದ ನಿಮ್ಮೀರ್ವರ ಮಧ್ಯದಲ್ಲಿ ಶಿವನು ಪ್ರತ್ಯಕ್ಷನಾಗುವನು ಎಂದು **ಜಾಗರಣ ವಿಧಾಯಕ**ವಾದ ವಾಕ್ಯವಿರುತ್ತದೆ. ಈ ವಾಕ್ಯವು ಲೋಕದಲ್ಲಿರುವ ಎಲ್ಲಾ ನೇತ್ರಗಳನ್ನುದ್ದೇಶಿಸಿ ಹೇಳಲ್ಪಟ್ಟಿರುವುದಲ್ಲದೆ ಕೆಲವು ನೇತ್ರಗಳನ್ನುದ್ದೇಶಿಸಿ ಹೇಳಲ್ಪಟ್ಟಿಲ್ಲವು. ಹಾಗಾದರೂ ಅಂತಹ ಪುಣ್ಯ ದಿವಸವೆನಿಸಿದ **ಶಿವರಾತ್ರಿಯ ವ್ರತ**ವನ್ನು ಶೈವಸಂಪ್ರದಾಯದವರು ಮಾತ್ರ ಆಚರಿಸುತ್ತಾರಲ್ಲದೆ ರಾಮಾನುಜ ಸಂಪ್ರದಾಯದವರು ಆಚರಿಸುವುದಿಲ್ಲ. ಆದುದರಿಂದ "ರಾತ್ರಿಶ್ಶಿವಾ...........ಕಶ್ಚಿತ್" ಎಂಬ ವಾಕ್ಯವು ಸಾಮಾನ್ಯವಾಗಿ ಸಕಲ ಜನ ನೇತ್ರಗಳನ್ನುದ್ದೇಶಿಸಿ ಹೇಳಲ್ಪಟ್ಟಿದ್ದರೂ ಶೈವ ಸಂಪ್ರದಾಯದ ಜನರ ನೇತ್ರಗಳಿಗೆ ಮಾತ್ರ ಅನ್ವಯಿಸುವುದೆಂದು ಅರ್ಥ ಸಂಕೋಚಮಾಡಲ್ಪಡಲೇಬೇಕು. ಇದರಂತೆ ಗೌತಮಸ್ಮೃತಿಯಲ್ಲಿ ಹೇಳಲ್ಪಟ್ಟ ಮಂತ್ರ, ಧ್ಯಾನ, ಲಿಂಗಧಾರಣ, ಶಿಖಾ, ಭಸ್ಮ, ರುದ್ರಾಕ್ಷಗಳೇ ವೀರಶೈವನ ಮುಖ್ಯ ಚಿಹ್ನವೆಂಬ ವಿಶೇಷಾರ್ಥವನ್ನು ಹೇಳುವುದಕ್ಕಾಗಿಯೇ ಆ ಸ್ಮೃತಿಯು ಹೊರಬಿದ್ದಿರುತ್ತದೆಂದು ಅರ್ಥಸಂಕೋಚವನ್ನು ಮಾಡಲೇ ಬೇಕು. ಹಾಗಿಲ್ಲದಿದ್ದರೆ ಆ ವಾಕ್ಯವೇ ವ್ಯರ್ಥವಾಗುತ್ತದೆ. ಒಂದು ವಾಕ್ಯವನ್ನೇ ವ್ಯರ್ಥಗೊಳಿಸುವುದಕ್ಕಿಂತ ಅರ್ಥಸಂಕೋಚವನ್ನು ಕಲ್ಪಿಸಿ ಆ ವಾಕ್ಯವನ್ನು ಸಾರ್ಥಕಗೊಳಿಸುವುದುತ್ತಮವೆಂದು ಪೂರ್ವಾಚಾರ್ಯರು ಅನುಮತಿ ಇತ್ತಿರುವರು.

**ಆಕ್ಷೇಪ:**—ಆದರೆ ಈ ಗೌತಮಸ್ಮೃತಿಯಲ್ಲಿ "ಇತಿ ಬ್ರಾಹ್ಮಣ ಲಕ್ಷಣಮ್" ಎಂದು ಬ್ರಾಹ್ಮಣ ಎಂಬ ಸಾಮಾನ್ಯಪದವಿರುವುದಲ್ಲದೆ ವೀರ ಶೈವನೊಬ್ಬನಲ್ಲಿಯೇ ಮಾತ್ರ ಅನ್ವಯಿಸುವ ವಿಶೇಷಪದವಾವುದೂ ಕಂಡು ಬರುವುದಿಲ್ಲ. ಆದುದರಿಂದ ಬಲಾತ್ಕಾರದಿಂದ ಅರ್ಥಸಂಕೋಚಮಾಡಿ

ಆ ಸ್ಮೃತಿಯು ವೀರಶೈವ ದ್ವಿಜನ ಲಕ್ಷಣವನ್ನೇ ಬೋಧಿಸುತ್ತದೆಂದು ಹೇಗೆ ಹೇಳುವುದು ?

**ಸಮಾಧಾನ:**—ಹೀಗೆ ಆಪಾತವಾಗಿ ಶಂಕೆಗೆ ಅವಕಾಶವಿದ್ದರೂ ವಿಚಾರದೃಷ್ಟಿಯಿಂದ ಅಂತಹ ಶಂಕೆಗೆ ಅವಕಾಶವಿಲ್ಲ. ಹೇಗೆಂದರೆ ಈ ಸ್ಮೃತಿಯಲ್ಲಿ ವೈಷ್ಣವ, ಶೈವ, ವೀರಶೈವ ಬೋಧಕವಾದ ಪದವಿಲ್ಲದೆ ಸಾಮಾನ್ಯವಾಗಿ ಬ್ರಾಹ್ಮಣಪದವು ಮಾತ್ರ ಇದ್ದರೂ ಆ ಸ್ಮೃತಿಯ ಮಧ್ಯದಲ್ಲಿ "ಮಸ್ತಕೇ ಲಿಂಗಧಾರಣಮ್" ಎಂಬುದೊಂದು ವಿಶೇಷವಾಕ್ಯವಿರುವುದರಿಂದ "ಇತಿ ಬ್ರಾಹ್ಮಣ ಲಕ್ಷಣಮ್" ಎಂಬ ಕೊನೆಯಲ್ಲಿರುವ ವಾಕ್ಯಕ್ಕೆ ವೀರಶೈವನೆಂದೇ ಅರ್ಥಮಾಡಬೇಕಲ್ಲದೆ ವೈಷ್ಣವ, ಶೈವ ದ್ವಿಜನೆಂದು ಅರ್ಥಮಾಡಲು ಅವಕಾಶವಿಲ್ಲದುದರಿಂದ ಅರ್ಥಸಂಕೋಚವನ್ನೂ ಸಹ ಮಾಡದೆ ನಿರಾಯಾಸವಾಗಿ ಆ ಗೌತಮವಾಕ್ಯವು ಲಿಂಗಿದ್ವಿಜನ ಲಕ್ಷಣವನ್ನೇ ಹೇಳುತ್ತದೆಂದು ನಿಶ್ಚಯಿಸತಕ್ಕುದು.

**ಶಂಕಾ:**—ಆಗಲಿ, ಈ ಗೌತಮ ಸ್ಮೃತಿಯು ಲಿಂಗಧಾರಿ ದ್ವಿಜನ ಲಕ್ಷಣವನ್ನೇ ಹೇಳುತ್ತದೆಂದು ಅಂಗೀಕರಿಸುವೆವು. ಆದರೆ ಈ ಮಂತ್ರದಲ್ಲಿ ಬಂದಿರುವ **ಮಂತ್ರ, ಧ್ಯಾನ, ಲಿಂಗಧಾರಣ, ಶಿಖೆ, ಭಸ್ಮ, ರುದ್ರಾಕ್ಷ** ಈ ಆರು ಧರ್ಮಗಳು ಲಿಂಗಧಾರಿ ದ್ವಿಜನಲ್ಲಿ ಕಂಡುಬರುವಂತೆ ಲಿಂಗಧಾರಿ ಕ್ಷತ್ರಿಯಾದಿಗಳಲ್ಲಿಯೂ ಕಂಡುಬರುತ್ತವೆ. ಏಕೆಂದರೆ—

ಶಿವಾಜ್ಞಾಪಾಲನಾರ್ಥಾಯ ಶಿವಭಕ್ತಶ್ಶಿವವ್ರತೀ ।
ಲಿಂಗರುದ್ರಾಕ್ಷಭಸ್ಮಾನಿ ಶಿವಚಿಹ್ನಾನಿ ಧಾರಯೇತ್ ॥
ರಾಜಾಜ್ಞೋಲ್ಲಂಘನಾಲ್ಲೋಕೇ ಯಥಾ ದಂಡೋ ವಿಧೀಯತೇ ।
ಶಿವಾಜ್ಞೋಲ್ಲಂಘನಾದ್ದಂಡೋ ರೌರವಂ ನರಕಂ ವ್ರಜೇತ್ ॥

**ಅರ್ಥ:**—ಶಿವಾಜ್ಞೆಯನ್ನು ಪಾಲಿಸುವದಕ್ಕಾಗಿ ಶಿವವ್ರತಧಾರಿಗಳಾದ ಶಿವಭಕ್ತರು ಶಿವಲಿಂಗ ರುದ್ರಾಕ್ಷ ಭಸ್ಮ ಮುಂತಾದ ಚಿಹ್ನೆಗಳನ್ನು ಧರಿಸತಕ್ಕುದು. ರಾಜಾಜ್ಞೆಯನ್ನು ಮೀರಿದವನು ಶಿಕ್ಷೆಯನ್ನನುಭವಿಸುವಂತೆ ಶಿವಾಜ್ಞೆಯನ್ನು ಮೀರಿದವನು ನರಕರೂಪವಾದ ಶಿಕ್ಷೆಯನ್ನನು

ಭವಿಸುವನು ಎಂದು ಶಿವಸಿದ್ಧಾಂತದಲ್ಲಿ ಹೇಳಲ್ಪಟ್ಟಿರುವುದರಿಂದ ಅತಿ ವರ್ಣಾಶ್ರಮಿಗಳೆನಿಸಿರುವ ವೀರಶೈವ ಮತಾನುಯಾಯಿಗಳೆಲ್ಲರೂ ಸಹ ಈ ಆರು ಚಿಹ್ನೆಗಳನ್ನು ಧರಿಸಿರಬೇಕೆಂದು ಸ್ಪಷ್ಟವಾಗುವಲ್ಲಿ ದ್ವಿಜನು ಮಾತ್ರ ಈ ಆರು ಚಿಹ್ನೆಗಳನ್ನು ಧರಿಸಿರಬೇಕೆಂದು ಹೇಳುವ ಗೌತಮ ಸ್ಮೃತಿಯ ಲಕ್ಷಣವು ಅತಿವ್ಯಾಪ್ತಿಯ ದೋಷದಿಂದ ದುಷ್ಟಲಕ್ಷಣವಾಗಿ ಪರಿಣಮಿಸುವುದಿಲ್ಲವೆ?

**ಸಮಾಧಾನ:**—ಈ ಗೌತಮ ವಾಕ್ಯದಲ್ಲಿ "ಇತಿ ಬ್ರಾಹ್ಮಣ ಲಕ್ಷಣಂ" ಎಂದು ಬ್ರಾಹ್ಮಣ ಎಂಬ ವಿಶೇಷ ಪದವಿರುವುದರಿಂದ ಬ್ರಾಹ್ಮಣತ್ವರೂಪವಾದ ಜಾತಿಯಿಂದೊಡಗೂಡಿದ ಮಂತ್ರ ಧ್ಯಾನಾದಿ ಆರು ಧರ್ಮಗಳು ಲಿಂಗಧಾರಿ ದ್ವಿಜನಲ್ಲಿ ಮಾತ್ರ ಕಾಣುತ್ತವೆ. ಲಿಂಗಧಾರಿ ಕ್ಷತ್ರಿಯಾದಿಗಳಲ್ಲಾದರೋ ಕ್ಷತ್ರಿಯತ್ವರೂಪ ಜಾತಿಯಿಂದೊಡಗೂಡಿದ ಆರು ಧರ್ಮಗಳು ಕಂಡುಬರುತ್ತವೆಯಲ್ಲದೆ ಬ್ರಾಹ್ಮಣತ್ವದಿಂದೊಡಗೂಡಿದ ಧರ್ಮಗಳು ಕಂಡುಬರದಿರುವುದರಿಂದ ಈ ಲಕ್ಷಣವು ಸಲ್ಲಕ್ಷಣವಾಗುವುದಲ್ಲದೆ ಅಸಲ್ಲಕ್ಷಣವಾಗಲಾರದೆಂದು ತಿಳಿಯತಕ್ಕದು. ಮತ್ತು

ಬ್ರಹ್ಮ ವಿಷ್ಣ್ವಾದಿದೇವಾಶ್ಚ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥
ಉರಸ್ಥಲೇ ಹರಿರ್ಲಿಂಗಂ ಧೃತ್ವಾ ಮೂರ್ಧ್ನಿ ಪಿತಾಮಹಃ ।
ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪ್ನುಯುಃ ॥

**ಅರ್ಥ:**—ಬ್ರಹ್ಮ ವಿಷ್ಣು ಮುಂತಾದ ದೇವತೆಗಳು, ಗೌತಮಾದಿ ಸಕಲ ಋಷಿಗಳು, ಶಿವಲಿಂಗವನ್ನು ಉತ್ತಮಾಂಗದಲ್ಲಿ ಧರಿಸಿ ಅನವರತವೂ ಪೂಜಿಸುತ್ತಿರುವುದರಿಂದಲೇ ತಮ್ಮ ತಮ್ಮ ಬ್ರಹ್ಮ ಇಂದ್ರಾದಿಪದವಿಗಳನ್ನು ಹೊಂದಿ ಲೋಕವಂದ್ಯರೆನಿಸಿದರು – ಎಂದು ಸ್ಕಾಂದಪುರಾಣವು ಲಿಂಗಧಾರಣದ ಮಹಿಮೆಯನ್ನು ಪ್ರತಿಪಾದಿಸಿರುತ್ತದೆ.

ವಯಂ ಬ್ರಹ್ಮಾದಯಸ್ಸರ್ವೇ ಪಶವಃ ಪರಿಕೀರ್ತಿತಾಃ ।
ತ್ವಮಸ್ಮಾಕಂ ಪತಿರ್ಯಸ್ಮಾತ್ ತಸ್ಮಾತ್ಪಶುಪತಿಶ್ಶಿವಃ ॥
ಇತ್ಯುಕ್ತ್ವಾ ದೇವತಾಸ್ಸರ್ವಾಶ್ಶಿವಲಿಂಗಾದಿಧಾರಣಮ್ ।
ಕೃತ್ವಾ ಪಾಶುಪತಾಸ್ಸರ್ವೇ ತಸ್ಮಾತ್ಪಶುಪತಿಶ್ಶಿವಃ ॥

ಅತೋ ಬ್ರಹ್ಮಾದಿದೇವಾನಾಮುಪಾಸ್ಯಶ್ಶಿವ ಏವ ಹಿ ।
ತಥಾ ವಿಭೂತಿರುದ್ರಾಕ್ಷಲಿಂಗಧಾರಣದೇಹಿನಃ ॥
ಶುದ್ಧಸ್ಫಟಿಕಮಾಲಾಭಿರ್ಬದ್ಧಹಸ್ತಾಂಬುಜಾನಪಿ ।
ಬ್ರಹ್ಮವಿಷ್ಣ್ವಾದಿದೇವಾಂಸ್ತು ದೃಷ್ಟ್ವಾ ಸಾಂಬಸ್ತ್ರಿಲೋಚನಃ ।
ತ್ರಿಪುರಾಸುರಸಂಹಾರಮಕರೋದ್ಭಕ್ತವತ್ಸಲಃ ॥

**ಅರ್ಥ** :—ಎಲೈ ಪರಶಿವನೇ! ದೇವತೆಗಳಾದ ನಾವೆಲ್ಲರೂ ಮಾಯಾವೃತರಾದುದರಿಂದ ಪಶುಗಳಾಗಿರುತ್ತೇವೆ. ನೀನು ಸರ್ವನಿಯಾಮಕನಾದುದರಿಂದ ಪತಿಯೆನಿಸಿಕೊಂಡಿರುವಿ. ಆದುದರಿಂದ ನಿನ್ನನ್ನು **ಪಶುಪತಿ**ಯೆಂದು ಹೇಳುತ್ತಾರೆಂದು ಬ್ರಹ್ಮಾದಿದೇವತೆಗಳು ಶಿವನನ್ನು ಸ್ತುತಿಸುತ್ತ ಎಲ್ಲರೂ ಶಿವಲಿಂಗವನ್ನು ವಿಭೂತಿ ರುದ್ರಾಕ್ಷಿಗಳನ್ನೂ ಧರಿಸಿ ಪಶುಪತಿಯನ್ನಾರಾಧಿಸುತ್ತ **ಪಾಶುಪತರೆನಿಸಿದರು** ಎಂದು ಲಿಂಗಪುರಾಣದಲ್ಲಿ ವ್ಯಾಸಮಹರ್ಷಿಗಳು ಲಿಂಗಧಾರಣ ಮಹತ್ವವನ್ನು ಕೊಂಡಾಡಿರುವುದರಿಂದ "**ಮುಖೇ................ಲಕ್ಷಣಮ್**" ಎಂಬ ಗೌತಮ ಸ್ಮೃತಿಯು ಋಗಾದಿವೇದಗಳಿಂದ ಸಿದ್ಧವಾದ ಶಿವಲಿಂಗಧಾರಣವನ್ನು ಅನುವಾದ ಮಾಡಿತೆಂದು ತಿಳಿಯತಕ್ಕುದು.

**ಶಂಕಾ** :—ಹಾಗಾದರೆ ವೇದಗಳು ಈಶ್ವರ ಪ್ರೋಕ್ತಗಳಾದುದರಿಂದ ಅಪೌರುಷೇಯ ವಾಣಿಗಳಾಗಿರುತ್ತವೆ. ಸ್ಮೃತಿಗಳು ಒಬ್ಬೊಬ್ಬ ಮಹರ್ಷಿಗಳಿಂದ ಹೇಳಲ್ಪಟ್ಟಿರುವದರಿಂದ ವೇದದಂತೆ ಅಪೌರಷೇಯಗಳಲ್ಲ. ಆದುದರಿಂದ ಇಂತಹ ಗೌತಮ ಋಷಿಯು ಬರೆದಿರುವ ಸ್ಮೃತಿಯಿಂದ ಲಿಂಗಧಾರಣವು ಹೇಗೆ ತಾನೇ ಸಿದ್ಧಿಸುವುದು ?

**ಸಮಾಧಾನ** :—ಆಸ್ತಿಕರಾದ ಭಾರತೀಯರು (ಹಿಂದುಗಳು) ಶ್ರುತಿಗಳಿಗೆ ಎಷ್ಟು ಪ್ರಾಮಾಣ್ಯವನ್ನು ಅಂಗೀಕರಿಸಿರುತ್ತಾರೆಯೋ ಸ್ಮೃತಿಗಳಿಗೆ ಅಷ್ಟೇ ಪ್ರಾಮಾಣ್ಯವನ್ನು ಅಂಗೀಕರಿಸಿರುತ್ತಾರೆ. ಶ್ರುತಿಗಳು ಅಸ್ಪಷ್ಟ ವಾಣಿಯಾದುದರಿಂದ ಸುಲಭವಾಗಿ ಅವುಗಳ ಅರ್ಥವನ್ನು ಗ್ರಹಿಸಲಾಗುವುದಿಲ್ಲ. ಮಹಾ ತಪಸ್ವಿಗಳೆನಿಸಿದ **ಮನು, ಪರಾಶರ, ಗೌತಮ** ಮುಂತಾದ ಮಹರ್ಷಿಗಳು ಆ ವೇದಗಳ ಗೂಢಾರ್ಥವನ್ನೆಲ್ಲ ಸ್ಮೃತಿಗಳೆಂಬ ಹೆಸರಿನಿಂದ ಪ್ರಕಾಶಪಡಿಸಿರುತ್ತಾರೆ. ಈ ವಿಷಯದಲ್ಲಿ ಪೂರ್ವಾಚಾರ್ಯರು

ಅನುಮತಿ ಇತ್ತಿರುವುದಲ್ಲದೆ, ಕಾಳಿದಾಸ ಮಹಾಕವಿಯ ಪ್ರಯೋಗವೂ ಸಹ ನಮಗೆ ಸಹಾಯ ಮಾಡುತ್ತದೆ. ಈ ಮಹಾಕವಿಯು ತಾನು ರಚಿಸಿರುವ ರಘುವಂಶವೆಂಬ ಗ್ರಂಥದಲ್ಲಿ ದಿಲೀಪ ಮಹಾರಾಜನು ಪುತ್ರಾರ್ಥಿಯಾಗಿ ತನ್ನ ಕುಲಗುರುಗಳಾದ ವಶಿಷ್ಠ ಮಹರ್ಷಿಯ ಬಳಿಗೈದಿ ತನಗುಂಟಾದ ಪರಲೋಕ ಪ್ರತಿಬಂಧವನ್ನು ತಿಳಿಯಲಪೇಕ್ಷಿಸಲಾಗಿ ತ್ರಿಕಾಲಜ್ಞಾನಿಗಳಾದ ಆ ಮಹರ್ಷಿಗಳು ದಿವ್ಯದೃಷ್ಟಿಯಿಂದರಿತು ಆ ರಾಜನನ್ನು ಗೋಸೇವೆಯಲ್ಲಿ ನಿಯಮಿಸಿದನು. ಆಗ ಆ ಮಹಾರಾಜನು ರಾಜ್ಯಭಾರವನ್ನು ಮಂತ್ರಿಗಳಿಗೆ ವಹಿಸಿ ಕೇವಲ ವನ್ಯವೃತ್ತಿಯನ್ನವಲಂಬಿಸಿ ಪತ್ನೀಸಹಿತನಾಗಿ **ನಂದಿನೀಧೇನುವನ್ನು** ಯಾವ ರೀತಿ ಸೇವೆಮಾಡಿದನೆಂಬುದನ್ನು ತಿಳಿಸುವ ಸಂದರ್ಭದಲ್ಲಿ

"ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛತ್"

ಎಂದು ಹೇಳಿರುತ್ತಾನೆ. ಅಂದರೆ ಋಗಾದಿ ವೇದಗಳ ಅರ್ಥವನ್ನು ಮನು, ಪರಾಶರ, ಗೌತಮಾದಿ ಸ್ಮೃತಿಗಳು ಹೇಗೆ ಅನುಸರಿಸಿರುತ್ತವೆಯೋ ಹಾಗೆ ಸಹಧರ್ಮಚಾರಿಣಿಯಾದ ಸುದಕ್ಷಿಣೆಯು ನಂದಿನಿಯನ್ನು ಹಿಂಬಾಲಿಸಿದಳು ಎಂದು ಭವ್ಯವಾದ ಉಪಮಾನವನ್ನು ಕೊಟ್ಟಿರುತ್ತಾನೆ. ಇದರಿಂದ ಸ್ಮೃತಿವಾಕ್ಯಗಳು ಶ್ರುತ್ಯಾಧಾರದಿಂದ ಹೊರಟಿರುವುದರಿಂದ ಶ್ರುತಿಗಳ ದ್ವಾರಾ ಸ್ಮೃತಿಗಳೂ ಸಹ ಪ್ರಮಾಣಗಳೆಂಬುವಲ್ಲಿ ಸಂಶಯವಿಲ್ಲವು. ಮತ್ತು ಈ ಗೌತಮ ಸ್ಮೃತಿಯು ವೀರಶೈವ ಮತದ ಮುಕ್ತಿಸಾಧನಗಳಾದ ಮಂತ್ರ, ಧ್ಯಾನ, ಶಿಖೆ, ಭಸ್ಮ, ರುದ್ರಾಕ್ಷ, ಲಿಂಗ, ಈ ಆರು ಧರ್ಮಗಳನ್ನು ಸಾಮಾನ್ಯವಾಗಿ ತೋರಿಸಿತಲ್ಲದೆ ಮೋಕ್ಷಕ್ಕೆ ಮುಖ್ಯಕಾರಣವೂ ಪರಮೋಪಾದೇಯವೂ, ಶುಚ್ಯಶುಚಿಸಾಧಾರಣ ಕಾಲಗಳಲ್ಲಿ ಧಾರಣೀಯವೂ ನಿತ್ಯಪೂಜನೀಯವೂ ಆದ ಶಿವಲಿಂಗವನ್ನು ಬದುಕಿರುವವರೆಗೆ ಧರಿಸಿರಬೇಕೆಂಬ ಮಹಾವ್ರತವನ್ನು ತೋರಿಸುವುದಕ್ಕಾಗಿ ಹೊರಟಿರುತ್ತದೆ.

ಅಕ್ಷಪಾದಾದಯಸ್ಸರ್ವಾಶ್ಶಕ್ತಯಃ ಪರಯಾ ಮುದಾ ।
ಧಾರಯಂತ್ಯಳಿಕಾಗ್ರೇಷು ಶಿವಲಿಂಗಮಹರ್ನಿಶಮ್ ॥

**ಅರ್ಥ:**— ಗೌತಮ, ದೂರ್ವಾಸ, ಅಗಸ್ತ್ಯ, ವಸಿಷ್ಠ, ವಾಮದೇವ ಮುಂತಾದ ಸಮಸ್ತ ಮಹರ್ಷಿಗಳೂ, ಸರಸ್ವತಿ, ಲಕ್ಷ್ಮಿ, ಶಚಿ

ಮುಂತಾದ ಶಕ್ತಿಯರೂ, ಮುಕ್ತಿಬೀಜವಾದ ಶಿವಲಿಂಗವನ್ನು ಅಹೋ ರಾತ್ರಿಯೂ ಎಡೆಬಿಡದೆ ಪರಮಭಕ್ತಿಯಿಂದ ಧರಿಸಿರುತ್ತಾರೆಂದು ಅದೇ ಗೌತಮ ಸ್ಮೃತಿಯಲ್ಲಿ ಲಿಂಗಧಾರಣವನ್ನು ಪ್ರತ್ಯೇಕವಾಗಿ ಉದಾಹರಿಸಿ ರುವ ಮಹರ್ಷಿಗಳನ್ನೂ ಲಕ್ಷ್ಮಿ ಮುಂತಾದ ದೇವಿಯರನ್ನೂ ಉದಾಹರಿ ಸಿರುವುದರಿಂದ ಲಿಂಗಧಾರಣವು ಯಾವಜ್ಜೀವವೂ ಕರ್ತವ್ಯವಾದುದೆಂದೂ ಉಳಿದ ಮಂತ್ರ, ಧ್ಯಾನ, ಭಸ್ಮ, ರುದ್ರಾಕ್ಷಾದಿಗಳು ಈ ಲಿಂಗಧಾರಣ ಪೂಜೆಗಳೆಂಬ ಮಹಾವ್ರತಕ್ಕೆ ಅಂಗಭೂತಗಳೆಂದೂ ಸ್ಪಷ್ಟವಾಗುತ್ತದೆ. ಇನ್ನು ಮನು ಸ್ಮೃತಿಯಲ್ಲಿ—

ಸರ್ವಕರ್ಮವಿಮುಕ್ತಸ್ಯ ಧ್ಯಾನಯೋಗರತಸ್ಯ ಚ ।
ನ ತಸ್ಯ ದಹನಂ ಕಾರ್ಯಂ ನ ಚ ಪಿಂಡೋದಕಕ್ರಿಯಾ ॥

ಅರ್ಥ :—ಸರ್ವಸಂಗ ಪರಿತ್ಯಾಗಮಾಡಿದ ಸಂನ್ಯಾಸಿಯೂ, ಧ್ಯಾನ ಯೋಗಾಸಕ್ತನಾದ ಮಹಾತ್ಮನೂ, ಇವರು ಮರಣವನ್ನು ಹೊಂದಿದಾಗ ಇವರ ಸ್ಥೂಲದೇಹವನ್ನು ಅಗ್ನಿಯಿಂದ ದಹಿಸಬಾರದು ಮತ್ತು ಆ ಮೃತ ದೇಹಿಗಳನ್ನುದ್ದೇಶಿಸಿ ಪಿಂಡೋದಕಾದಿ ಅಪರಕರ್ಮಗಳನ್ನು ಮಾಡ ಬಾರದು ಎಂದು ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದಲ್ಲಿರುವ "ಧ್ಯಾನ ಯೋಗರತಸ್ಯ ಚ" ಎಂಬ ವಾಕ್ಯಕ್ಕೆ ಲಿಂಗಧಾರಿಯೆಂದು ಅರ್ಥವನ್ನು ಮಾಡಬೇಕು. ಏಕೆಂದರೆ ಅದೇ ಮನುಸ್ಮೃತಿಯಲ್ಲಿ—

ಶಿವಧ್ಯಾನರತೋ ಭೂತ್ವಾ ಶಿವಲಿಂಗಾಂಗಸಂಯುತಃ ।
ಶಿವೇತರಪರಿತ್ಯಾಗೀ ಧ್ಯಾನಯೋಗೀ ಸ ಉಚ್ಯತೇ ॥

ಅರ್ಥ :—ಯಾವನು ತನ್ನ ದೇಹದಲ್ಲಿ ಶಿವಲಿಂಗವನ್ನು ಧರಿಸಿ ಯಾವಾಗಲೂ ಶಿವಧ್ಯಾನಮಾಡುತ್ತಾ ಶಿವನೋರ್ವನೆ ಉಪಾಸ್ಯವಸ್ತು ವೆಂದು ನಿಶ್ಚಯಿಸಿ ಶಿವನೊಬ್ಬನಿಗೇ ಶರಣಾಗತನಾಗಿರುವನೋ ಅವನೇ ಧ್ಯಾನಯೋಗಿಯೆಂಬ ಹೆಸರನ್ನು ಪಡೆಯುತ್ತಾನೆಂದು ಹೇಳಿರುವುದರಿಂದ ಧ್ಯಾನಯೋಗಿಪದವು ಲಿಂಗಾಂಗಿಯಾದ ಮಾನವನನ್ನುದ್ದೇಶಿಸಿರುವುದೆಂದು ಸ್ಪಷ್ಟವಾಗುವುದರಿಂದ ಮನುಸ್ಮೃತಿ ಪ್ರಮಾಣದಿಂದಲೂ ಲಿಂಗಧಾರಣವು ಸಿದ್ಧಿಸಲ್ಪಟ್ಟಿತು. ಇನ್ನು ಬೋಧಾಯನ ಸ್ಮೃತಿಯಲ್ಲಿ—

ಸರ್ವಕರ್ಮನಿವೃತ್ತಸ್ಯ ಧ್ಯಾನಯೋಗರತಸ್ಯ ಚ।
ನ ತಸ್ಯ ದಹನಂ ಕುರ್ಯಾನ್ನಾಶೌಚಂ ನೋದಕಕ್ರಿಯಾಮ್ ॥

ಎಂದು ಆ ಮನುಸ್ಮೃತಿಯಲ್ಲಿ ಹೇಳಿದ "ಧ್ಯಾನಯೋಗರತಸ್ಯ ಚ" ಎಂಬ ವಾಕ್ಯವು ಇಲ್ಲಿಯೂ ಬಂದಿರುವದರಿಂದ ಮನುಸ್ಮೃತಿಯಲ್ಲಿ ಹೇಳಿದಂತೆ ಈ ವಾಕ್ಯಕ್ಕೆ ಲಿಂಗಧಾರಣಪರವಾಗಿ ಅರ್ಥಮಾಡುವುದೇ ಸಾಧುವಾದುದು ಮತ್ತು ಶಾತಾತಪ ಸ್ಮೃತಿಯಲ್ಲಿ—

ವಾನಪ್ರಸ್ಥಂ ಯೋಗಿನಂ ಚ ಲಿಂಗ್ಯೈಕ್ಯಂ ಭಿಕ್ಷುಕಂ ಯತಿಮ್।
ಕುರ್ಯಾಶ್ರಮಾಣಾಂ ಮಧ್ಯೇ ಚ ರಸಾಯಾಂ ನಿಕ್ಷಿಪೇನ್ಮೃತಮ್ ॥

ಅರ್ಥ :—ಪ್ರಾಪಂಚಿಕ ವ್ಯವಹಾರವನ್ನೆಲ್ಲ ಪುತ್ರನಿಗೆ ವಹಿಸಿ ಪತ್ನೀಸಹಿತನಾಗಿ ಕಾಡಿನಲ್ಲಿ ವಾಸಮಾಡುತ್ತಾ ವನ್ಯವೃತ್ತಿಯಿಂದ ಜೀವಿಸುವ ವಾನಪ್ರಸ್ಥಾಶ್ರಮಿಯು, ಯೋಗಿಯೂ, ಲಿಂಗಾಂಗಸಾಮರಸ್ಯ ಸಿದ್ಧಿಯನ್ನು ಪಡೆದ ಲಿಂಗಧಾರಿಯೂ, ಭಿಕ್ಷುಕನಾದ ಸಂನ್ಯಾಸಿಯೂ ಈ ಸ್ಥೂಲ ದೇಹವನ್ನು ತ್ಯಜಿಸಿದನಂತರ ಅಂತಹ ಮೃತಶರೀರವನ್ನು ಭೂಮಿಯಲ್ಲಿ ನಿಕ್ಷೇಪಮಾಡಬೇಕಲ್ಲದೆ ಅಗ್ನಿಯಲ್ಲಿ ದಹನಮಾಡಬಾರದೆಂದು ಹೇಳಿರುವುದರಿಂದ ಲಿಂಗಧಾರಣವು ಸಿದ್ಧವಾಗುತ್ತದೆ.

ಹೀಗೆ ಅನೇಕ ಸ್ಮೃತಿಗಳಿಂದ ವೀರಶೈವ ಮತದಲ್ಲಿ ಜನ್ಮಧರಿಸಿದ ಸ್ತ್ರೀಯರಾಗಲಿ ಪುರುಷರಾಗಲಿ ಗುರುವಿನಿಂದ ದೀಕ್ಷಾಸಂಸ್ಕಾರವನ್ನು ಪಡೆದು ಶಿವಲಿಂಗವನ್ನು ಎಡೆಬಿಡದೆ ದೇಹವಿರುವವರೆಗೆ ಧರಿಸುತ್ತಲೂ ಪ್ರತಿ ದಿವಸ ಪೂಜಿಸುತ್ತಲೂ ಇರಬೇಕೆಂದು ಸಿದ್ಧವಾಯಿತು.

ಶಂಕಾ :—ವೇದಾನುಯಾಯಿಗಳಾದ ನಮ್ಮ ಭಾರತೀಯರಿಂದ ರಜಸ್ಸೂತಕ, ಜನನಸೂತಕಾದಿಗಳು ಮಾನಿಸಲ್ಪಟ್ಟಿರುತ್ತವೆ. ಇವುಗಳೊಳಗೆ ರಜಸ್ಸೂತಕವೆಂಬುದು ಮಹಾದೋಷವೆಂದು ಧರ್ಮಶಾಸ್ತ್ರಕಾರರು ನಿರ್ಣಯಮಾಡಿರುತ್ತಾರೆ. ಹೇಗೆಂದರೆ ಒಂದು ಕಾಲದಲ್ಲಿ ಮೂರು ಮುಖಗಳುಳ್ಳ ವಿಶ್ವರೂಪನೆಂಬುವನು ಯಜ್ಞವನ್ನಾರಂಭಿಸಿ ಆ ಯಜ್ಞದಲ್ಲಿ ರಹಸ್ಯವಾಗಿ ರಾಕ್ಷಸರಿಗೆ ಹವಿರ್ಭಾಗವನ್ನು ಕೊಡುತ್ತಿದ್ದನು. ಇಂದ್ರನು

ಈತನ ಕಪಟವೃತ್ತಿಯನ್ನು ನೋಡಿ ಇವನನ್ನು ಸಂಹರಿಸಿದನು. ಆ ವಿಶ್ವ ರೂಪನು ಬ್ರಾಹ್ಮಣ ಬೀಜೋದ್ಭವನಾದುದರಿಂದ ಇಂದ್ರನಿಗೆ ಬ್ರಹ್ಮಹತ್ಯಾ ದೋಷವು ಸಂಭವಿಸಿತು. ಆ ದೋಷವನ್ನು ನಾಲ್ಕುಭಾಗಮಾಡಿ ಭೂಮಿ, ವೃಕ್ಷ, ಜಲ, ಸ್ತ್ರೀ ಇವುಗಳಿಗೊಂದೊಂದು ಭಾಗವನ್ನು ಹಂಚಿಸಿದನು. ಆಗ ಭೂಮಿಯು ನನ್ನಲ್ಲಿರುವ ಹಳ್ಳಗಳೆಲ್ಲವೂ ತುಂಬುವ ಪಕ್ಷದಲ್ಲಿ ಈ ಬ್ರಹ್ಮಹತ್ಯಾದೋಷವನ್ನು ವಹಿಸುವೆನೆಂದು ಕೇಳಿ ವರಪಡೆದು ಪರಿಗ್ರಹಿಸಿತು. ವೃಕ್ಷಗಳು ತಮ್ಮ ಕೊಂಬೆಗಳನ್ನು ಎಷ್ಟುಸಾರಿ ಕತ್ತರಿಸಿದರೂ ಚಿಗುರಬೇಕೆಂದು ವರಪಡೆದು ಪರಿಗ್ರಹಿಸಿತು. ಜಲವು ತನ್ನಲ್ಲಿರುವ ನೀರನ್ನು ಎಷ್ಟು ಉಪಯೋಗಿಸಿದರೂ ವೃದ್ಧಿಹೊಂದುವಂತೆ ವರಪಡೆದು ಪರಿಗ್ರಹಿಸಿತು. ಸ್ತ್ರೀಯು ತಾನು ಪ್ರಸವಿಸುವವರೆಗೂ ಗರ್ಭಕ್ಕೆ ಉಪಹತಿಯಾಗದಂತೆ ವರವನ್ನು ಪಡೆದು ಪರಿಗ್ರಹಿಸಿದಳು. ಆ ಬ್ರಹ್ಮಹತ್ಯಾಂಶಗಳೇ ಈಗಲೂ ಇರಿಣ (ಚವುಳು) ನಿರ್ಯಾಸ (ಮೇಣ) ಫೇನ (ನೊರೆ) ಮಾಸಿಕ ರಜಸ್ಸು (ರಕ್ತಸ್ರಾವ) ಗಳ ರೂಪದಿಂದ ಕಾಣಿಸಿಕೊಳ್ಳುತ್ತವೆ. ಈ ವಿಷಯವು ತೈತ್ತರೀಯ ಸಂಹಿತೆಯಲ್ಲಿಯೂ, ಭಾಗವತದಲ್ಲಿಯೂ ಸ್ಪಷ್ಟವಾಗಿರುತ್ತದೆ. ಆದುದರಿಂದ ಈ ರಜಸ್ಸೂತಕವೆಂಬುದು ಬ್ರಹ್ಮಹತ್ಯಾದೋಷವಾದುದರಿಂದ ಸ್ತ್ರೀಯರು ರಜೋವತಿಯರಾದ ಮೂರು ದಿವಸಗಳವರೆಗೂ ದೇವರ ದರ್ಶನಕ್ಕೂ, ದೇವರ ಸ್ಪರ್ಶನಕ್ಕೂ, ದೇವರ ಪೂಜೆಗೂ, ಅರ್ಹರಲ್ಲವೆಂದು ಧರ್ಮಶಾಸ್ತ್ರಗಳು ಉದ್ಘೋಷಿಸುತ್ತವೆ. ಹೀಗಿರುವಲ್ಲಿ ಶಿವಲಿಂಗವನ್ನು ಧರಿಸಿರುವ ಸ್ತ್ರೀಯರು ರಜಸ್ವತಿಯರಾದ ಸಮಯದಲ್ಲಿ ಪವಿತ್ರವಾದ ಶಿವಲಿಂಗವನ್ನು ಧರಿಸುವುದೆಂತು? ಮತ್ತು ಪೂಜಿಸುವುದೆಂತು? ಅಂತಹ ಅಪವಿತ್ರ ಕಾಲದಲ್ಲಿ ಶಿವಲಿಂಗವನ್ನು ಧರಿಸುತ್ತಲೂ ಪೂಜಿಸುತ್ತಲೂ ಇರುವುದಾದರೆ ಅಂತಹ ಸ್ತ್ರೀಯರ ಅಶುಚಿ ಶರೀರ ಸಂಬಂಧದಿಂದ ಶಿವಲಿಂಗದಲ್ಲಿ ನೆಲೆಸಿರುವ ಶಿವಕಲೆಯೇ ಹೊರಟುಹೋಗಿ ಲಿಂಗವೂ ಅಶುಚಿಯಾಗಬೇಕಾಗುವುದು. ಮತ್ತು "ನಾಧಿಕಾರೀ ಸ ವಿಜ್ಞೇಯಃ ಶ್ರೌತಸ್ಮಾರ್ತಾದಿ ಕರ್ಮಸು" ಲಿಂಗಧಾರಿಗಳು ಶ್ರೌತಸ್ಮಾರ್ತಾದಿ ಕರ್ಮಗಳಿಗೆ ಅಧಿಕಾರಿಗಳಲ್ಲ ಎಂದು ಅನೇಕ ಪ್ರಮಾಣಗಳಿರುವುದರಿಂದಲೂ ಇದುವರೆಗೆ ಸಾಧಿಸಲ್ಪಟ್ಟ ಲಿಂಗಧಾರಣವಿಷಯಕಗಳಾದ ಶ್ರುತಿ-ಸ್ಮೃತ್ಯಾದಿಗಳೆಲ್ಲವೂ

ಅಂತರ್ಲಿಂಗಧಾರಣ ವಿಷಯಕಗಳಾಗುವುವೇ ಹೊರತು ಬಹಿ (ಇಷ್ಟ) ಲಿಂಗಧಾರಣ ವಿಷಯಕಗಳಾಗಲಾರವು.

**ಪರಿಹಾರ :**—ಶಾಸ್ತ್ರದಲ್ಲಿ ಸಾಮಾನ್ಯಶಾಸ್ತ್ರವೆಂದೂ ವಿಶೇಷಶಾಸ್ತ್ರ ವೆಂದೂ ಎರಡು ಪ್ರಕಾರವುಂಟು ಇವುಗಳಲ್ಲಿ ವಿಶೇಷಶಾಸ್ತ್ರ ದೃಷ್ಟಿಯಿಂದ ಸಾಮಾನ್ಯ ಶಾಸ್ತ್ರವು ದುರ್ಬಲವಾಗುತ್ತದೆಂದು ಶಾಸ್ತ್ರಮರ್ಯಾದೆ ಇರುವು ದಷ್ಟೆ-ಹೇಗೆಂದರೆ "**ಮಾ ಹಿಂಸ್ಯಾತ್ ಸರ್ವಭೂತಾನಿ**" ಯಾವ ಪ್ರಾಣಿ ಯನ್ನೂ ಹಿಂಸಿಸಬಾರದು "**ನಮಾಗ್ಂಸಮಶ್ನೀಯಾತ್**" ಮಾಂಸ ವನ್ನು ತಿನ್ನಬಾರದು, "**ನೋಚ್ಛಿಷ್ಟಂ ಕಸ್ಯಚಿದ್ದದ್ಯಾತ್**" ಎಂಜಲನ್ನು ಯಾರಿಗೂ ಕೊಡಬಾರದು "**ನಾದ್ಯಾಚ್ಚೈತತ್ತಥಾಂತರಾ**" ಉಚ್ಛಿಷ್ಟ ವನ್ನು ಯಾರೂ ತಿನ್ನಲಾಗದು.

ಇತ್ಯಾದಿ ಶ್ರುತಿವಾಕ್ಯಗಳು ಸಾಮಾನ್ಯ ವಾಕ್ಯಗಳಾಗಿರುತ್ತವೆ—

**" ಸೋಮೇನ ಯಜೇತ ಸೋಮೋಚ್ಛಿಷ್ಟಾವಮ್**
**ಯದಗ್ನೀಷೋಮೀಯಂ ಪಶುಮಾಲಭೇತ "**

ಸೋಮಯಾಗ ಸಂಬಂಧವಾದ ಉಚ್ಛಿಷ್ಟವನ್ನು ಭುಂಜಿಸಬೇಕು. ಯಜ್ಞ ದಲ್ಲಿ ಸಂಸ್ಕರಿಸಲ್ಪಟ್ಟ ಪಶುವನ್ನು ವಧಿಸಬೇಕು ಮುಂತಾದ ವಾಕ್ಯಗಳು ವಿಶೇಷ ವಾಕ್ಯಗಳಾಗಿರುತ್ತವೆ. ಇವೆರಡು ಶ್ರುತಿಗಳೂ ಒಂದಕ್ಕೊಂದು ವಿರೋಧಿಗಳಾದುದರಿಂದ ಯಾವ ವಾಕ್ಯಕ್ಕೆ ಪ್ರಾಮಾಣ್ಯವನ್ನಂಗೀಕರಿಸ ಬೇಕೆಂಬ ಸಂಶಯವುಂಟಾಗಲಾಗಿ ವಿಶೇಷ ವಾಕ್ಯಗಳು ಸಾಮಾನ್ಯ ವಾಕ್ಯ ಗಳನ್ನು ದುರ್ಬಲಗೊಳಿಸುತ್ತವೆಯೆಂಬ ಶಾಸ್ತ್ರಪ್ರಮಾಣಾನುಸಾರವಾಗಿ ಯಜ್ಞಸಂಬಂಧವಾದ ಪಶುವಧೆ ಮತ್ತು ಸೋಮಯಾಗ ಸಂಬಂಧವಾದ ಉಚ್ಛಿಷ್ಟಭಕ್ಷಣ ಮುಂತಾದ ವಿಶೇಷ ವಾಕ್ಯಗಳು ಪ್ರವರ್ತಿಸುವ ಸಮಯ ದಲ್ಲಿ ಯಾವ ಪ್ರಾಣಿಗೂ ಹಿಂಸೆಮಾಡಬಾರದು, ಉಚ್ಛಿಷ್ಟವನ್ನು ಭುಂಜಿಸ ಬಾರದು ಮುಂತಾದ ಸಾಮಾನ್ಯವಾಕ್ಯಗಳು ಪ್ರವರ್ತಿಸುವುದಿಲ್ಲವೆಂದು ಮೀಮಾಂಸಾ ಶಾಸ್ತ್ರಕಾರರು ನಿಯಮಮಾಡಿರುತ್ತಾರೆ. ಇದರಂತೆ "**ಸರ್ವ ಲಿಂಗಂ ಸ್ಥಾಪಯತಿ**" ಮುಂತಾದ ಶ್ರುತಿವಾಕ್ಯಗಳಲ್ಲಿ ಶಿವಲಿಂಗವನ್ನು ಒಂದು ನಿಮಿಷವೂ ಬಿಡದಂತೆ ಧರಿಸಬೇಕು. ಶಿವಲಿಂಗ ಪೂಜೆಯನ್ನು

ಒಂದು ದಿವಸವೂ ತಪ್ಪದೆ ಮಾಡಬೇಕು ಎಂದು ವಿಧಿಸಲ್ಪಟ್ಟ ಮಧ್ಯಕಾಲದಲ್ಲಿ ಅಂತಹ ಲಿಂಗಧಾರಣಕ್ಕೂ ಲಿಂಗಪೂಜೆಗೂ ಪ್ರತಿಬಂಧಕವನ್ನು ಮಾಡುತ್ತಿರುವ ರಜಸ್ಸೂತಕಾದಿಗಳು ಬಂದೊದಗಿದರೂ ಶಿವಲಿಂಗವನ್ನು ದೇಹದಿಂದ ತೆಗೆಯಲಾಗದು. ಯಾವಜ್ಜೀವವೂ ಲಿಂಗಪೂಜೆಯನ್ನು ಮಾಡುತ್ತಿರಬೇಕು.

ಗೃಹೇ ಯಸ್ಮಿನ್ ಪ್ರಸೂತಾ ಸ್ತ್ರೀ ಸೂತಕಂ ನಾತ್ರವಿದ್ಯತೇ ।
ಲಿಂಗಾರ್ಚನರತಾಯಾಶ್ಚ ಋತೌ ನಾರ್ಯಾ ನ ಸೂತಕಮ್ ॥
ತಥಾ ಪ್ರಸೂತಿಕಾಯಾಶ್ಚ ಸೂತಕಂ ನೈವ ವಿದ್ಯತೇ।
ಲಿಂಗಾರ್ಚನರತಾ ನಾರೀ ಸೂತಕೀ ತು ರಜಸ್ವಲಾ ।
ರವಿರಗ್ನಿರ್ಯಥಾ ವಾಯುಃ ಕೋಟಿಕೋಟಿ ಗುಣಶ್ಶುಚಿಃ ।
ತದ್ಧಾರಣಾತ್ತ್ರಮುಂಚಂತಿ ಯುವತಿಂ ಸೂತಕಾದಯಃ ॥

( ಸಿದ್ಧಾಂತ ಶಿಖಾಮಣಿ )

ಅರ್ಥ :—ಲಿಂಗಧಾರಿಯಾದ ಸ್ತ್ರೀಯಳು ರಜಸ್ವಲೆಯಾದರೆ ಅಥವಾ ಪ್ರಸವಿಸಿದರೆ ತಾನು ಅಶುಚಿಭಾವನೆಮಾಡದೆ ಲಿಂಗವನ್ನು ಧರಿಸಿದ್ದು ಸ್ನಾನದಿಂದ ಪರಿಶುದ್ಧಳಾಗಿ ಪೂಜೆಯನ್ನು ಮಾಡುತ್ತಿರಬೇಕು. ಲಿಂಗಧಾರಣ, ಲಿಂಗಪೂಜಾದಿಗಳ ವಿಷಯದಲ್ಲಿ ರಜಸ್ವಲಾದಿ ಸೂತಕಗಳಿಂದೊಡಗೂಡಿದ್ದರೂ ಯಾವಜ್ಜೀವ ಕರ್ತವ್ಯವಾದ ಲಿಂಗಧಾರಣವನ್ನೂ, ಲಿಂಗಪೂಜೆಯನ್ನೂ ಬಿಡಲಾಗದೆಂದು ಶ್ರೀ ರೇಣುಕಭಗವತ್ಪಾದರು ಹೇಳಿರುವುದಲ್ಲದೆ ಶಿವಾಗಮಗಳೂ ಸ್ಪಷ್ಟವಾಗಿ ಹೇಳಿರುತ್ತವೆ. ಆದುದರಿಂದ ಸಾಮಾನ್ಯವಾಗಿ ಧರ್ಮಶಾಸ್ತ್ರದಲ್ಲಿ ವಿಹಿತವಾದ ಆಶೌಚನಿರ್ಣಯುವೆಂಬ ಸಾಮಾನ್ಯ ವಾಕ್ಯಗಳು ಮೇಲಣ ವಿಶೇಷವಾಕ್ಯಗಳ ದೃಷ್ಟಿಯಲ್ಲಿ ದುರ್ಬಲಗಳಾಗುತ್ತವೆ. ಮತ್ತು—

"ಯಥಾ ಹ್ಯಗ್ನಿಸಮಾವೇಶಾನ್ನಾಯೋ ಭವತಿ ಕೇವಲಮ್ ।
ತಥೈವ ಮಮ ಸಾನ್ನಿಧ್ಯಾನ್ನ ತೇ ಪ್ರಕೃತಿಮಾನವಾಃ ॥
ತೈಲಯುಕ್ತಂ ತು ಕಾರ್ಪಾಸಂ ಜ್ಯೋತಿಸ್ಪರ್ಶಾತ್ತಥೈವ ತತ್ ।
ಸ್ನೇಹಯುಕ್ತಸ್ಯ ಸದ್ಭಕ್ತೇರ್ಲಿಂಗಸ್ಪರ್ಶೇನ ಲಿಂಗತಾ ॥ "

( ಪದ್ಮಪುರಾಣ, ಶಿವರಹಸ್ಯ )

ಅರ್ಥ :—ಬೆಂಕಿಯಲ್ಲಿ ಕಾಯಿಸಲ್ಪಟ್ಟ ಕಬ್ಬಿಣವು ಕೇವಲ ಕಬ್ಬಿಣದ ಸ್ವಭಾವವನ್ನು ಹೊಂದಿರದೆ ಒಳಹೊರಗೂ ಅಗ್ನಿಮಯವಾಗಿ ತೋರುವಂತೆ ಶಿವಲಿಂಗಸಂಬಂಧವುಳ್ಳ ಮಾನವನು ಕೇವಲ ಪ್ರಾಕೃತ ಪುರುಷನಂತಿರದೆ ಶಿವಸ್ವರೂಪನಾಗಿ ತೋರುವನು. ಎಣ್ಣೆಯಲ್ಲಿ ನೆನೆಸಿದ ಬತ್ತಿಯು ಉರಿಯುತ್ತಿರುವ ಸಮಯದಲ್ಲಿ ಆ ಬತ್ತಿಯು ಒಳಹೊರಗೂ ಜ್ಯೋತಿಸ್ವರೂಪವಾಗಿಯೇ ತೋರುವಂತೆ ಶಿವಭಕ್ತಿಯೆಂಬ ತೈಲದಿಂದೊಡಗೂಡಿದ ಶಿವಭಕ್ತನು ಲಿಂಗಾಗ್ನಿಸಂಬಂಧದಿಂದ ಲಿಂಗಸ್ವರೂಪನಾಗಿ ತೋರುತ್ತಾನಲ್ಲದೆ ಪ್ರಾಕೃತಪುರುಷನಂತೆ ತೋರುವುದಿಲ್ಲ ಎಂದು ಪದ್ಮಪುರಾಣ, ಶಿವರಹಸ್ಯಾದಿ ಅನೇಕ ಗ್ರಂಥಗಳು ಉಲ್ಲೇಖಿಸುತ್ತವೆ. ಇದಲ್ಲದೆ—

ಶೈವಂ ಲಿಂಗಾರ್ಚನಂ ಯಸ್ಯ ಯಸ್ಯ ಚಾಗ್ನಿಪರಿಗ್ರಹಃ ।
ವಾನಪ್ರಸ್ಥಯತೀನಾಂ ತು ಶರೀರೇ ನಾಸ್ತಿ ಸೂತಕಮ್ ॥

(ಪರಾಶರಸ್ಮೃತಿ)

ಅರ್ಥ :—ಯಾವನು ಶಿವಲಿಂಗಾರ್ಚನೆಯಲ್ಲಿ ಆಸಕ್ತನಾಗಿರುವನೋ, ಯಾವನು ಅಗ್ನಿದೇವನನ್ನು ಆರಾಧಿಸುತ್ತ ಆಹಿತಾಗ್ನಿಯೆನಿಸುವನೋ, ಯಾವನು ರಾಜ್ಯಕೋಶಾದಿಗಳನ್ನುಬಿಟ್ಟು ಕಾಡಿನಲ್ಲಿ ವಾಸಮಾಡುತ್ತಿರುವುನೋ, ಯಾವನು ಸರ್ವಸಂಗಪರಿತ್ಯಾಗಮಾಡಿ ಸಂನ್ಯಾಸಿಯಾಗಿರುವನೋ ಅಂಥವರ ಶರೀರದಲ್ಲಿ ಸೂತಕದೋಷಗಳಾವೂ ಇಲ್ಲವೆಂದು ಪರಾಶರಸ್ಮೃತಿಕಾರರು ಹೇಳಿರುತ್ತಾರೆ.

ಆದುದರಿಂದ ವೀರಶೈವದೀಕ್ಷೆಯಂ ಪಡೆದ ಲಿಂಗಧಾರಿಣಿಯಾದ ಸ್ತ್ರೀಯು ರಜಸ್ವಲಾದಿ ಸೂತಕಗಳಿಂದೊಡಗೂಡಿದರೂ ತಮ್ಮ ದೇಹದಲ್ಲಿ ಧರಿಸಲ್ಪಟ್ಟ ಶಿವಲಿಂಗವನ್ನು ತೆಗೆದಿಡಲಾಗದೆಂದೂ, ಪೂಜೆಯನ್ನು ಬಿಡಲಾಗದೆಂದೂ ಸ್ಪಷ್ಟವಾಗುತ್ತದೆ.

ಶಂಕಾ :—ಆದರೆ ಸೂತಕಗಳುಂಟಾದ ಕಾಲದಲ್ಲಿ ಆ ಸೂತಕಗಳ ಅವಧಿಯು ಕಳೆಯುವವರೆಗೂ ದೇಹವು ಅಪವಿತ್ರವಾಗಿರುವುದು. ಇಂತಹ ದೇಹದಲ್ಲಿ ಲಿಂಗವನ್ನು ಧರಿಸುವುದರಿಂದಾಗಲಿ ಪೂಜಿಸುವುದರಿಂದಾಗಲಿ ಆ ಲಿಂಗವು ಅಪವಿತ್ರವಾಗಲೇಬೇಕಾಗುವುದಲ್ಲವೆ?

**ಸಮಾಧಾನ :**—ಹಿಂದೆ ಹೇಳಿದ ವಿಶೇಷವಾಕ್ಯಗಳನ್ನು ಪ್ರಮಾಣವನ್ನಾಗಿ ಅಂಗೀಕರಿಸಿ ದುರ್ಬಲಗಳಾದ ಸಾಮಾನ್ಯವಾಕ್ಯಗಳಿಗೆ ಸಂಕೋಚ ಮಾಡದೆ ಎಲ್ಲಾ ಭಾಗಗಳಲ್ಲಿಯೂ, ಎಲ್ಲ ವಿಷಯಗಳಲ್ಲಿಯೂ ಸೂತಕಗಳನ್ನು ಮಾನಿಸುವುದಾದರೆ ಅದು ಲಿಂಗಧಾರಣ ಸಿದ್ಧಾಂತಕ್ಕೆ ವಿರೋಧವಾಗುತ್ತದೆ. ಮತ್ತು ಯುಕ್ತಿಗೂ ಶಾಸ್ತ್ರಕ್ಕೂ ಸರಿಬೀಳುವುದಿಲ್ಲ–ಹೇಗೆಂದರೆ ಅಶುಚಿಯಾದ ಶರೀರಸಂಬಂಧದಿಂದ ಪಂಚಾವಯವಗಳಿಂದೊಡಗೂಡಿದ ಶಿವಲಿಂಗದಲ್ಲಿ ನೆಲೆಯಾಗಿ ನಿಂತಿರುವ ಚಿತ್ಕಲಾಸ್ವರೂಪನಾದ ಶಿವನೇ ಅಪವಿತ್ರನಾಗುವುನೋ ಅಥವಾ ಆ ಪರಶಿವನ ನಿತ್ಯಾವಾಸಸ್ಥಾನವೆನಿಸಿದ ಶಿವಲಿಂಗವು ಮಾತ್ರ ಅಪವಿತ್ರನಾಗುವುದೋ ಎಂಬ ಎರಡು ವಿಕಲ್ಪಗಳುಂಟಾಗುತ್ತವೆ. ಲಿಂಗದಲ್ಲಿ ನೆಲೆಸಿರುವ ಶಿವಕಲೆಯು ಅಪವಿತ್ರವಾಗುವುದೆಂದು ಹೇಳಲಾಗುವುದಿಲ್ಲ. ಏಕೆಂದರೆ—

"ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಮ್"
"ತಸ್ಮಾತ್ಸರ್ವಗತಶ್ಶಿವಃ"

ಮುಂತಾದ ಶ್ರುತಿಗಳು ಆ ಪರಶಿವನನ್ನು ನಿಷ್ಕಲವಸ್ತುವನ್ನಾಗಿಯೂ, ಪಾಪಲೇಪವಿಲ್ಲದವನನ್ನಾಗಿಯೂ, ಸರ್ವವ್ಯಾಪಕನನ್ನಾಗಿಯೂ, ವರ್ಣಿಸುತ್ತವೆಯಾದುದರಿಂದ ಸೂರ್ಯಕಿರಣಗಳು ಶುಚಿ ಅಶುಚಿಯೆಂಬ ಭೇದವಿಲ್ಲದೆ ಸಕಲ ಪದಾರ್ಥಗಳ ಮೇಲೆ ಬಿದ್ದರೂ ನಿರ್ಲಿಪ್ತವಾಗಿರುವಂತೆಯೂ, ಮುತ್ತಿನಸರದಲ್ಲಿ ದಾರವು ಪೋಣಿಸಲ್ಪಟ್ಟಿರುವಂತೆಯೂ ಎಲ್ಲೆಲ್ಲಿಯೂ ವ್ಯಾಪಿಸಿರುವ ಚಿತ್ಕಲಾಸ್ವರೂಪನಾದ ಪರಶಿವನಿಗೆ ಅಶುಚಿ ಶರೀರಸಂಬಂಧದಿಂದ ಅಶುಚಿತ್ವವನ್ನು ಕಲ್ಪಿಸಲಳವಲ್ಲ. ಮತ್ತು ದೇಹದಲ್ಲಿ ಧರಿಸಿರುವ ಇಷ್ಟಲಿಂಗಕ್ಕೂ ಅದರಲ್ಲಿ ವಾಸವಾಗಿರುವ ಶಿವಕಲೆಗೂ ಅವಿಭಾಜ್ಯಸಂಬಂಧವಿರುವುದರಿಂದ ಶಿವನು ಯಾವಾಗಲೂ ಪವಿತ್ರನಾಗಿರುವಾಗ ಆತನ ನಿತ್ಯಾವಾಸಸ್ಥಾನವಾಗಿರುವ ಲಿಂಗ (ಇಷ್ಟಲಿಂಗ) ಮೂರ್ತಿಯೂ ಪವಿತ್ರವಾಗಿರಲೇಬೇಕಾಗುವುದರಿಂದ ದೇಹದಲ್ಲಿ ಧರಿಸಲ್ಪಟ್ಟ ಇಷ್ಟಲಿಂಗಕ್ಕೆ ಅಶುಚಿತ್ವವನ್ನು ಕಲ್ಪಿಸಲಾಗುವುದಿಲ್ಲ. ಇದರ ಮೇಲೆ ಅಶುಚಿ ಶರೀರಸಂಬಂಧದಿಂದ ಇಷ್ಟಲಿಂಗವು ಅಶುಚಿಯಾಗಲೇಬೇಕೆಂದು ಬಲಾತ್ಕಾರಮಾಡುವುದಾದರೆ ಆಗ ಲಿಂಗವನ್ನು ದೇಹದಲ್ಲಿ ಧರಿಸುವುದಕ್ಕಿಂತ ಮೊದಲು ದೀಕ್ಷಾಸಂಸ್ಕಾರವಾಗ

ಬೇಕಾಗಿದೆಯಷ್ಟೆ. ಆಗ **ಪಂಚಾಮೃತ, ಪಂಚಗವ್ಯಾದಿಗಳಿಂದ** ಶಿಲಾಮಯವಾದ ಆ ಶಿವಲಿಂಗವನ್ನು ಸ್ನಾನಮಾಡಿಸಿ, ಧಾನ್ಯಾಧಿವಾಸದಿಂದಲೂ, ಕ್ಷೀರಾಧಿವಾಸದಿಂದಲೂ, ಷಡಧ್ವಶೋಧನಾದಿಗಳಿಂದಲೂ ಪರಿಶುದ್ಧಿಗೊಳಿಸಿ ಗುರುವು ಆ ಲಿಂಗಮೂರ್ತಿಯಲ್ಲಿ ಶಿವಕಲೆಯನ್ನು ಸ್ಥಾಪಿಸಿರುತ್ತಾನೆ. ಅಂತಹ ಸಂಸ್ಕಾರಗಳೆಲ್ಲವೂ ನಾಶವಾಗದ ಹೊರತು ಆ ಶಿವಲಿಂಗಮೂರ್ತಿಯು ಅಪವಿತ್ರವಾಗಲಾರದು. ಒಂದು ವೇಳೆ ಪೂರ್ವದಲ್ಲಾದ ಸಂಸ್ಕಾರಗಳೂ ಸಹ ನಾಶವಾಗುತ್ತವೆಯೆಂದರೆ ಅದು ಎಲ್ಲರಿಗೂ ಅನಿಷ್ಟದಾಯಕವಾಗಬೇಕಾಗುವುದು. ಹೇಗಂದರೆ – ಓರ್ವನು ಸ್ವರ್ಗಸಿದ್ಧಿಯನ್ನು ಪಡೆಯುವುದಕ್ಕಾಗಿ ತನ್ನ ಸಹಧರ್ಮಚಾರಿಣಿಯಾದ ಪತ್ನಿಯೊಡನೆ ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಮಾಡಬೇಕಾಗುವುದು. ಆ ಯಜ್ಞವು ಕ್ರಿಯಾರೂಪವಾದುದರಿಂದಲೂ, ಸ್ಥೂಲವಾದುದರಿಂದಲೂ, ಕೆಲವು ದಿವಸಗಳೊಳಗೆ ಸಮಾಪ್ತಿಯಾಗುವುದು. ಯಜ್ಞವನ್ನು ಮುಗಿಸಿದೊಡನೆ ಯಜ್ಞಮಾಡಿದ ಯಜಮಾನನು ಸ್ವರ್ಗಕ್ಕೆ ಹೋಗುವುದಿಲ್ಲ. ಎಷ್ಟೋ ವರ್ಷಗಳ ಪರ್ಯಂತ ಇದ್ದೇ ಇರುತ್ತಾನೆ. ಕಾಲಕ್ರಮದಿಂದ ಸ್ಥೂಲಶರೀರವನ್ನು ಬಿಟ್ಟ ಮೇಲೆ ಆ ಶರೀರದಲ್ಲಿರುವ ಯಾಗಸಂಸ್ಕಾರ (ಅಪೂರ್ವತ್ವ)ದಿಂದೊಡಗೂಡಿದ ಆತ್ಮನು ಸ್ವರ್ಗಸಿದ್ಧಿಯನ್ನು ಪಡೆವನೆಂದು ಮೀಮಾಂಸಾಕಾರರು ನಿರ್ಧರಿಸಿರುತ್ತಾರಷ್ಟೆ. ಇಲ್ಲಿ ಯಜ್ಞಮಾಡಿದ ಮೇಲೆ ಅನೇಕ ವರ್ಷಗಳವರೆಗೆ ಬದುಕಿರುವಾಗ ಮಧ್ಯಕಾಲದಲ್ಲಿ **ಜಾತಾಶೌಚ, ಮೃತಾಶೌಚಾದಿ** ಸೂತಕಗಳಲ್ಲಿ ಆವುದಾದರೊಂದು ಸೂತಕವು ಬಂದೊದಗಬಹುದು. ಅಂತಹ ಸೂತಕದೋಷದಿಂದೊಡಗೂಡಿದ ಅಶುಚಿ ಶರೀರಸಂಬಂಧದಿಂದ ಆತ್ಮನಲ್ಲಿ ನೆಲೆಸಿರುವ ಸ್ವರ್ಗಸಿದ್ಧಿಸಾಧಕವಾದ ಯಜ್ಞಜನ್ಯಸಂಸ್ಕಾರವು ನಷ್ಟವಾಗಬೇಕಾಗುತ್ತದೆ. ಆಗ ಬಹುದ್ರವ್ಯ ಶ್ರಮಸಾಧ್ಯವಾದ ಯಜ್ಞವೇ ನಿಷ್ಫಲವಾಗಬೇಕಾಗುವುದು. ಆದುದರಿಂದ ಯಜ್ಞಮಾಡಿದ ಸತೀಪತಿಗಳಿಗೆ ತಾವು ಬದುಕಿರುವವರೆಗೆ ಯಾವ ವಿಧ ಸೂತಕಗಳು ಬಂದೊದಗಿದರೂ ಆ ಯಜ್ಞದ ಸಂಸ್ಕಾರ (ಅಪೂರ್ವ)ವು ಮಾತ್ರ ಸ್ವರ್ಗಫಲವನ್ನೀಯುವವರೆಗೆ ಸ್ಥಿರವಾಗಿ ನಿಂತಿರುತ್ತದೆಂದು ಒಪ್ಪಲೇಬೇಕು. ಅದರಂತೆ ಇಲ್ಲಿ ಗುರುಗಳಿಂದ ಮಾಡಲ್ಪಟ್ಟ ಶಿವದೀಕ್ಷಾಕರ್ಮವು ನಷ್ಟವಾಗಿದ್ದರೂ ಸಂಸ್ಕಾರ (ಅಪೂರ್ವ)ವು ಶಿವಲಿಂಗದಲ್ಲಿ

ಸ್ಥಿರವಾಗಿ ನೆಲೆಸಿರುವುದರಿಂದ ಅಂಗಶಬ್ದವಾಚ್ಯನಾದ ಜೀವಾತ್ಮನಿಗೆ ವಿದೇಹ ಮುಕ್ತಿಯುಂಟಾಗುವವರೆವಿಗೂ ನಿತ್ಯಸಂಕಲ್ಪಿತಗಳಾದ ಲಿಂಗಧಾರಣ, ಲಿಂಗಪೂಜಾ, ಲಿಂಗನಿವೇದನಾದಿ ಉಪಚಾರಗಳಿಂದ ಶಿವಲಿಂಗದಲ್ಲಿ ನೆಲೆಸಿರುವ ಶಿವಕಲೆಯು ಅಂಕುರದಂತೆ ದಿನೇದಿನೇ ಅಭಿವೃದ್ಧಿಹೊಂದುತ್ತಲೇ ಬರುವುದರಿಂದ ಮಧ್ಯಕಾಲದಲ್ಲಿ ಸಂಭವಿಸುವ ರಜಸ್ವಲಾದಿ ದೋಷಗಳಿಂದ ಲಿಂಗದಲ್ಲಿ ನೆಲೆಸಿರುವ ಕಲೆಯು ನಾಶವಾಗದೆ ಸ್ಥಾಯಿಯಾಗಿರುತ್ತದೆಂದು ಒಪ್ಪಲೇಬೇಕು.

"ಸಂಸ್ಕೃತ್ಯ ಗುರುಣಾ ದತ್ತಮಿಷ್ಟಲಿಂಗಮತಂದ್ರಿತಃ
ನಿತ್ಯಂ ಸ್ವವಾಮಹಸ್ತಾಗ್ರೇ ಸಾವಧಾನೇನ ಪೂಜಯೇತ್"

ಅರ್ಥ :—ಗುರುವಿನಿಂದ ಸಂಸ್ಕರಿಸಲ್ಪಟ್ಟ ಲಿಂಗವನ್ನು ಅನವರತವೂ ತನ್ನ ವಾಮಹಸ್ತದಲ್ಲಿಟ್ಟು ಷೋಡಶೋಪಚಾರಗಳಿಂದ ವಿಧ್ಯುಕ್ತವಾಗಿ ಅರ್ಚಿಸಬೇಕೆಂದು ಪೂರ್ವಾಚಾರ್ಯರು ಅನುಜ್ಞೆಯಿತ್ತಿದ್ದಾರೆ.

ಆದುದರಿಂದ ಲಿಂಗಧಾರಿಯಾದ ಮಾನವನು ಸ್ಥೂಲದೇಹವನ್ನು ಬಿಡುವವರೆವಿಗೂ ಆ ಲಿಂಗವನ್ನು ಧರಿಸುತ್ತ ಪ್ರತಿದಿನವೂ ಪೂಜಿಸುತ್ತಿರಬೇಕು ಮಧ್ಯಕಾಲದಲ್ಲಿ ಪಂಚಸೂತಕಗಳಲ್ಲಿ ಯಾವ ಸೂತಕವೊದಗಿದರೂ ನಿತ್ಯಸಂಕಲ್ಪಿತವಾದ ಲಿಂಗಧಾರಣ ಲಿಂಗಪೂಜಾರೂಪವಾದ ಮಹಾವ್ರತವನ್ನು ಯಾವಜ್ಜೀವವೂ ಆಚರಿಸುವದರಲ್ಲಿ ಯಾವ ಬಾಧಕವೂ ಇಲ್ಲ. ಈ ವಿಷಯದಲ್ಲಿ ಅನೇಕ ದೃಷ್ಟಾಂತಗಳು ದೊರೆಯುತ್ತವೆ. ಪೂರ್ವಮೀಮಾಂಸೆಯಲ್ಲಿ ಪೌಂಡರೀಕಾದಿ ಅನಂತಯಾಗಗಳ ಸ್ವರೂಪವು ವಿವರಿಸಲ್ಪಟ್ಟಿರುತ್ತದೆ. ಆ ಯಾಗಗಳಲ್ಲಿ ಕೆಲವು ಯಾಗಗಳು ತಾತ್ಕಾಲಿಕ ಯಾಗಗಳಾಗಿರುತ್ತವೆ. ಕೆಲವು ಯಾಗಗಳು ಅನೇಕ ದಿವಸಗಳವರೆಗೆ ನಡೆಯಬೇಕಾಗಿರುತ್ತವೆ. ಇಂತಹ ಪೌಂಡರೀಕ ವಾಜಪೇಯ ಮುಂತಾದ ದೀರ್ಘಯಾಗಗಳನ್ನು ಮಾಡುವುದಕ್ಕಾಗಿ ಯಜಮಾನನು ಪತ್ನೀಸಹಿತನಾಗಿ ಯಜ್ಞದೀಕ್ಷೆಯನ್ನು ವಹಿಸಿ ಯಜ್ಞವನ್ನು ಪ್ರಾರಂಭಿಸುತ್ತಾನೆ. ಈ ಮಧ್ಯದಲ್ಲಿ ಪತ್ನಿಯು ರಜಸ್ವಲೆಯಾದರೆ ಪ್ರಾರಂಭಿಸಿದ ಆ ಯಜ್ಞವನ್ನು ನಿಲ್ಲಿಸಲಾಗದು. ಸಂಕಲ್ಪಿತವಾದ ಆ ದೀರ್ಘಯಜ್ಞವನ್ನು ನಿರ್ವಹಿಸುವುದರಲ್ಲಿ

ಸೂತಕದೋಷವು ಇಲ್ಲವೆಂದು ಶಾಸ್ತ್ರವು ನಿಯಮಮಾಡಿರುತ್ತದೆ. ಅದರಂತೆ ಶಿವದೀಕ್ಷಾಸಂಸ್ಕಾರವನ್ನು ಪಡೆದ ವೀರಶೈವ ಸ್ತ್ರೀಪುರುಷರು ಯಾವಜ್ಜೀವವೂ ಲಿಂಗಧಾರಣ, ಲಿಂಗಾರಾಧನವೆಂಬ ಮಹಾಯೋಗವನ್ನು ಆರಂಭಿಸಿದನಂತರ ಮಧ್ಯಕಾಲದಲ್ಲಿ ಜಾತಾಶೌಚ ಮೃತಾಶೌಚಾದಿ ಸೂತಕಗಳುಂಟಾದರೂ ಲಿಂಗವನ್ನು ಧರಿಸಿರಬೇಕು. ಸ್ನಾನದಿಂದ ಪರಿಶುದ್ಧರಾಗಿ ಪೂಜಿಸುತ್ತಿರಬೇಕೆಂದು ಸಿದ್ಧವಾಗುತ್ತದೆ. ಈ ವಿಷಯದಲ್ಲಿ ಹಿಂದೆ ಅನೇಕ ಪ್ರಮಾಣವಚನಗಳನ್ನು ತೋರಿಸಿರುತ್ತೇವೆ.

ಇದಲ್ಲದೆ ಧರ್ಮಶಾಸ್ತ್ರದಲ್ಲಿ ಹೆಣ್ಣುಮಕ್ಕಳನ್ನು ಋತುಮತಿಯಾಗುವುದಕ್ಕಿಂತ ಮುಂಚಿತವಾಗಿ ಮದುವೆಮಾಡಬೇಕೆಂದೂ ಋತುಮತಿಯಾದ ಮೇಲೆ ವಿವಾಹಮಾಡುವುದು ದೋಷಾವಹವೆಂದೂ ನಿರ್ಣಯಮಾಡಲ್ಪಟ್ಟಿರುತ್ತದೆ. ಕನ್ಯೆಯ ತಂದೆಯು ಬಡವನಾದುದರಿಂದಲೋ ಇನ್ನಾವದಾದರೂ ಪ್ರತಿಬಂಧಕದಿಂದಲೋ ಹನ್ನೆರಡು ವರ್ಷಗಳು ಕಳೆಯುವವರೆಗೂ ಮಗಳಿಗೆ ಮದುವೆಮಾಡದೆ ಋತುಮತಿಯಾಗುವ ಸಮಯದಲ್ಲಿ ಸರ್ವಾನುಕೂಲಗಳು ದೊರೆತು ವಿವಾಹಮಾಡಲು ಪ್ರಾರಂಭಿಸಿ ಮಾಂಗಲ್ಯಧಾರಣಾದಿ ವಿವಾಹಾಂಗಗಳಾದ ಪೂರ್ವಕರ್ಮಗಳನ್ನು ಮುಗಿಸಿದಬಳಿಕ ಆ ವಧುವು ಋತುಮತಿಯಾದರೆ—

ವಿವಾಹೇ ವಿತತೇ ತಂತ್ರೇ ಹೋಮಕಾಲ ಉಪಸ್ಥಿತೇ ।
ಕನ್ಯಾಮೃತುಮತೀಂ ದೃಷ್ಟ್ವಾ ಕಥಂ ಕುರ್ವಂತಿ ಯಾಜ್ಞಿಕಾಃ ॥

ಎಂದು ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ಯಜ್ಞಕರ್ತನು ಮುಂದೆ ಮಾಡಬೇಕಾದ ವಿವಾಹಾಂಗವಾದ ಹೋಮಾದಿಕರ್ಮಗಳನ್ನು ಮಾಡಬೇಕೋ ಅಥವಾ ಅಲ್ಲಿಗೆ ನಿಲ್ಲಿಸಬೇಕೋ ಎಂಬ ಸಂಶಯವೊದಗಲಾಗಿ ಪ್ರಥಮ ಋತುಮತಿಯಾದ ಕನ್ಯೆಯನ್ನು

"ಹವಿಷ್ಮತೀರಿಮಾ ಆಪೋ ಹವಿಷ್ಮಾನ್ ದೇವೋ ಅಧ್ವರಃ"

ಎಂಬ ಮಂತ್ರವನ್ನುಚ್ಚರಿಸುತ್ತ ಸ್ನಾನಮಾಡಿಸಿ ಶುದ್ಧವಸ್ತ್ರದಿಂದ ಅಲಂಕರಿಸಿ ಅಗ್ನಿದೇವತೆಯ ಮುಂಭಾಗದಲ್ಲಿ ಕುಳ್ಳಿರಿಸಿ

"ಯುಂಜಾನಃ ಪ್ರಥಮಂ ಮನಃ"

ಎಂಬ ಮಂತ್ರವನ್ನುಚ್ಚರಿಸುತ್ತ ಆ ಕನ್ಯೆಯಿಂದ ಎರಡುಸಾರೆ ಆಹುತಿಯನ್ನು ಕೊಡಿಸಬೇಕು ಎಂದು ಭಟ್ಟೀಯ ವಿವಾಹಖಂಡದಲ್ಲಿ ನಿರ್ಣಯ ಮಾಡಲ್ಪಟ್ಟಿರುತ್ತದೆ. ಇದರಿಂದ ವಿವಾಹದೀಕ್ಷೆಯನ್ನು ಹೊಂದಿದವರು ಮಧ್ಯಕಾಲದಲ್ಲಿ ರಜಸ್ವಲಾದ್ಯಾಶೌಚಗಳುಂಟಾದರೂ ಆ ಕರ್ಮವನ್ನು ನಿಲ್ಲಿಸದೆ ಪೂರ್ಣಗೊಳಿಸುವುದರಲ್ಲಿ ಅಪವಿತ್ರತೆಯನ್ನು ಕಲ್ಪಿಸಲಾಗದು.

ಪ್ರಾರಂಭಂ ವರಣಂ ಜಜ್ಞೇ ಸಂಕಲ್ಪೋ ವ್ರತಸತ್ರಯೋಃ ।
ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಗ್ರಹಃ ॥

ಇತ್ಯಾದಿ ಧರ್ಮಶಾಸ್ತ್ರ ವಾಕ್ಯಗಳ ಆಧಾರದಿಂದ ಗೃಹಯಜ್ಞಾದಿಗಳನ್ನು ಮಾಡುವಾಗ ಋತ್ವಿಜರಿಗೆ ವರಣಪ್ರದಾನಮಾಡುವುದೇ ಪ್ರಾರಂಭವು. ಚಾಂದ್ರಾಯಣ, ತೀರ್ಥಯಾತ್ರೆ, ಲಿಂಗಧಾರಣ, ಲಿಂಗಪೂಜಾದಿ ವ್ರತಗಳಲ್ಲಿಯೂ ಪೌಂಡರೀಕಾದಿ ದೀರ್ಘಯಾಗಗಳಲ್ಲಿಯೂ ಸಂಕಲ್ಪವೇ ಪ್ರಾರಂಭವು. ವಿವಾಹಾದಿ ಕರ್ಮಗಳಲ್ಲಿ ನಾಂದೀಮುಖವೇ ಪ್ರಾರಂಭವು. ಶ್ರಾದ್ಧಾದಿಕರ್ಮಗಳಲ್ಲಿ ಪಾಕಪರಿಗ್ರಹವೇ ಪ್ರಾರಂಭವು. ಹೀಗೆ ಆಯಾಯ ಕರ್ಮಗಳನ್ನು ಪ್ರಾರಂಭಿಸಿದ ಬಳಿಕ ಮಧ್ಯಕಾಲದಲ್ಲಿ ಯಾವುದಾದರೂ ಸೂತಕಗಳೊದಗಿದರೂ ತಾವು ಪ್ರಾರಂಭಿಸಿರುವ ಗೃಹಯಜ್ಞ, ಚಾಂದ್ರಾಯಣ, ಲಿಂಗಧಾರಣ, ಲಿಂಗಪೂಜೆ, ಶ್ರಾದ್ಧ ಮುಂತಾದ ಕರ್ಮಗಳನ್ನು ನಿಲ್ಲಿಸಬಾರದು ಮತ್ತು ಪಿತೃಶ್ರಾದ್ಧದಲ್ಲಿ ಬ್ರಾಹ್ಮಣರನ್ನು ಕರೆದು ಕ್ಷಣಪ್ರದಾನ (ವರಣ) ಮಾಡಿದಮೇಲೆ ಆಶೌಚಗಳು ಕೇಳಲ್ಪಟ್ಟರೆ ಕರ್ಮಾರಂಭಮಾಡಿದುದರಿಂದ ಮಧ್ಯಕಾಲದಲ್ಲಿ ಅಂತಹ ಆಶೌಚದೋಷಗಳು ಸಂಭವಿಸುವುದಿಲ್ಲ. ಪ್ರಾರಂಭಿಸಿದ ಶ್ರಾದ್ಧಕರ್ಮವನ್ನು ಸಮಾಪ್ತಿಗೊಳಿಸಬೇಕೆಂದು ಧರ್ಮಶಾಸ್ತ್ರಕಾರರು ಆಶೌಚದೋಷಗಳನ್ನು ನಿರಾಕರಿಸಿರುತ್ತಾರೆ.

ತನುತ್ರಯಗತಾನಾದಿಮಲತ್ರಯಮಸೌ ಗುರುಃ ।
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್ ॥

ಎಂಬ ಲಿಂಗಪುರಾಣ ವಚನಾನುಸಾರವಾಗಿ ಗುರುವು ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಲ್ಲಿ ಸಂಬಂಧಿಸಿರುವ ಕಾರ್ಮಿಕ, ಮಾಯೀಯ, ಆಣವಗಳೆಂಬ ಮೂರು ಮಲಗಳನ್ನು ಕ್ರಿಯಾ ವೇಧಾ

ಮನು ಎಂಬ ಮೂರು ದೀಕ್ಷೆಗಳಿಂದ ನಾಶಗೊಳಿಸಿ ಕ್ರಮದಿಂದ ಇಷ್ಟ, ಪ್ರಾಣ, ಭಾವ ಎಂಬ ಮೂರು ಲಿಂಗಗಳನ್ನು ಧರಿಸುವ ಸಮಯದಲ್ಲಿ

ಯಾವಜ್ಜೀವಮಿದಂ ಲಿಂಗಂ ಶರೀರಾನ್ನವಿಯೋಜಯ ।
ನಿತ್ಯಂ ಸ್ವವಾಮಹಸ್ತಾಗ್ರೇ ಸಾವಧಾನೇನ ಪೂಜಯ ॥

ಎಲೈ ಶಿಷ್ಯನೇ! ಈ ಲಿಂಗವನ್ನು ನಿನ್ನ ಶರೀರವಿರುವವರೆಗೂ ಅಗಲಿರಬೇಡ. ಪ್ರತಿದಿವಸವೂ ಸ್ನಾನದಿಂದ ಪರಿಶುದ್ಧನಾಗಿ ವಾಮಹಸ್ತದಲ್ಲಿರಿಸಿ ವಿಧ್ಯುಕ್ತವಾಗಿ ಪೂಜಿಸೆಂದು ಅನುಜ್ಞೆಯಿತ್ತಿರುವನು.

ಲಿಂಗಧಾರಣಕಂ ನಾಮ ವ್ರತಂ ಮಾಹೇಶ್ವರಾಭಿಧಮ್ ।
ಯಾವಜ್ಜೀವಮಿದಂ ದತ್ತಮಿಷ್ಟಲಿಂಗಂ ಸಮರ್ಚಯೇತ್ ॥
ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ ವಿನ್ಯಸ್ಯ ತಲ್ಲೀನಮನಃಪ್ರಚಾರಃ ।
ಬಾಹ್ಯಕ್ರಿಯಾಸಂಕುಲನಿಸ್ಪೃಹಾತ್ಮಾ ಯಃ ಪೂಜಯತ್ಯಂಗ ಸ ವೀರಶೈವಃ ॥

(ಸ್ಕಾಂದ ಪು.)

ಎಂದು ಸ್ಕಾಂದಾದಿ ಮಹಾಪುರಾಣಗಳು ಇದೇ ಅರ್ಥವನ್ನು ಅನುವಾದ ಮಾಡಿರುತ್ತವೆ. ಮತ್ತು ರೇಣುಕ ಭಗವತ್ಪಾದರು ಲಿಂಗಧಾರಣ ಸ್ಥಲದಲ್ಲಿ ಗುರುವು ಶಿಷ್ಯನನ್ನು ಶಿವದೀಕ್ಷೆಯಿಂದ ಸಂಸ್ಕರಿಸಿ ಆ ಶಿಷ್ಯನ ಪ್ರಾಣವನ್ನು ಲಿಂಗದಲ್ಲಿ ಸಂಯೋಜಿಸಿ ಆ ಲಿಂಗವನ್ನು ಪ್ರಾಣದಲ್ಲಿ ಸಂಯೋಜಿಸಿ ಶಿಷ್ಯನಿಗೆ ಶಿವಲಿಂಗವನ್ನು ಅನುಗ್ರಹಿಸುತ್ತಾ

ಶಿಷ್ಯಸ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ।
ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ ॥
ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ ।
ಪ್ರಾಣವದ್ಧಾರಣೀಯಂ ಹಿ ಪ್ರಾಣಲಿಂಗಮಿದಂ ತವ ॥
ಕದಾಚಿತ್ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ।
ಯದಿ ಪ್ರಮಾದಾತ್ಪತಿತೇ ಲಿಂಗೇ ದೇಹಾನ್ಮಹೀತಲೇ ॥
ಪ್ರಾಣಾನ್ ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ।

ಅರ್ಥ:—ಎಲೈ ಶಿಷ್ಯನೇ! ಈ ಶಿವಲಿಂಗವು ಯಾವಜ್ಜೀವವೂ ನಿನ್ನ ಅಂಗದಿಂದ ವಿಯೋಗವಾಗಬಾರದು. ಈ ಲಿಂಗವನ್ನು ಪ್ರತಿದಿವಸವೂ

ಪೂಜಿಸುತ್ತಿರಬೇಕು. ಪ್ರಮಾದದಿಂದ ಈ ಲಿಂಗವು ನಿನ್ನ ಅಂಗದಿಂದ ಅಗಲುವದಾದರೆ ಪ್ರಾಣವನ್ನು ಬಿಡಲು ಸಿದ್ಧನಾಗಿರು ಎಂದು ಅನುಜ್ಞೆ ಯಿತ್ತಿರುತ್ತಾನೆ. ಆದುದರಿಂದ ಲಿಂಗಧಾರಣ ಲಿಂಗಪೂಜಾರೂಪವಾದೀ ಮಹಾವ್ರತವನ್ನು ದೇಹವಿರುವವರೆಗೆ ಆಚರಿಸಬೇಕಾಗಿರುವುದರಿಂದ ಮಧ್ಯಕಾಲದಲ್ಲಿ ಜಾತಾಶೌಚ ಮೃತಾಶೌಚಾದಿ ಸೂತಕಗಳುಂಟಾದರೂ ಆ ಗುರುಕೃತ ಸಂಸ್ಕಾರವಾಗಲಿ ಲಿಂಗದಲ್ಲಿರುವ ಕಲೆಯಾಗಲಿ ನಾಶವಾಗದೆ ಸ್ಥಾಯಿಯಾಗಿ ನಿಂತಿರುತ್ತವೆಯೆಂದು ತಿಳಿಯಬೇಕು.

ಇವರ ಮೇಲೆ ಅಶುಚಿಶರೀರ ಸಂಬಂಧದಿಂದ ದೇಹದಲ್ಲಿರುವ ಸಂಸ್ಕಾರವು ನಾಶವಾಗಲೇಬೇಕೆಂದು ಹಠಹಿಡಿಯುವುದಾದರೆ ಅದು ಲೋಕಾ ನುಭವಕ್ಕೆ ವಿರೋಧವುಂಟಾಗುತ್ತದೆ. ಹೇಗೆಂದರೆ ಒಬ್ಬನು ಅಪಾರವಾದ ಧನವನ್ನು ವಿನಿಯೋಗಿಸಿ ಗಂಗಾಸ್ನಾನ ಮಾಡುತ್ತಾನೆ. ಮತ್ತೊಬ್ಬನು ಕಾಶೀ ರಾಮೇಶ್ವರಾದಿ ತೀರ್ಥಯಾತ್ರೆಗಳನ್ನು ಮಾಡುತ್ತಾನೆ. ಇನ್ನೊಬ್ಬನು ಪ್ರತಿದಿವಸ ಅತಿಥಿ ಅಭ್ಯಾಗತರಿಗೆ ಅನ್ನವನ್ನು ನೀಡುತ್ತಾನೆ. ಮತ್ತೊಬ್ಬನು ವಾಪೀಕೂಪ ತಟಾಕಾದಿಗಳನ್ನು ಕಟ್ಟಿಸುತ್ತಾನೆ. ಇನ್ನೊಬ್ಬನು ದೇವಾಲಯ ವನ್ನು ಕಟ್ಟಿಸಿ ದೇವತಾಪ್ರತಿಷ್ಠೆಮಾಡಿಸುತ್ತಾನೆ. ಇಂತಹ ಪುಣ್ಯ ಕರ್ಮಾಚ ರಣೆಗಳಿಂದ ಅವರವರ ಕರ್ಮಗಳಿಗನುಕೂಲವಾದ ಸಂಸ್ಕಾರ (ಅಪೂರ್ವ)ವು ಆತ್ಮನಲ್ಲಿದ್ದು ದೇಹಾನಂತರ ಫಲಕೊಡುತ್ತದೆಂದು ಸರ್ವಾನುಭವವಿರು ವುದಲ್ಲದೆ ಪುಣ್ಯಕರ್ಮಗಳನ್ನು ಮಾಡಿದವನು ಎಷ್ಟೋ ವರ್ಷ ಬದುಕಿರು ವನು. ಈ ಮಧ್ಯೇ ಜಾತಾಶೌಚ ಮೃತಾಶೌಚಾದಿ ಸೂತಕಗಳು ಬಂದೇ ಬರುವುವು. ಆಗ ಇಂತಹ ಸೂತಕಗಳಿಂದ ಅಪವಿತ್ರವಾದಮೇಲೆ ಆತ್ಮನಲ್ಲಿ ನಿಂತಿರುವ ಆ ಪುಣ್ಯಕರ್ಮಜನ್ಯವಾದ ಸಂಸ್ಕಾರವು ನಾಶವಾಗುತ್ತದೆಂದ ಮೇಲೆ ಅಂತಹ ಪುಣ್ಯಕರ್ಮಗಳಿಗೆ ಫಲವೇ ಇಲ್ಲದಂತಾಗಿ ಯಾರಿಗೂ ಅಂತಹ ಪುಣ್ಯಕರ್ಮಗಳನ್ನು ಮಾಡುವುದರಲ್ಲಿ ಪ್ರವೃತ್ತಿಯು ಹುಟ್ಟದಂತಾ ಗುವುದು ಮತ್ತು

"ಸ್ವರ್ಗಕಾಮೋ ಯಜೇತ"

ಇತ್ಯಾದಿ ಕರ್ಮಫಲಬೋಧಕಗಳಾದ ವೇದಾಗಮ ಪುರಾಣಗಳೆಲ್ಲ ವ್ಯರ್ಥವಾಗಬೇಕಾಗುವುವು. ಇದಲ್ಲದೆ

ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ।
ತಸ್ಮಾತ್ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್ ॥

(ಸರ್ವದರ್ಶನ ಸಂಗ್ರಹ)

ಅರ್ಥ :—ಯಾವುದಾದರೊಂದು ಕಾಲದಲ್ಲಿ ಬೆಂಕಿಯಲ್ಲಿ ಸುಟ್ಟು ಬೂದಿಯಾಗುವೀದೇಹವು ಪುನಃ ಹುಟ್ಟುವುದಿಲ್ಲ. ಈ ದೇಹವಿರುವುದರೊಳಗಾಗಿ ಎಲ್ಲ ಸೌಖ್ಯವನ್ನು ಪಡೆಯಬೇಕಲ್ಲದೆ ದೇಹವು ಕಳೆದುಹೋದ ಮೇಲೆ ಯಾವ ಸುಖವನ್ನೂ ಪಡೆಯುವದಕ್ಕಾಗುವುದಿಲ್ಲ. ಆದುದರಿಂದ ದೇಹವಿರುವುದರೊಳಗಾಗಿ ಸಾಲಮಾಡಿಯಾದರೂ ಮೃಷ್ಟಾನ್ನಭೋಜನ ಮಾಡುತ್ತ ಸುಖದಿಂದಿರಬೇಕು ಎಂಬ ಚಾರ್ವಾಕೋಕ್ತಿ ಪ್ರಕಾರವಾಗಿ ಎಲ್ಲರೂ ನಾಸ್ತಿಕರಾಗಬೇಕಾಗುವುದು.

" ಶೈವಂ ಲಿಂಗಾರ್ಚನಂ ಯಸ್ಯ...............ಶರೀರೇ
ನಾಸ್ತಿ ಸೂತಕಮ್ "

ಎಂಬ ಪರಾಶರ ಸ್ಮೃತಿಯ ಆಧಾರದಿಂದ ಸೂತಕದೋಷದಿಂದ ಆತ್ಮನಲ್ಲಿ ನಿಂತಿರುವ ಅಪೂರ್ವತ್ವವು, ಎಂದೂ ನಷ್ಟವಾಗದಿರುವಂತೆ ದೀಕ್ಷಿತವಾದ ಶರೀರದಲ್ಲಿ ಧರಿಸಲ್ಪಟ್ಟಿರುವ ಶಿವಲಿಂಗದಲ್ಲಿ ನೆಲೆಸಿರುವ ಸಂಸ್ಕಾರವು ಸೂತಕಸ್ಪರ್ಶದಿಂದ ನಾಶವಾಗದೆ ಯಾವಾಗಲೂ ಸ್ಥಿರಗೊಂಡಿರುವುದೆಂದು ಒಪ್ಪಲೇಬೇಕು. ಇದಲ್ಲದೆ,

" ಚಂಡಾಲವಾಟಿಕಾಯಾಂ ವಾ ಮತ್ಪ್ರಸಾದಂ ಸುಪಾವನಮ್ "

ಎಂಬ ಪ್ರಮಾಣಾನುಸಾರವಾಗಿ ಭುವನೇಶ್ವರೀ ಪುರುಷೋತ್ತಮ ಮುಂತಾದ ಸ್ಥಳಗಳಲ್ಲಿ ಪಾಕವು ಚಂಡಾಲರಿಂದ ಮಾಡಲ್ಪಟ್ಟಿದ್ದರೂ ದೇವರಿಗೆ ನಿವೇದನಮಾಡುವುದರಿಂದ ಪರಿಶುದ್ಧವಾಗುವುದೆಂಬ ದೃಢಭಾವನೆಯಿಂದ ಆ ಪ್ರಸಾದವನ್ನು ವೈದಿಕಜನವು ಪರಿಗ್ರಹಮಾಡುತ್ತದೆಂದು ಹೇಳುವಲ್ಲಿ ಶಿವಲಿಂಗವು ಯಾವ ದೋಷಲೇಶವೂ ಇಲ್ಲದೆ ನಿತ್ಯಶುದ್ಧನಾದ ಪರಶಿವನಿಂದ ಅಧಿಷ್ಠಿತವಾದುದರಿಂದ ಶರೀರವು ಸೂತಕದಿಂದ ಅಶುಚಿ

ಯಾದರೂ ಶಿವಲಿಂಗವು ಅಶುಚಿಯಾಗುವುದಿಲ್ಲ. ಸಂಸ್ಕಾರವೂ ನಾಶವಾಗುವುದಿಲ್ಲವೆಂದು ತಿಳಿಯತಕ್ಕದು.

**ಶಂಕಾ :**—ಹಾಗಾದರೆ ದೇವಾಲಯದಲ್ಲಿ ಪ್ರತಿಷ್ಠಿತವಾದ ಶಿವಲಿಂಗವು ಸೂತಕ ದೋಷದಿಂದೊಡಗೂಡಿದ ಪುರುಷನ ಸ್ಪರ್ಶದಿಂದ ಅಶುಚಿಯಾಗದಿರಲಿ. ಅಶುಚಿಯಾದ ಪುರುಷನು ಆ ಲಿಂಗವನ್ನು ಪೂಜಿಸುವುದರಿಂದ ಪ್ರತಿಷ್ಠಾಕಾಲದಲ್ಲಿ ಆಚಾರ್ಯನಿಂದ ಮಾಡಲ್ಪಟ್ಟ ಸಂಸ್ಕಾರವು ನಾಶವಾಗದಪಕ್ಷದಲ್ಲಿ ಆ ಲಿಂಗಕ್ಕೆ ಸಂಪ್ರೋಕ್ಷಣವನ್ನೇಕೆ ಮಾಡಬೇಕು?

**ಸಮಾಧಾನ :**—ದೇಹದಲ್ಲಿ ಧರಿಸಲ್ಪಟ್ಟಿರುವ ಶಿವಲಿಂಗಕ್ಕೂ ಭೂಮಿಯಲ್ಲಿ ಪ್ರತಿಷ್ಠಿತವಾದ ಶಿವಲಿಂಗಕ್ಕೂ ತಾರತಮ್ಯವುಂಟು. ಭೂಮಿ ಪ್ರತಿಷ್ಠಿತವಾದ ಲಿಂಗವು **ಸ್ಥಾವರಲಿಂಗ**ವೆಂಬ ಹೆಸರನ್ನು ಪಡೆದಿದೆ. ಮತ್ತು ಭೂಮಿಯಲ್ಲಿ ಪ್ರತಿಷ್ಠಿತವಾದ ಸ್ಥಾವರಲಿಂಗವನ್ನು ಪ್ರತಿದಿವಸವೂ ಒಬ್ಬನೇ ಪೂಜಿಸಬೇಕೆಂಬ ನಿಯಮವೇನೂ ಇಲ್ಲ. ಮೊದಲು ಪೂಜಿಸುವವನು ಮೃತನಾಗಿದ್ದರೂ ಅಥವಾ ಜಾತಾಶೌಚಾದಿ ಸೂತಕಗಳಿಂದ ಅಶುಚಿಯಾಗಿದ್ದರೂ ಮತ್ತೊಬ್ಬನು ಆ ಲಿಂಗವನ್ನು ಪೂಜಿಸುವನು. ಆದುದರಿಂದ ಅದು ಅಶುಚಿತ್ವವನ್ನು ಸಹಿಸಿಕೊಳ್ಳುತ್ತದೆ. ಆದರೆ ದೇಹದಲ್ಲಿ ಧರಿಸಲ್ಪಟ್ಟ **ಇಷ್ಟಲಿಂಗ**ವನ್ನು ಮಾತ್ರ ಧರಿಸಿರುವವನೇ ಯಾವಜ್ಜೀವವೂ ಪೂಜಿಸಬೇಕು. ಮತ್ತು ಅವನ ಸಂಗಡಲೇ ಆ ಲಿಂಗವು ಮರೆಯಾಗಬೇಕು. ಅವನಿರುವವರೆಗೆ ಅವನ ದೇಹದಿಂದ ಆ ಲಿಂಗವನ್ನು ಒಂದು ನಿಮಿಷವೂ ತೆಗೆದಿಡಬಾರದು. ಈ ಇಷ್ಟಲಿಂಗವನ್ನು ಪೂಜಿಸುವ ಅಧಿಕಾರವು ಮತ್ತೊಬ್ಬನಿಗಿಲ್ಲ. ಹೀಗೆ ಮಹಾವ್ರತವನ್ನು ಪಾಲಿಸುತ್ತಿರುವಲ್ಲಿ ಮಧ್ಯಕಾಲದಲ್ಲಿ ರಜಸ್ವಲಾದ್ಯಾಶೌಚಗಳು ಪ್ರಾಪ್ತವಾದರೂ

ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋಹರಮ್ ।
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥

ಎಂಬ ಪ್ರಮಾಣಾನುಸಾರವಾಗಿ ತನ್ನ ದೇಹದಲ್ಲಿರುವ ಲಿಂಗವನ್ನು ತಾನೇ ಪೂಜಿಸಬೇಕಾಗಿರುವುದರಿಂದ ಲಿಂಗಾಂಗಿಯು ಲಿಂಗಪೂಜೆಯಲ್ಲಿಯೂ, ಲಿಂಗಧಾರಣೆಯಲ್ಲಿಯೂ, ಯಾವಾಗಲೂ ಶುದ್ಧನಾಗಿರುತ್ತಾನೆ. ದೀಕ್ಷಾ

ಕಾಲದಲ್ಲಿ ಗುರುಕೃತ ಸಂಸ್ಕಾರವನ್ನು ಅಂತಹ ಆಶೌಚಗಳು ನಾಶಗೊಳಿಸ ಲಾರವು. ಆದುದರಿಂದ ಅಶುಚಿ ಪುರುಷನ ಸ್ಪರ್ಶದಿಂದ ಸ್ಥಾವರಲಿಂಗವು ಪ್ರೋಕ್ಷಣಾದಿಕರ್ಮಗಳಿಗೆ ಅರ್ಹವಾಗುವಂತೆ ಇಷ್ಟಲಿಂಗವು ಅರ್ಹವಾ ಗುವುದಿಲ್ಲ.

ಶಂಕಾ :—ಒಂದುಪಕ್ಷ ಆಶೌಚಕಾಲದಲ್ಲಿಯೂ ಲಿಂಗಧಾರಣ ಲಿಂಗಪೂಜೆಗಳನ್ನು ಮಾಡಬಹುದೆಂದು ಪ್ರಮಾಣಯುಕ್ತಿಗಳಿಂದ ಒಪ್ಪಿದರೂ

ಶೈವಾನ್ ಪಾಶುಪತಾಃಶ್ಚೈವ ಲಿಂಗಿನೋ ವ್ರತಿನಸ್ತಥಾ ॥
ಬಿಡಾಲವ್ರತಿನಶ್ಚೈವ ಪಾಷಂಡಾನ್ ಪರಿವರ್ಜಯೇತ್ ॥
ಪಾಷಂಡಂ ಪತಿತಂ ವ್ರಾತ್ಯಂ ಚಕ್ರಿಣಂ ಲಿಂಗಧಾರಿಣಮ್ ।
ತಥಾ ದೇವಲಕಂ ದೃಷ್ಟ್ವಾ ಸವಾಸಾ ಜಲಮಾವಿಶೇತ್ ॥

ಅರ್ಥ :—ಶೈವಸಂಪ್ರದಾಯದವರನ್ನೂ, ಪಾಶುಪತರನ್ನೂ, ಲಿಂಗ ಧಾರಿಗಳನ್ನೂ, ಬಿಡಾಲವ್ರತಿಗಳನ್ನೂ, ಪಾಷಂಡಿಗಳನ್ನೂ, ಪತಿತರನ್ನೂ, ವ್ರಾತ್ಯರನ್ನೂ, ಚಕ್ರಾಂಕಿತರನ್ನೂ, ದೇವಲಕರನ್ನೂ ನೋಡಲಾಗದು. ಹಾಗೆ ನೋಡಿದರೆ ಬಟ್ಟೆಸಹಿತ ಸ್ನಾನಮಾಡತಕ್ಕದ್ದು—ಎಂದು ಪ್ರಮಾಣ ವಾಕ್ಯಗಳಿರುವುದರಿಂದ ಇಂತಹ ಲಿಂಗವನ್ನು ಧರಿಸುವುದು ಉಚಿತವಲ್ಲ.

ಸಮಾಧಾನ :—ಇಂತಹ ಆಕ್ಷೇಪವು ಆಪಾತವಾಗಿ ಸಮಂಜಸವಾಗಿ ಕಂಡರೂ ವಿವೇಕದೃಷ್ಟಿಯಿಂದ ಸಮಂಜಸವಾಗಲಾರದು. ಏಕೆಂದರೆ

ಯಶ್ಚೋಭಯಸ್ಸಮೋ ದೋಷಃ ಪರಿಹಾರಸ್ತಯೋಸ್ಸಮಃ ।
ನೈಕಃಪರ್ಯನುಯೋಕ್ತವ್ಯಸ್ತಾದೃಗರ್ಥವಿಚಾರಣಾ ॥

ಎಂಬ ಪ್ರಮಾಣದಿಂದ ಮೇಲಣವಾಕ್ಯಗಳು ಲಿಂಗಧಾರಿಗಳನ್ನು ಮಾತ್ರ ನಿಷೇಧಿಸಿರುವದಿಲ್ಲ. ಶೈವವೈಷ್ಣವಾದಿಗಳನ್ನೂ ಸಹ ನಿಷೇಧಿಸಿರು ತ್ತವೆ. ಆದುದರಿಂದ ಈ ವಾಕ್ಯಗಳು ಲಿಂಗಧಾರಿಗಳಂತೆ ವೈಷ್ಣವಾದಿ ಸಕಲ ವೈದಿಕಮತಗಳಿಗೂ ಅನಿಷ್ಟದಾಯಕವಾಗಿರುವುದರಿಂದ ಕೇವಲ ಲಿಂಗಧಾರಿಗಳಮೇಲೆ ದೋಷವನ್ನು ಹೇರುವುದು ಯುಕ್ತವಲ್ಲ. ಆದುದರಿಂದ ಈ ವಾಕ್ಯಗಳನ್ನು ವೇದವಿರೋಧಿಗಳಾದ ಯಾರೋ ನಾಸ್ತಿಕರು ಕಲ್ಪಿಸಿರು ವುದರಿಂದ ಇವು ಪ್ರಮಾಣಗಳಲ್ಲವು. ಒಂದುಪಕ್ಷ ಪ್ರಮಾಣವೆಂದು

ತಿಳಿಯುವುದಾದರೆ ಆ ಶ್ಲೋಕದಲ್ಲಿರುವ ಲಿಂಗಧಾರಿಪದವನ್ನು ತಪ್ತಲಿಂಗ ಧಾರಿಗಳಲ್ಲಿ ಅನ್ವಯಿಸಬೇಕಲ್ಲದೆ ಇಷ್ಟಲಿಂಗಧಾರಿಗಳಲ್ಲಿ ಅನ್ವಯಿಸಲವ ಕಾಶವಿಲ್ಲ. ಅಥವಾ ಆ ಶ್ಲೋಕಗಳಲ್ಲಿ ಶೈವ, ಪಾಶುಪತ, ಲಿಂಗಿಯೆಂದು ಪ್ರತ್ಯೇಕ ಪ್ರತ್ಯೇಕವಾಗಿ ಅರ್ಥಕೊಡುವ ಸಮುಚ್ಚಯದ್ಯೋತಕವಾದ ಚಕಾರವಿರುವುದರಿಂದ ಲಿಂಗಿ ಎಂಬ ಪದಕ್ಕೆ ಶೈವ, ಪಾಶುಪತ ಪದಗಳನ್ನು ವಿಶೇಷಣಗಳನ್ನಾಗಿಮಾಡಲು ಸಾಧ್ಯವಿಲ್ಲ. ಮತ್ತು ಈ ಶ್ಲೋಕದಲ್ಲಿ ಪಾಷಂಡ ಎಂಬ ಪದವು ಸಹ ಸೇರಿಕೊಂಡಿರುತ್ತದೆ. ಆ ಪಾಷಂಡ ಪದವಾದರೋ "ಪಾಷಂಡಾಸ್ಸರ್ವಲಿಂಗಿನಃ" ಎಂದು ಅಮರಕೋಶದಲ್ಲಿ ಹೇಳಿರುವಂತೆ ತಿರ್ಯಕ್ಪುಂಡ್ರ ಊರ್ಧ್ವಪುಂಡ್ರಾದಿ ಸರ್ವಚಿನ್ಹೆಗಳನ್ನು ಧರಿಸುವರೇ ಸರ್ವಲಿಂಗಿಗಳೆಂದು ಹೇಳಿಸಿಕೊಳ್ಳುವುದರಿಂದ ಅಂತಹ ಸರ್ವಲಿಂಗಿಗಳೇ ಪಾಷಂಡಿಗಳೆನಿಸಬೇಕಾಗುವುದು. ಶಿವಲಿಂಗಧಾರಿಗಳಲ್ಲಿ ಮಾತ್ರ ಅಂತಹ ಮಿಶ್ರವಾದ ಚಿಹ್ನೆಗಳಾವುವೂ ಕಂಡುಬರುವುದಿಲ್ಲ.

ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ।
ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ ॥

ಮುಂತಾದ ಶ್ರುತಿಗಳಲ್ಲಿ ಹೇಳಿದಂತೆ ಯಾವಾಗಲೂ ಪಾತಿವ್ರತ್ಯ ಸ್ವಭಾವದಿಂದ ಏಕದೇವೋಪಾಸಕರಾದುದರಿಂದ ಲಿಂಗಾಂಗಿಗಳಲ್ಲಿ ಪಾಷಂಡ ಪದವಾಚ್ಯವಾದ ಸರ್ವಲಿಂಗಿಪದದ ಅರ್ಥವು ಅನ್ವಯಿಸುವುದಿಲ್ಲ. ಇದಲ್ಲದೆ ನಮ್ಮ ಭಾರತೀಯರ ಇತಿಹಾಸಗಳಲ್ಲಿ ಅಗ್ರಸ್ಥಾನವನ್ನು ಪಡೆದ ಮಹಾಭಾರತವು "ಭಾರತಃ ಪಂಚಮೋ ವೇದಃ" ಎಂಬ ಪ್ರಮಾಣ ದಂತೆ ವೇದದಂತೆ ಪರಮಮಾನ್ಯವಾದ ಗ್ರಂಥವಾಗಿದೆಯಷ್ಟೆ. ಈ ಗ್ರಂಥದಲ್ಲಿ ಶಿವಲಿಂಗಧಾರಿಗಳ ಆಧಿಕ್ಯವನ್ನು ಎಷ್ಟರಮಟ್ಟಿಗೆ ವರ್ಣಿಸಿರುವುದೆಂಬುದನ್ನು ಇಲ್ಲಿ ಸ್ವಲ್ಪ ವಿವರಿಸುವುದವಶ್ಯವಾಗಿದೆ.

ಕಿಮಾಹುರ್ಭರತಶ್ರೇಷ್ಠ ವಿಪ್ರಾಃ ಪಾತ್ರಂ ಸನಾತನಮ್ ।
ಲಿಂಗಿನಂ ಬ್ರಾಹ್ಮಣಂ ಚೈವ ಬ್ರಾಹ್ಮಣಂ ಚಾಪ್ಯಲಿಂಗಿನಮ್ ॥
(ಅಧ್ಯಾ. ೨೨- ಶ್ಲೋ ೧೮೨)

ಎಂದು ಭಾರತದ ಅನುಶಾಸನಪರ್ವದಲ್ಲಿ ಧರ್ಮರಾಜನಿಗೂ ಭೀಷ್ಮ ನಿಗೂ ಪ್ರಶ್ನೋತ್ತರಗಳು ನಡೆಯುವ ಸಮಯದಲ್ಲಿ ಧರ್ಮರಾಜನು ಎಲ್ಲೈ

ಭರತಕುಲದೀಪಕನಾದ ಭೀಷ್ಮನೇ, ಲೋಕದಲ್ಲಿ ಲಿಂಗಿಬ್ರಾಹ್ಮಣರೆಂತಲೂ ಅಲಿಂಗಿ ಬ್ರಾಹ್ಮಣರೆಂತಲೂ ಎರಡುಪ್ರಕಾರ ಬ್ರಾಹ್ಮಣರಿರುತ್ತಾರೆ. ಅವರಲ್ಲಿ ಯಾವ ಬ್ರಾಹ್ಮಣನಿಗೆ ದಾನಕೊಡಬೇಕೆಂದು ಪ್ರಶ್ನೆಮಾಡಲಾಗಿ ಭೀಷ್ಮನು

ಸದ್ವೃತ್ತಿಮಪಿ ವಿಜ್ಞಾಯ ಲಿಂಗಿನೇ ಚೇತರಾಯ ಚ ।
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥

ಅರ್ಥ :—ಅಯ್ಯಾ ಧರ್ಮರಾಜನೇ, ತಪಸ್ವಿಗಳು ಅಧ್ಯಯನ ಸಂಪನ್ನರೂ ಕ್ರಿಯಾನಿಷ್ಠರೂ ಆಗಿರುವ ಲಿಂಗಿಗಳೇ ಆಗಲಿ ಅಲಿಂಗಿಗಳೇ ಆಗಲಿ ಉಭಯರೂ ದಾನಪಾತ್ರರೆಂದು ಉತ್ತರಕೊಟ್ಟಿರುತ್ತಾನೆ.

ಯಜಮಾನಕೃತಂ ಪಾಪಮನ್ನಮಾಶ್ರಿತ್ಯ ತಿಷ್ಠತಿ
ಅನ್ನಂ ನ ಪ್ರತಿಗೃಹ್ಣೀಯಾತ್ ಪ್ರಾಣೈಃ ಕಂಠಗತೈರಪಿ ॥

ಅರ್ಥ :—ಯಜಮಾನನು ಮಾಡಿದ ಪಾಪವು ಆತನ ಅನ್ನವನ್ನಾಶ್ರಯಿಸಿರುವದರಿಂದ ಎಂತಹ ವಿಪತ್ತುಗಳೊದಗಿದರೂ ಪರಾನ್ನವನ್ನು ಭುಂಜಿಸಬಾರದು ಎಂದು ಸಾಮಾನ್ಯವಾಗಿ ಅನ್ನಗ್ರಹಣವು ನಿಷೇಧಿಸಲ್ಪಟ್ಟಿದೆಯಲ್ಲದೆ—

ನಾಶ್ರೋತ್ರಿಯಹುತೇ ಯಜ್ಞೇ ಗ್ರಾಮಯಾಜಹುತೇ ತಥಾ ।
ಸ್ತ್ರಿಯಾ ಕ್ಲೀಬೇನ ಚ ಹುತೇ ಭುಂಜೀತ ಬ್ರಾಹ್ಮಣಃ ಕ್ವಚಿತ್ ॥
ಉಗ್ರಾನ್ನಂ ಸೂತಕಾನ್ನಂ ಚ ಪರ್ಯಾಚಾಂತಮನಿರ್ದಶಮ್ ।
ಅನರ್ಚಿತಂ ವೃಥಾ ಮಾಂ ಸಮವೀರಾಯಶ್ಚ ಯೋಷಿತಃ ॥
ದ್ವಿಷದನ್ನಂ ನ ಗೃಹ್ಯಾನ್ನಮವಧೂತಮುಪಕ್ರುತಮ್ ।
ಪಿಶುನಾನೃತಯೋಶ್ಚಾನ್ನಂ ಕೃತವಿಕ್ರಯಿಣಸ್ತಥಾ ॥
ಗಣಾನ್ನಂ ಗಣಿಕಾನ್ನಂ ಚ ವಿದುಷಾಂ ಚ ವಿಗರ್ಹಿತಮ್ ।
ವಿಷ್ಠಾವಾರ್ಧುಷಿಕಸ್ಯಾನ್ನಂ ಶಾಸ್ತ್ರವಿಕ್ರಯಿಣೋ ಮಲಮ್ ॥

ಅರ್ಥ :—ಅವೈದಿಕರು, ಸ್ತ್ರೀಯರು, ನಪುಂಸಕರು, ಕ್ರೂರಸ್ವಭಾವದವರು, ಮುಟ್ಟಾದವರು, ಶತ್ರುಗಳು, ತಿರಸ್ಕೃತರು, ಚಾಡಿಕೋರರು, ಸುಳ್ಳುಗಾರರು, ಅನ್ನವಿಕ್ರಯಮಾಡುವರು, ವೇಶ್ಯೆಯರು, ಪಂಡಿತನಿಂದಕರು, ಕೃಷೀವಲರು, ಶಾಸ್ತ್ರವಿಕ್ರಯಮಾಡುವವರು, ಬಡ್ಡಿಯಿಂದ ಜೀವಿ

ಸುವವರು ಮುಂತಾದವರ ಅನ್ನವನ್ನು ಸ್ವೀಕರಿಸಬಾರದೆಂದು ಧರ್ಮ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ.

ಇಂತಹ ನಿಷೇಧಪಂಕ್ತಿಯಲ್ಲಿಯೂ ಶಿವಲಿಂಗಧಾರಿಗಳು ಸೇರಿಸ ಲ್ಪಟ್ಟಿಲ್ಲ. ಮತ್ತು ಶ್ರುತಿಗಳಿಗೂ, ಸ್ಮೃತಿಗಳಿಗೂ, ಒಂದಕ್ಕೊಂದು ವಿರೋಧ ವುಂಟಾದಲ್ಲಿ ವಿರೋಧಾಧಿಕರಣನ್ಯಾಯುವನ್ನವಲಂಬಿಸಿ ಶ್ರುತಿಗಳೇ ಪ್ರಬಲವೆನಿಸಿ ಸ್ಮೃತಿಗಳು ದುರ್ಬಲಗಳಾಗುತ್ತವೆ ಎಂದು ಮೀಮಾಂಸಾ ಕಾರರು ನಿರ್ಣಯಿಸಿರುವಂತೆ " **ಸರ್ವಲಿಂಗಂ ಸ್ಥಾಪಯತಿ** " " **ಓಂ ನಮೋ ಬ್ರಹ್ಮಣೇ ಧಾರಣಮ್** " ಮುಂತಾದ ಅನೇಕ ಶ್ರುತಿವಾಕ್ಯ ಗಳಿಂದ ಸಿದ್ಧವಾದ ಲಿಂಗಧಾರಣವನ್ನು ದುರ್ಬಲಗಳಾದ ಸ್ಮೃತಿವಾಕ್ಯ ಗಳಿಂದ ನಿಷೇಧಮಾಡಲು ಸಾಧ್ಯವಿಲ್ಲದುದರಿಂದ ಸರ್ವಪ್ರಕಾರವಾಗಿ ಲಿಂಗಧಾರಿಗಳು ನಿರ್ದುಷ್ಟರೆಂದು ತಿಳಿಯತಕ್ಕದು.

ಇದರಮೇಲೆ " **ತುಷ್ಯತು ದುರ್ಜನಃ** " ಎಂಬ ನ್ಯಾಯಾನುಸಾರ ವಾಗಿ ಹಿಂದೆ ಹೇಳಿದ " **ಶೈವಾನ್ ಪಾಶುಪತಾಂಶ್ಚೈವ........ಚಕ್ರಿಣಂ ಲಿಂಗಧಾರಿಣಂ ನಾಧಿಕಾರೀ ಸ ವಿಜ್ಞೇಯಃ ಶ್ರೌತಸ್ಮಾರ್ತಾದಿ ಕರ್ಮಸು** " ಎಂಬ ಸ್ಮೃತಿವಾಕ್ಯಗಳನ್ನು ಒಪ್ಪಿಕೊಂಡರೂ ಈ ಶ್ಲೋಕದಲ್ಲಿ ಬಂದಿರುವ " **ಚಕ್ರಿಣಂ** " " **ಲಿಂಗಧಾರಿಣಂ** " ಎಂಬ ಪದಗಳಿಗೆ ಚಕ್ರಾಂ ಕನವುಳ್ಳವರಾಗಿ ದುಷ್ಕರ್ಮ ದುಸ್ಸಂಗಾದಿಗಳಿಂದ ಶ್ರುತಿಸಿದ್ಧವಾದ ಚಕ್ರಾಂಕನವನ್ನು ಬಿಟ್ಟು ಲಿಂಗವನ್ನು ಯಾರು ಧರಿಸುವುರೋ, ಮುಕ್ತಿ ಪ್ರದವೂ ಶ್ರುತಿಪ್ರತಿಪಾದ್ಯವೂ ಆದ ಆ ಲಿಂಗವನ್ನು ಬಿಟ್ಟು ಯಾರು ಚಕ್ರಾಂಕನವನ್ನು ಮಾಡಿಕೊಳ್ಳುವುರೋ ಅಂತಹ ಅಧೀರಸ್ವಭಾವ ವುಳ್ಳವರು ಶ್ರುತಿಸ್ಮೃತ್ಯಾದಿಕರ್ಮಗಳಿಗೆ ಬಾಹ್ಯರಾಗುವರೆಂದು ಅರ್ಥ ಮಾಡಬೇಕು. ಏಕೆಂದರೆ ಒಂದು ಮತವನ್ನು ಬಿಟ್ಟು ಮತ್ತೊಂದು ಮತವನ್ನು ಪ್ರವೇಶಿಸುವುದರಿಂದ ಪಾಪಾತ್ಮರಾಗುತ್ತಾರೆ. ಈ ವಿಷಯದಲ್ಲಿ

**" ಯೋ ವೈ ಸ್ವಾಂ ದೇವತಾಮತಿಯಜತೇ**
**ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ**
**ಪ್ರಾಪ್ನೋತಿ ಪಾಪೀಯಾನ್ ಭವತಿ "**

(ಶ್ರುತಿ)

**ಅನ್ವಯಾರ್ಥ** :—ಯಃ—ಯಾವ ಅಧಿಕಾರಿಯಾದ ಪುರುಷನು ಸ್ವಾಂದೇವತಾಂ—ತನ್ನ ಮತಾಚಾರ್ಯರಿಂದ ಉಪದಿಷ್ಟವಾದ ದೇವರನ್ನು ಅತಿಯಜತೇ–ಅತಿಕ್ರಮಿಸುವನೋ, ಪ್ರಸ್ವಾಯೈ–ತಾನು ಪೂಜಿಸುತ್ತಿರುವ, ದೇವತಾಯೈ – ದೇವರಿಂದ, ಚ್ಯವತೇ – ಭ್ರಷ್ಟನಾಗುತ್ತಾನೆಯೋ, ಸಃ–ಆ ಭ್ರಷ್ಟನಾದವನು, ಪರಾಂ – ಉತ್ಕೃಷ್ಟವಾದ ಪದವಿಯನ್ನು, ನ ಪ್ರಾಪ್ನೋತಿ–ಹೊಂದುವುದಿಲ್ಲ. ಪಾಪೀಯಾನ್–ಪಾಪಿಷ್ಠನಾಗಿ, ಭವತಿ–ಆಗುವನು ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಇದರಿಂದ ಅನೂಚಾನವಾಗಿ ತನ್ನ ಮತಾಚಾರ್ಯರಿಂದ ಯಾವ ದೇವತಾಸಂಬಂಧವಾದ ದೀಕ್ಷೆಯನ್ನು ಪಡೆದಿರುತ್ತಾನೆಯೋ ಆ ದೇವತಾಸಂಬಂಧವಾದ ನಿತ್ಯಾರಾಧನೆಯನ್ನೂ, ಆ ದೇವತಾಚಿನ್ಹೆಗಳನ್ನೂ ತನ್ನ ದೇಹವಿರುವವರಿವಿಗೆ ಬಿಡಲಾಗದೆಂದು ಸ್ಪಷ್ಟವಾಗುತ್ತದೆ. ಮತ್ತು

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಯಸ್ಸ್ವಧರ್ಮಪರಿತ್ಯಾಗಾದನ್ಯಧರ್ಮಂ ಸಮಾರಭೇತ್ ॥
ತಂ ವಿಲೋಕ್ಯ ದುರಾತ್ಮಾನಂ ಕುರ್ಯಾತ್ಸೂರ್ಯಾವಲೋಕನಮ್ ।
ಭಿನತ್ತಿ ವೇದಮರ್ಯಾದಾಂ ಸ್ವಜಾತ್ಯಾಶ್ರಮಗೋಚರಾಮ್ ॥
ಆಶ್ರಯತ್ಯನ್ಯಧರ್ಮಾಂಶ್ಚ ಯಸ್ಸ ಪಾಷಂಡ ಉಚ್ಯತೇ ॥

**ಅರ್ಥ** :—ಪರಧರ್ಮವನ್ನಾಚರಿಸುವುದಕ್ಕಿಂತ ತನ್ನಮತಾಚಾರ್ಯರಿಂದ ಉಪದಿಷ್ಟವಾದ ಧರ್ಮಾಚರಣೆಯು ಗುಣರಹಿತವಾದರೂ ಶ್ರೇಷ್ಠವಾದುದು. ಯಾವನು ಅನೂಚಾನವಾಗಿ ಬಂದಿರುವ ತನ್ನ ಧರ್ಮವನ್ನು ಬಿಟ್ಟು ಅನ್ಯಧರ್ಮವನ್ನಪೇಕ್ಷಿಸುವನೋ ಅಂಥವನ ಮುಖವನ್ನು ನೋಡಬಾರದು. ಒಂದುಪಕ್ಷ ಪ್ರಮಾದದಿಂದ ನೋಡಿದರೆ ಅವನು ಆ ಪಾಪವಿಮೋಚನೆಗಾಗಿ ಸೂರ್ಯನನ್ನವಲೋಕಿಸಬೇಕು. ಯಾವನು ಜಾತ್ಯಾಶ್ರಮಗಳನ್ನು ಮೀರಿ ಅನ್ಯಧರ್ಮಗಳನ್ನಾಶ್ರಯಿಸುವನೋ ಅಂತಹ ವೇದಮರ್ಯಾದೆಯನ್ನತಿಕ್ರಮಿಸಿದ ಪಾಪಿಯು ಪಾಷಂಡಿಯೆನಿಸುವನು ಎಂದು ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿರುವುದು.

ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಸ್ವನುಷ್ಠಿತಃ ।
ಪರಧರ್ಮೇಣ ಜೀವನ್ ಹಿ ಸದ್ಯಃ ಪತತಿ ಜಾತಿತಃ ॥

(ಮನುಸ್ಮೃತಿ)

ಅರ್ಥ :—ತನ್ನ ಮತಾಚಾರ್ಯರಿಂದ ಹೇಳಲ್ಪಟ್ಟ ಧರ್ಮವು ಅಸ್ವರಸವೆಂದು ಕಂಡುಬಂದರೂ ಅದನ್ನೇ ಅನುಷ್ಠಿಸಬೇಕು. ಪರಧರ್ಮವು ಸ್ವರಸವೆಂದು ಕಂಡರೂ ಅದನ್ನು ಅನುಷ್ಠಿಸಬಾರದು. ಯಾವನು ಸ್ವಧರ್ಮ ತ್ಯಾಗಮಾಡಿ ಪರಧರ್ಮದಿಂದ ಜೀವಿಸುವನೋ ಅವನು ಜಾತಿಭ್ರಷ್ಟ ನೆನಿಸುವನೆಂದು ಮನುಸ್ಮೃತಿಯು ಹೇಳಿರುತ್ತದೆ.

ಅತಿಯಜೇತ ನಿಜಾಂ ಯದಿ ದೇವತಾಮ್ ।
ಉಭಯತಶ್ಚ್ಯವತೇ ಜುಷತೇ ಪೃಘುಮ್ ॥

ಅರ್ಥ :—ತಾನು ಆರಾಧಿಸುವ ದೇವರನ್ನು ಬಿಟ್ಟು ಮತ್ತೊಂದು ದೇವರನ್ನು ಆರಾಧಿಸುವವನು ಯಾವ ದೇವತಾನುಗ್ರಹಕ್ಕೂ ಭಾಗಿಯಾಗದೆ ಉಭಯ ಕುಲಭ್ರಷ್ಟನಾಗುವನಲ್ಲದೆ ಪಾಪಾತ್ಮನೂ ಆಗುವನು—ಎಂದು ಆದ್ಯರು ಸಮ್ಮತಿಸಿರುತ್ತಾರೆ. ಆದುದರಿಂದ ಪ್ರತಿಯೊಬ್ಬನೂ ತನ್ನ ಜೀವ ಮಾನದಲ್ಲಿ ಒಂದೇ ಧರ್ಮ ಒಂದೇ ದೇವರಿಗೆ ಶರಣಾಗತನಾಗಿರಬೇಕಲ್ಲದೆ ಸ್ವಲ್ಪಕಾಲ ಲಿಂಗಧಾರಿಯಾಗಿ ಶಿವನನ್ನಾರಾಧಿಸುತ್ತ ಅದನ್ನು ಬಿಟ್ಟು ಸ್ವಲ್ಪಕಾಲ ಚಕ್ರಧಾರಿಯಾಗಿ ವಿಷ್ಣುವನ್ನಾರಾಧಿಸಬಾರದು. ಏಕ ದೇವನಿಷ್ಠೆಯನ್ನು ಬಿಟ್ಟು ಅನೇಕದೇವರ ಹಂಬಲವುಳ್ಳವನೇ ಪಾಷಂಡಿ, ಪತಿತ, ವ್ರಾತ್ಯ ಎಂಬ ಹೆಸರನ್ನು ಪಡೆಯುವನು. ಇದೇ ತಾತ್ಪರ್ಯವನ್ನು "ಶೈವಾನ್............ನಾಧಿಕಾರೀ........ಶ್ರೌತಸ್ಮಾರ್ತಾದಿ ಕರ್ಮಸು" ಎಂಬ ಶ್ಲೋಕಗಳಿಗೆ ತಾತ್ಪರ್ಯವೆಂದು ತಿಳಿಯತಕ್ಕುದು.

# ಏಕದೇವತೋಪಾಸನೆ

ಚರಾಚರಾತ್ಮಕವಾದೀ ಜಗತ್ತನ್ನು ಸೃಷ್ಟಿಸಿದ ದೇವರು ಒಬ್ಬನಾಗಿರುವನಲ್ಲದೆ ಅನೇಕರಿಲ್ಲ. ಒಂದು ಮನೆಗೆ ಒಬ್ಬನು ಯಜಮಾನನಿದ್ದು ಉಳಿದವರು ಅವನ ಅಧೀನದಲ್ಲಿರುವುದರಿಂದ ಆ ಮನೆಯ ಸಂಸಾರವು ಗೌರವದಿಂದ ನಡೆಯುವದು. ಅನೇಕ ಯಜಮಾನರಿದ್ದರೆ ಆ ಮನೆಯ ಸಂಸಾರವು ವಿಷಮವಾಗುತ್ತದೆ. ಒಂದು ಜಗತ್ತಿಗೆ ಅನೇಕ ಕರ್ತರನ್ನು ಒಪ್ಪಿಕೊಳ್ಳುವುದರಿಂದ ಎಂದಾದರೂ ಅವರಲ್ಲಿ ಪರಸ್ಪರ ರಾಗದ್ವೇಷಗಳುದಿಸಿ **ಸುಂದೋಪಸುಂದ ನ್ಯಾಯದಂತೆ** ಎಲ್ಲರೂ ನಾಶೋನ್ಮುಖರಾಗಬೇಕಾಗುವುದು. ಆದುದರಿಂದ ಸೃಷ್ಟಿ, ಸ್ಥಿತಿ ಸಂಹಾರಕರ್ತನಾದ ಒಬ್ಬ ದೇವರೇ ಆಯಾಯ ಉಪಾಸಕರ ದೃಷ್ಟಿಭೇದದಿಂದ ವಿಷ್ಣುವೆಂತಲೂ, ಶಿವನೆಂತಲೂ, ಶಕ್ತಿ ಎಂತಲೂ ಅನಂತಾಕಾರವಾಗಿ ಕಾಣಿಸಿಕೊಂಡು ಅವರವರ ಪುಣ್ಯ ಪಾಪಾನುಸಾರವಾಗಿ ಫಲಗಳನ್ನೀಯುವನು. ಇದರಿಂದ ದೇವರೆಂಬ ವಸ್ತುವು ಒಂದೇ ಆಗಿದ್ದರೂ ಆಯಾಯ ಮತೋಪಾಸಕರು ತಮ್ಮ ತಮ್ಮ ಮತ ಪ್ರಕ್ರಿಯಾನುಸಾರವಾಗಿ ಒಂದೊಂದು ನಾಮದಿಂದ ವ್ಯವಹರಿಸಿದ ಮಾತ್ರದಿಂದ ಅವನ ದೇವರೇ ಬೇರೆ. ಇವನ ದೇವರೇ ಬೇರೆ. ಆ ದೇವರು ಒಳ್ಳೆಯವನು. ಈ ದೇವರು ಒಳ್ಳೆಯವನಲ್ಲ ಎಂದು ಭಾವಿಸಬಾರದು. ಗೋಕ್ಷೀರವು ಆಯಾ ದೇಶಭಾಷಾನುಸಾರವಾಗಿ ಅನೇಕ ನಾಮಗಳನ್ನು ಧರಿಸಿದ್ದರೂ ಅದರ ಸ್ವರೂಪವು ಮಾತ್ರ ಬೇರೆಯಾಗದು. ತನ್ನ ವಂಶಾನುಕ್ರಮವಾಗಿ ದೇವರನ್ನು ಯಾವ ರೂಪದಿಂದ ಧ್ಯಾನಿಸಿದರೂ, ಪೂಜಿಸಿದರೂ, ಸ್ಮರಿಸಿದರೂ, ನಮ್ಮಗಳ ದುಃಖವನ್ನು ನಿವಾರಿಸಿಯೇ ನಿವಾರಿಸುವನು. ತಾನು ಹುಟ್ಟಿದ ಮತ್ತು ತನ್ನಿಂದ ಅಭ್ಯಸ್ತವಾದ ಮತವನ್ನು ಬಿಟ್ಟು ಅನಭ್ಯಸ್ತವಾದ ಮತವನ್ನವಲಂಬಿಸಬಾರದು. ಮಾನವನು ಏಕಾಂತ ಬುದ್ಧಿಯುಳ್ಳವನಾಗದಿದ್ದರೆ ಅನೇಕ ಸಂಶಯಗಳುದಿಸಿ ತನ್ನ ಜೀವಮಾನವನ್ನೇ ವ್ಯರ್ಥಗೊಳಿಸಬೇಕಾಗುವುದು. ಏಕೆಂದರೆ ಏಕನಿಷ್ಠೆಯುಳ್ಳವನನ್ನು ಒಬ್ಬ ಸಾಧ್ವೀಮಣಿಗೆ ಹೋಲಿಸುವುದುಂಟು.

ಸ್ತ್ರೀಣಾಮುದ್ವಾಹ ಏಕೋ ವೈ ವೇದೋಕ್ತಃ ಪಾವನೋ ವಿಧಿಃ ॥

ಎಂಬ ಧರ್ಮಶಾಸ್ತ್ರದಂತೆ ಸ್ತ್ರೀಯರು ಒಂದು ಜನ್ಮದಲ್ಲಿ ಒಂದೇ ವಿವಾಹ ಮಾಡಿಕೊಳ್ಳಬೇಕಲ್ಲದೆ ಅನೇಕ ವಿವಾಹಗಳನ್ನು ಮಾಡಿಕೊಳ್ಳಬಾರದು. ಒಂದು ಸಮಯದಲ್ಲಿ ಪಾಣಿಗ್ರಹಣಮಾಡಿದ ಪತಿಯು ಕುರೂಪಿಯಾಗಿರಲಿ, ಸುಂದರನಾಗಿರಲಿ, ಶ್ರೀಮಂತನಾಗಿರಲಿ, ದರಿದ್ರನಾಗಿರಲಿ, ಸುಖಿಯಾಗಲಿ, ದುಃಖಿಯಾಗಲಿ, ಮೂಢನಾಗಿರಲಿ, ಪ್ರೌಢನಾಗಿರಲಿ ಆವನೇ ತನ್ನ ಸಾಕ್ಷಾತ್ ಕುಲದೇವನೆಂದು ಭಾವಿಸುತ್ತ ಆತನಲ್ಲಿ ನಿರತಿಶಯ ಪ್ರೇಮವನ್ನು ತೋರಿಸಬೇಕಲ್ಲದೆ ಕ್ಷಣಿಕ ಸುಖದಾಶೆಯಿಂದ, ಸಂಗದೋಷದಿಂದ, ಧನಾಶೆಯಿಂದ ಬೇರೆ ಬೇರೆ ಪುರುಷರನ್ನು ವರಿಸದಿರುವುದೇ ಸಾಧ್ವೀಮಣಿಯ ಧರ್ಮವಾಗಿದೆ.

ಮತಗಳು ಅನಂತವಾಗಿದ್ದರೂ ಎಲ್ಲಾ ಮತಗಳಲ್ಲಿಯೂ ದೇವರು ಪರಿಪೂರ್ಣನಾಗಿರುವುದರಿಂದ ಅವರವರ ಭಾವಾನಾನುಸಾರ ಇಷ್ಟಾರ್ಥವನ್ನು ಕೊಡುವುದರಲ್ಲಿ ದೇವರು ಅಭಯಹಸ್ತವನ್ನು ನೀಡಿರುವಲ್ಲಿ ಸ್ವಮತವನ್ನು ಬಿಟ್ಟು ಪರಮತವನ್ನೇಕೆ ಪ್ರವೇಶಿಸಬೇಕು ?

ಶಿವೋಕ್ತಾಂ ಜಾತಿಮರ್ಯಾದಾಂ ಯೋಽತೀತ್ಯ ಭುವಿ ವರ್ತತೇ ।
ಸ ಪಾಷಂಡ ಇತಿ ಜ್ಞೇಯಃ ಸರ್ವಕರ್ಮ ಬಹಿಷ್ಕೃತಃ ॥
ಭ್ರಷ್ಟೋ ಯಸ್ತ್ವಾಶ್ರಮಾಚಾರಾತ್ಪತಿತಸ್ಸೋಽಭಿಧೀಯತೇ ॥

ಅರ್ಥ :—ದೇವರಿಂದುಂಟಾಗಿರುವ ಜಾತಿ ಧರ್ಮಗಳನ್ನು ಯಾರು ಅತಿಕ್ರಮಿಸುವುರೋ ಅವರು ಪಾಷಂಡಿಗಳಾಗುತ್ತಾರೆ. ಮತ್ತು ಎಲ್ಲ ಕರ್ಮಗಳಿಗೂ ಅಧಿಕಾರಿಗಳಾಗುವುದಿಲ್ಲ. ಯಾರು ತಮ್ಮ ತಮ್ಮ ಆಶ್ರಮ ಧರ್ಮಗಳನ್ನು ಅತಿಕ್ರಮಿಸಿ ನಡೆಯುವುರೋ ಅವರು ಪತಿತರೆನಿಸಿಕೊಳ್ಳುತ್ತಾರೆ ಎಂದು ಸ್ಕಾಂದಾದಿ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಮತ್ತು

ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ ।
ಪಶುಭ್ಯೋಽಪಿ ನರಾಶ್ಶ್ರೇಷ್ಠಾಃ ತೇಷು ಶ್ರೇಷ್ಠಾ ದ್ವಿಜಾತಯಃ ॥
ದ್ವಿಜಾತಿಷ್ವಧಿಕಾ ವಿಪ್ರಾ ವಿಪ್ರೇಷು ಕ್ರತುಬುದ್ಧಯಃ ।
ಕ್ರತುಬುದ್ಧಿಷು ಕರ್ತಾರಸ್ತೇಭ್ಯಸ್ಸಂನ್ಯಾಸಿನೋಽಧಿಕಾಃ ॥
ತೇಭ್ಯೋ ವಿಜ್ಞಾನಿನಶ್ಶ್ರೇಷ್ಠಾಸ್ತೇಷು ಶಂಕರಪೂಜಕಾಃ ।

ತೇಷು ಶ್ರೇಷ್ಠಾ ಮಹಾಭಾಗ ಮನು ಲಿಂಗಾಂಗಸಂಗಿನಃ ॥
ಲಿಂಗಾಂಗಸಂಗಿಷ್ವಧಿಕಃ ಷಟ್‌ಸ್ಥಲಜ್ಞಾನವಾನ್ ಪುಮಾನ್ ।
ತಸ್ಮಾದಪ್ಯಧಿಕೋ ನಾಸ್ತಿ ತ್ರಿಷು ಲೋಕೇಷು ಸರ್ವದಾ ॥
ಸ ವಂದ್ಯ ಸ್ಸರ್ವದಾ ಪೂಜ್ಯಸ್ಸಂಸಾರವಿಜಗೀಷುಭಿಃ ।
ಬಹುನೋಕ್ತೇನ ಕಿಂ ವತ್ಸ ಸ್ಸ ಏವಾಹಂ ನ ಸಂಶಯಃ ॥
ಶಿರೋ ದೇಶೇsಥವಾ ಕಂಠೇ ಹಸ್ತೇ ವಕ್ಷಸ್ಥಲೇsಪಿ ವಾ ।
ಲಿಂಗಧಾರಣಹೀನೋ ಯಃ ತಂ ತ್ಯಜೇದಂತ್ಯಜಂ ಯಥಾ ॥
ಕುಂಡಂ ಚ ಗೋಳಕಂ ಚೈವ ಲಿಂಗಧಾರಣವರ್ಜಿತಮ್ ।
ತಥಾ ದೇವಲಕಂ ಚೈವ ದೃಷ್ಟ್ವಾ ಚಾಂದ್ರಾಯಣಂ ಚರೇತ್ ॥
ಸ್ಥೂಲಾಂಗೇ ತ್ವಿಷ್ಟಲಿಂಗಂ ತು ಯೋ ನ ಧಾರಯತೇ ದ್ವಿಜಃ ।
ದೃಷ್ಟ್ವಾ ತಂ ಸಹಸಾ ಪುತ್ರ ಸಚೇಲಂ ಸ್ನಾನಮಾಚರೇತ್ ॥
ಮಸ್ತಕೇ ಬಾಹುದಂಡೇ ವಾ ಲಲಾಟೋರ್ಧ್ವಪ್ರದೇಶಕೇ ।
ಅಲಿಂಗಧಾರಣಂ ದೃಷ್ಟ್ವಾ ಕುರ್ಯಾತ್ಸೂರ್ಯಾವಲೋಕನಮ್ ॥
ಯೋ ನ ಪೂಜಯತೇ ಭಕ್ತ್ಯಾ ಲಿಂಗಂ ತ್ರಿಭುವನೇಶ್ವರಮ್ ।
ನಾsಸೌ ಸ್ವರ್ಗಸ್ಯ ಮೋಕ್ಷಸ್ಯ ನ ಚ ರಾಜ್ಯಸ್ಯ ಭಾಜನಮ್ ॥
ಶಿವಯೋಗಿಶರೀರೇ ತು ನಿತ್ಯಂ ಸನ್ನಿಹಿತಶ್ಶಿವಃ ।
ಯೋಗೀಂದ್ರಪೂಜನಾತ್ತಸ್ಮಾತ್ಸಾಕ್ಷಾತ್ಸಂಪೂಜಿತಶ್ಶಿವಃ ॥
ಯೇ ಯೋಗಿನಂ ದ್ವಿಷಂತ್ಯಜ್ಞಾ ಸ್ಸರ್ವಪಾಪೇಷ್ವವಸ್ಥಿತಾಃ ।
ಯೇ ಶಿವಜ್ಞಾನನಿರತಂ ಪ್ರದ್ವಿಷಂತೀಹ ಯೋಗಿನಮ್ ॥
ವಿಕಲ್ಪಂತೇ ಮಹಾತ್ಮಾನಂ ಯೇ ಮೂಢಾಶ್ಶಿವಲಿಂಗಿನಮ್ ।
ತೇ ಯಾಂತಿ ಪಿತೃಭಿಸ್ಸಾರ್ಧಂ ನರಕೇಷು ನ ಸಂಶಯಃ ॥

( ಸ್ಕಾಂದ )

ಅರ್ಥ :—ಜ್ಞಾನದಲ್ಲಿ ಸೊಳ್ಳೆಗಿಂತ ನೊಣಗಳೂ, ನೊಣಗಳಿಗಿಂತ ಪಕ್ಷಿಗಳೂ, ಪಕ್ಷಿಗಳಿಗಿಂತ ಪಶುಗಳೂ, ಪಶುಗಳಿಗಿಂತ ಮನುಷ್ಯನೂ, ಮನುಷ್ಯರಲ್ಲಿ ದ್ವಿಜನೂ, ದ್ವಿಜನಿಗಿಂತ ವಿಪ್ರರೂ, ವಿಪ್ರರಿಗಿಂತ ಯಜ್ಞ ಕರ್ತನೂ, ಯಜ್ಞಕರ್ತನಿಗಿಂತ ಸಂನ್ಯಾಸಿಯೂ, ಸಂನ್ಯಾಸಿಗಿಂತ ತತ್ತ್ವ ಜ್ಞಾನಿಯೂ, ತತ್ವಜ್ಞಾನಿಗಿಂತ ಶಿವಲಿಂಗಾರಾಧಕನೂ, ಶಿವಲಿಂಗಾ ರಾಧಕನಿಗಿಂತ ಶಿವಲಿಂಗಧಾರಿಯೂ, ಶಿವಲಿಂಗಧಾರಿಗಳಲ್ಲಿ ಷಟ್‌ಸ್ಥಲ ಜ್ಞಾನಿಯೂ ಅಧಿಕನಾಗಿರುತ್ತಾನೆ. ಇವನಿಗೆ ಸಮಾನರಾದವರು ಮೂರು ಲೋಕಗಳಲ್ಲಿ ಯಾರೂ ಇಲ್ಲ. ಅವನೇ ವಂದ್ಯನು ಅವನೇ ಪೂಜ್ಯನು.

ಷಟ್‌ಸ್ಥಲ ಜ್ಞಾನಿಯೇ ನಾನಾಗಿರುವೆನು ಎಂದು ಶಿವನು ಷಣ್ಮುಖನಿಗೆ ಪ್ರಾಣಿಗಳ ತಾರತಮ್ಯವನ್ನು ಬೋಧಿಸಿರುತ್ತಾನೆ. ಮತ್ತು

ಕಂಠದಲ್ಲಾಗಲಿ, ಮಸ್ತಕದಲ್ಲಾಗಲಿ, ಹಸ್ತದಲ್ಲಾಗಲಿ, ಎದೆಯಲ್ಲಾಗಲಿ ಶಿವಲಿಂಗವನ್ನು ಯಾವ ವೀರಶೈವನು ಧರಿಸುವುದಿಲ್ಲವೋ ಅಂಥವನು ಅಂತ್ಯಜನಿಗೆ ಸಮಾನನೆಂದು ತಿಳಿಯಬೇಕು. ಕುರುಡನಾಗಲಿ, ಗೋಳಕನಾಗಲಿ, ದೇವಲಕನಾಗಲಿ ಎಲ್ಲರೂ ಲಿಂಗಧಾರಿಗಳಾಗಿರಬೇಕು. ವೀರಶೈವನು ತನ್ನ ಸ್ಥೂಲದೇಹದಲ್ಲಿ ಇಷ್ಟಲಿಂಗವನ್ನು ಧರಿಸದಿದ್ದಲ್ಲಿ ಅವನನ್ನು ಕಣ್ಣಿನಿಂದಲೂ ನೋಡಬಾರದು. ತಲೆಯಲ್ಲಿ, ತೋಳಿನಲ್ಲಿ, ಹಣೆಯಲ್ಲಿ ಶಿವಲಿಂಗವನ್ನು ಧರಿಸತಕ್ಕದು. ಯಾವನು ಭಕ್ತಿಯಿಂದ ಶಿವಲಿಂಗವನ್ನು ಪೂಜಿಸುವುದಿಲ್ಲವೋ ಅವನು ಸ್ವರ್ಗವನ್ನಾಗಲಿ, ಮುಕ್ತಿಯನ್ನಾಗಲಿ, ರಾಜ್ಯವನ್ನಾಗಲಿ ಪಡೆಯುವುದಿಲ್ಲ. ಲಿಂಗಧಾರಿಯಾದ ಶಿವಯೋಗಿಯ ಶರೀರದಲ್ಲಿ ಶಿವನು ಯಾವಾಗಲೂ ಸನ್ನಿಹಿತನಾಗಿರುತ್ತಾನೆ. ಅವನನ್ನು ಪೂಜಿಸುವುದರಿಂದ ಶಿವನನ್ನು ಪೂಜಿಸಿದಂತಾಗುವುದು. ಅವನನ್ನು ದ್ವೇಷಿಸುವವನು ಪಾಪಾತ್ಮನಾಗುವುನಲ್ಲದೆ, ತಮ್ಮ ತಂದೆತಾಯಿಗಳನ್ನೂ ನರಕಕೂಪದಲ್ಲಿ ದೂಡುವನು ಎಂದು ಸ್ಕಾಂದಾದಿ ಪುರಾಣಗಳಲ್ಲಿ ಹೇಳಲ್ಪಟ್ಟಿರುವುದು.

ನಿಗೃಹೀತಾಶ್ಚ ಯೇ ರಾಜ್ಞಾ ಚೌರ್ಯದೋಷೇಣ ಕುತ್ರಚಿತ್ ।
ಪರದಾರಾನ್ನಿಶಂತಶ್ಚ ದೋಷಾತ್ತತ್ಪತಿಭಿರ್ಹತಾಃ ॥
ಅಸಮಾನೈಶ್ಚ ಸಂಕೀರ್ಣಾ ಶ್ಚಂಡಾಲಾದ್ಯೈಶ್ಚ ವಿಗ್ರಹಮ್ ।
ಕೃತ್ವಾ ತೈರ್ನಿಹತಾಯೇ ಚ ಚಂಡಾಲಾದಿಸಮಾಶ್ರಿತಾಃ ॥
ಬಂಧಾಗ್ನಿವಿಷದಾಶ್ಚೈವ ಪಾಷಂಡಾಃ ಕ್ರೂರಬುದ್ಧಯಃ ।
ಶಿವೋತ್ಕ್ರಾಂ ಜಾತಿಮರ್ಯಾದಾಂ ಪತಿತ ಸ್ಸೋಽಭಿದೀಯತೇ ॥

(ವಿಷ್ಣುಪುರಾಣ)

**ಅರ್ಥ :**—ಕಳ್ಳತನಮಾಡುವವನು, ಸೆರೆಮನೆಯಲ್ಲಿ ಬಿದ್ದಿರುವನೂ, ಆಯಾಯ ಪತಿಗಳಿಂದ ಎಟುತಿಂದ ಪರಸ್ತ್ರೀಗಾಮಿಯೂ, ಚಂಡಾಲಾದಿ ಹೀನಜನರೊಡನೆ ಜಗಳವಾಡುವವನೂ, ಚಂಡಾಲರನ್ನಾಶ್ರಯಿಸಿದವನೂ, ಪ್ರತಿಬಂಧಕಮಾಡುವವನೂ, ಮನೆಗೆ ಬೆಂಕಿಯನ್ನಿಡುವವನೂ, ವಿಷ

ಹಾಕುವವನೂ, ಸ್ವಮತಾಶ್ರಮಗಳನ್ನತಿಕ್ರಮಿಸಿದವನೂ, ಮುಂತಾದವರೆಲ್ಲ ಪಾಷಂಡರೆನಿಸುವರೆಂದು ವಿಷ್ಣುಪುರಾಣ, ಸ್ಕಾಂದಪುರಾಣಗಳಲ್ಲಿ ಹೇಳಲ್ಪಟ್ಟಿದೆ.

**ಶಂಕೆ :—** ಹಾಗಾದರೆ **"ಪಾಷಂಡಂ ಪತಿತಂ ವ್ರಾತ್ಯಂ"** ಮುಂತಾದ ಶ್ಲೋಕಗಳಲ್ಲಿ ಹೇಳಲ್ಪಟ್ಟ **ಪಾಷಂಡ, ಪತಿತ, ವ್ರಾತ್ಯ** ಮುಂತಾದ ಪದಗಳು ಕಳ್ಳತನ, ವ್ಯಭಿಚಾರಿ ದುಷ್ಟಕಾರ್ಯಗಳನ್ನೆಸಗುವರಲ್ಲಿ ಮಾತ್ರ ವ್ಯವಹರಿಸಲ್ಪಡುತ್ತವೆಯಲ್ಲದೆ ಇನ್ನಾರಲ್ಲಿಯೂ ವ್ಯವಹರಿಸಲ್ಪಡಲಾರವೇನು ?

**ಸಮಾಧಾನ :—** ಈ ಪದಗಳು ಜಾರಚೋರಾದಿಗಳಲ್ಲಿ ವ್ಯವಹರಿಸಲ್ಪಟ್ಟಿರುವುದೂ ಅಲ್ಲದೆ ಪುರಾಣ, ಧರ್ಮಶಾಸ್ತ್ರ, ಅಮರಕೋಶಾದಿಗಳಲ್ಲಿ ಇವುಗಳಿಗೆ ಒಂದೊಂದು ವಿಧವಾಗಿ ಅರ್ಥಮಾಡಿರುತ್ತಾರೆ.

**" ಪಾಷಂಡಾಸ್ಸರ್ವಲಿಂಗಿನಃ "**
**" ವ್ರಾತ್ಯಸ್ಸಂಸ್ಕಾರಹೀನಸ್ಸ್ಯಾತ್ "**

ಒಂದೇ ದೇವರನ್ನು ಪೂಜಿಸದೆ ಅನೇಕ ದೇವರನ್ನು ಪೂಜಿಸುತ್ತಾ ಅನೇಕ ದೇವರ ಚಿಹ್ನೆಗಳನ್ನು ಧರಿಸುವವರು ಪಾಷಂಡರೆನಿಸುತ್ತಾರೆ. ಮತ್ತು ಸಂಸ್ಕಾರವಿಲ್ಲದವರು ವ್ರಾತ್ಯರೆನಿಸುತ್ತಾರೆಂದು ಅಮರಕೋಶಕಾರರು ಹೇಳಿರುತ್ತಾರೆ. ಮತ್ತು

**ಅಲಿಂಗಧಾರಿಣಂ ದೃಷ್ಟ್ವಾ ಕುರ್ಯಾತ್ಸೂರ್ಯಾವಲೋಕನಮ್ ॥**

ಲಿಂಗಧಾರಣವಿಲ್ಲದವರನ್ನು ನೋಡಬಾರದೆಂದು ಪ್ರಮಾಣವಚನಗಳಿರುವುದರಿಂದ **" ಪಾಷಂಡ ಪತಿತ " " ವ್ರಾತ್ಯ "** ಮುಂತಾದ ಪದಗಳು ಏಕದೇವತೋಪಾಸಕರಾದ ಲಿಂಗಧಾರಿಗಳಲ್ಲಿ ಅನ್ವಯಿಸದೆ ಅನೇಕ ದೇವತೋಪಾಸಕರಾದ ಸರ್ವದೇವತಾಚಿಹ್ನೆಗಳನ್ನು ಧಾರಣಮಾಡುವವರಲ್ಲಿ ಅನ್ವಯಿಸುತ್ತವೆ.

ಪ್ರತಿಯೊಬ್ಬ ಮತಸ್ಥಾಪನಾಚಾರ್ಯರಾಗಲಿ, ಅವರ ತತ್ತ್ವವನ್ನವಲಂಭಿಸಿರುವವರಾಗಲಿ, ಯೋಗಸಾಂಖ್ಯಾದಿಶಾಸ್ತ್ರಕಾರರಾಗಲಿ ಎಲ್ಲರೂ ತಮ್ಮ ತಮ್ಮ ಸಿದ್ಧಾಂತವನ್ನು ಸ್ಥಿರಪಡಿಸಿಕೊಳ್ಳುವ ಸಮಯದಲ್ಲಿ

ಸಂದರ್ಭಾನುಸಾರ ಅನ್ಯಮತಗಳ ಸ್ವರೂಪವನ್ನು ವಿವರಿಸಿ ಅವುಗಳಲ್ಲಿ ಅಸ್ವಾರಸ್ಯವನ್ನು ತೋರಿಸುವುದು ಸಂಪ್ರದಾಯವಾಗಿರುತ್ತದೆ. ಅನ್ಯ ಸಿದ್ಧಾಂತಗಳಲ್ಲಿ ಅಸ್ವಾರಸ್ಯವನ್ನು ತೋರಿಸದಹೊರತು ತಮ್ಮ ಸಿದ್ಧಾಂತದಲ್ಲಿ ಜಿಜ್ಞಾಸುಗಳಿಗೆ ಅಭಿರುಚಿ ಹುಟ್ಟುವುದಿಲ್ಲ. ಅಷ್ಟುಮಾತ್ರದಿಂದ ಮತ್ತೊಂದು ಸಿದ್ಧಾಂತವನ್ನಾಗಲಿ ಆಸಿದ್ಧಾಂತೋಕ್ತವಾದ ದೇವರನ್ನಾಗಲಿ ದೂಷಿಸ ಬೇಕೆಂಬ ತಾತ್ಪರ್ಯವು ಅವರಿಗಿರುವುದಿಲ್ಲ. ಆದರೆ ತಮ್ಮ ಸಿದ್ಧಾಂತವನ್ನು ಮತ್ತು ಸಿದ್ಧಾಂತೋಕ್ತವಾದ ದೇವರನ್ನೂ ಬಹಳವಾಗಿ ಹೊಗಳುತ್ತ ಅಚಲವಾದ ದೇವತಾಭಕ್ತಿಯನ್ನು ಹುಟ್ಟಿಸಿ ಮುಕ್ತಿಕಾಮಿಗಳನ್ನಾಗಿ ಮಾಡಬೇಕೆಂಬುದೇ ಪೂರ್ವಾಚಾರ್ಯರ ಧ್ಯೇಯವಾಗಿರುತ್ತದೆ. ಈ ವಿಷಯದಲ್ಲಿ

"ನ ಹಿ ನಿಂದಾ ನಿಂದಿತುಮಿಷ್ಟೇ ಅಪಿ ತು ಸ್ತುತ್ಯಮೇವ ಸ್ತೌತಿ"

ಪ್ರಕೃತದಲ್ಲಿ ಯಾವ ವಸ್ತುವು ಸ್ತುತ್ಯವಾಗಿದೆಯೋ ಆ ವಸ್ತುವನ್ನು ಸ್ತುತಿಸ ಬೇಕೆಂಬುದೇ ನಿಂದೆಗೆ ತಾತ್ಪರ್ಯವಲ್ಲದೆ ಅನ್ಯ ವಸ್ತುವಿನ ನಿಂದೆಯಲ್ಲಿ ತಾತ್ಪರ್ಯವಿಲ್ಲ ಎಂದು ಎಲ್ಲಾ ಶಾಸ್ತ್ರಕಾರರೂ ಒಪ್ಪಿರುತ್ತಾರೆ. ಇದನ್ನು ನ ಹಿ ನಿಂದಾ ನ್ಯಾಯವೆಂದು ಕರೆಯುತ್ತಾರೆ. ಇದನ್ನೇ ಮೀಮಾಂಸಾ ಕಾರರೂ ಉದಾಹರಣರೂಪದಿಂದ ತೋರಿಸಿರುತ್ತಾರೆ.

"ಅಪಶವೋಽನ್ಯೇ ಗೋಽಶ್ವೇಭ್ಯಃ ಪಶವೋ ಗೋಽಶ್ವಾಃ"

ಗೋವುಗಳೂ, ಅಶ್ವಗಳೂ ಹೇಗೆ ಪಶುವರ್ಗದಲ್ಲಿ ಸೇರಿವೆಯೋ ಹಾಗೆ ಒಂಟೆ, ಎಮ್ಮೆ, ಕೋಣ ಮುಂತಾದ ಪ್ರಾಣಿಗಳು ಪಶುವರ್ಗದಲ್ಲಿ ಸೇರಿವೆ. ಆದರೆ ಗೋವುಗಳೂ, ಅಶ್ವಗಳೂ ಮಾತ್ರ ಪಶುಗಳೆಂದೂ, ಉಳಿದ ಆನೆ, ಎಮ್ಮೆ, ಕೋಣ ಮುಂತಾದ ಪ್ರಾಣಿಗಳು ಪಶುಗಳಲ್ಲವೆಂದು ಶ್ರುತಿಯು ನಿಂದಿಸಿದ್ದರೂ ಪ್ರಕರಣಾನುಸಾರವಾಗಿ ಗೋವು ಮತ್ತು ಅಶ್ವಗಳ ಸ್ತುತಿಯಲ್ಲಿ ಆ ಶ್ರುತಿಗೆ ತಾತ್ಪರ್ಯವಲ್ಲದೆ ಇತರ ಮಹಿಷೀ ಮಹಿಷಾದಿ ಗಳನ್ನು ನಿಂದಿಸುವುದರಲ್ಲಿ ತಾತ್ಪರ್ಯವಿಲ್ಲ.

ಇದರಂತೆ ಶಿವಲಿಂಗಧಾರಣದ ಮಹತ್ವವನ್ನು ಸರ್ವತೋಮುಖವಾಗಿ ಸ್ತುತಿಸುವುದಕ್ಕಾಗಿ ವೀರಶೈವ ಸಿದ್ಧಾಂತಕಾರರು—

"ಅಲಿಂಗಧಾರಿಣಂ ದೃಷ್ಟ್ವಾ" "ಲಿಂಗಧಾರಣ ಹೀನೋಯಃ"
"ಶೈವಾ ಪಾಶುಪತಾಶ್ಚೈವ" "ಪಾಷಂಡಂ ಪತಿತಂ ವ್ರಾತ್ಯಂ"

ಎಂದು ಅನ್ಯಮತಗಳನ್ನು ನಿಂದಿಸಿ ಅವುಗಳಲ್ಲಿ ಅಸ್ವಾರಸ್ಯವನ್ನು ತೋರಿಸಿರುತ್ತಾರೆ. ಇಂತಹ ವಾಕ್ಯಗಳೆಲ್ಲ ಸಂದರ್ಭಾನುಸಾರ ಶಿವಲಿಂಗಧಾರಣದ ಪ್ರಾಶಸ್ತ್ಯವನ್ನು ಪ್ರಕಾಶಪಡಿಸುತ್ತಾ ಆ ಶಿವಲಿಂಗದಲ್ಲಿ ಧೃಡತರಭಕ್ತಿಯನ್ನು ಹುಟ್ಟಿಸುವುದೇ ಆ ನಿಂದೆಗೆ ತಾತ್ಪರ್ಯವಲ್ಲದೆ ಅನ್ಯಮತಗಳ ದೂಷಣೆಯಲ್ಲಿ ತಾತ್ಪರ್ಯವಿಲ್ಲವು,

ಧರ್ಮಧ್ವಜೀ ಲಿಂಗವೃತ್ತಿರವಕೀರ್ಣೀ ಕ್ಷತವ್ರತಃ

ಎಂದು ಅಮರಕೋಶದ ಬ್ರಹ್ಮವರ್ಗದಲ್ಲಿ ಧರ್ಮಧ್ವಜಿ, ಲಿಂಗವೃತ್ತಿ, ಅವಕೀರ್ಣಿ, ಕ್ಷತವ್ರತೀ, ಈ ನಾಲ್ವರು ದೂಷಿಸಲ್ಪಟ್ಟಿರುತ್ತಾರೆ. ಈ ಪದಗಳ ಮಧ್ಯದಲ್ಲಿ ಲಿಂಗವೃತ್ತಿಯೆಂಬ ಪದವು ಸೇರಿಕೊಂಡಿರುತ್ತದೆ. ಇದರಿಂದ ಲಿಂಗಧಾರಿಗಳು ನಿಷಿದ್ಧರೆಂಬ ಭ್ರಮೆಯುಂಟಾಗುತ್ತದೆ.

**ಸಮಾಧಾನ:**—ಲಿಂಗಾಭಟ್ಟಿಯಲ್ಲಿ ಈ ಶ್ಲೋಕದಲ್ಲಿ ಬಂದಿರುವ "**ಧರ್ಮಧ್ವಜೀ**" "**ಲಿಂಗವೃತ್ತಿ, ಅವಕೀರ್ಣಿ**" ಮುಂತಾದ ಪದಗಳಿಗೆ ವ್ಯಾಖ್ಯಾನಮಾಡಿರುವುದನ್ನು ನೋಡಿದರೆ ಅಂತಹ ಭ್ರಮಬುದ್ಧಿಯು ತೊಲಗುವುದು. ಅಂದರೆ "**ಧರ್ಮಸ್ಯೇವ ಧ್ವಜಂ ಚಿಹ್ನಂ ಯಸ್ಯಸಃ ಧ್ವರ್ಮಧ್ವಜೀ**" ಎಂಬ ಸಮಾಸವಿಧಾನದಿಂದ ವಾಸ್ತವವಾಗಿ ಧರ್ಮಬುದ್ಧಿಯಿಲ್ಲದಿದ್ದರೂ ಧರ್ಮದ ಮುದ್ರೆಗಳನ್ನು ಧರಿಸಿ ಹೊಟ್ಟೆಗೋಸ್ಕರ ಪಟಾಟೋಪಮಾಡುತ್ತಿರುವನು ಧರ್ಮಧ್ವಜಿಯೆನಿಸಿಕೊಳ್ಳುವನು. **ಲಿಂಗವೃತ್ತಿ**ಯೆಂಬ ಪದಕ್ಕೆ "**ಲಿಂಗಧಾರಣಂ ವೃತ್ತಿಃ ಜೀವನಂ ಯಸ್ಯಸಃ ಲಿಂಗವೃತ್ತಿಃ**" ಎಂಬ ಸಮಾಸವಿಧಾನದಿಂದ ಲಿಂಗಧಾರಣವಿಲ್ಲದ ಪುರುಷನು ಲಿಂಗದಲ್ಲಿ ನಿಷ್ಠೆಯಿಲ್ಲದಿದ್ದರೂ ಹೊಟ್ಟೆಹೊರೆಯುವುದಕ್ಕಾಗಿ ಕೊರಳಲ್ಲಿ ಶಿವಲಿಂಗವನ್ನು ಧರಿಸಿಕೊಂಡು ಮೈತುಂಬ ಕಾವಿಬಟ್ಟೆಯನ್ನು ಹೊದ್ದು ಮೈಯೆಲ್ಲ ಭಸ್ಮರುದ್ರಾಕ್ಷಗಳನ್ನು ಧರಿಸಿಕೊಂಡು ಮೆರೆಯುವ ಕಪಟಿ ವೇಷಧಾರಿಯೇ **ಲಿಂಗವೃತ್ತಿ**ಯೆನಿಸಿಕೊಳ್ಳುತ್ತಾನೆ. "**ಅವ ವ್ರತಾಂತರೇ ಕೀರ್ಣಂ-ಸ್ಖಲಿತರೇತಃ ಅಸ್ಯಾಸ್ತೀತಿ ಅವಕೀರ್ಣಿ**" "**ಕ್ಷತಂ ವ್ರತಂ**

ಅಸ್ಯೇತಿ ಕ್ಷತವ್ರತೀ" ಎಂಬ ಸಮಾಸವಿಧಾನದಿಂದ ಬ್ರಹ್ಮಚರ್ಯವನ್ನು ನಾಶಪಡಿಸಿಕೊಂಡವರೆಂದು ಅರ್ಥಮಾಡಿರುವುದರಿಂದ "**ಲಿಂಗವೃತ್ತಿ**" ಎಂಬ ಪದದಲ್ಲಿರುವ ವೃತ್ತಿಶಬ್ದವು ಜೀವಿಸುವಿಕೆ ಎಂಬ ಅರ್ಥದಲ್ಲಿ ಶಕ್ತಿಯುಳ್ಳುದರಿಂದ ಮೊದಲು ಅಲಿಂಗಿಯಾಗಿದ್ದು ಲಿಂಗಿಯ ವೇಷದಿಂದ ಶಿವಲಿಂಗವನ್ನು ಕಂಠದಲ್ಲಿ ಧರಿಸಿಕೊಂಡು ಜನಗಳಿಗೆ ಭ್ರಾಂತಿಯನ್ನುಂಟು ಮಾಡಿ ಆ ಲಿಂಗದ ಆಶ್ರಯದಿಂದ ಹೊಟ್ಟೆ ಹೊರದುಕೊಳ್ಳುವುದು ಕೇವಲ ಪಾಪದಾಯಕವು. ಮೋಕ್ಷಾಕಾಂಕ್ಷಿಗಳಾಗಿ ಯಾವಾಗಲೂ **ಶಿವಾರ್ಚನೆ, ಶಿವಧ್ಯಾನ, ಶಿವಸ್ಮರಣ, ಶಿವಜಪ** ಮುಂತಾದ ಸತ್ಕ್ರಿಯೆಗಳಿಂದ ಜಗನ್ನಿಯಾಮಕನಾದ ಶಿವನನ್ನು ಸಂತೋಷಪಡಿಸುವುದೇ ಲಿಂಗಧಾರಣದ ಮುಖ್ಯಗುರಿಯಾಗಿರುತ್ತದೆ. ಇದನ್ನು ಬಿಟ್ಟು ಲಿಂಗಧಾರಿಯ ವೇಷದಲ್ಲಿ ತನ್ನ ಜೀವಿಕೆಯನ್ನು ನೆರವೇರಿಸಿಕೊಳ್ಳುವವನೇ **ಲಿಂಗವೃತ್ತಿ** ಎನಿಸಿ ಕೊಳ್ಳುತ್ತಾನೆ. ಇಂತಹ ಲಿಂಗವೃತ್ತಿಯನ್ನು ನಿಂದಿಸುವುದು ನ್ಯಾಯವಾದುದೇ ಸರಿ. ಇದೇ ಅಭಿಪ್ರಾಯವನ್ನು ಮನುಸ್ಮೃತಿಕಾರರು

ಧರ್ಮಧ್ವಜಸ್ಸದಾಲುಬ್ಧಃ ಛಾದ್ಮಿಕೋ ಲೋಕದಂಭಕಃ ।
ಬೈಡಾಲವೃತ್ತಿಕಶ್ಚೈವ ಹಿಂಸ್ರಸ್ಸರ್ವಾಭಿನಿಂದಕಃ ॥

**ಅರ್ಥ :**—ಶಿವಲಿಂಗಧಾರಿಯಲ್ಲದ ಪುರುಷನು ಲಿಂಗಧಾರಿವೇಷವನ್ನು ಧರಿಸಿ ಸಂಪ್ರದಾಯ ಶರಣರಾದ ಶಿವಭಕ್ತರ ಮನೆಗೆ ಹೋಗಿ ಅನ್ನ ಸ್ವರ್ಣಾದಿಗಳ ದಾನ ತೆಗದುಕೊಂಡು ಅವರನ್ನು ವ್ರತಭ್ರಷ್ಟರನ್ನಾಗಿ ಮಾಡುವ ಪಾಪಿಯು ತಿರ್ಯಕ್‌ಜಾತಿಯಲ್ಲಿ ಹುಟ್ಟುವನು ಎಂದು ಹೇಳಿರುತ್ತಾರಲ್ಲದೆ ಸಂಪ್ರದಾಯಸಿದ್ಧರಾಗಿ ಗುರುಗಳಿಂದ ಶಿವದೀಕ್ಷಾಸಂಸ್ಕಾರ ಪಡೆದು ಪರಿಶುದ್ಧದೇಹಿಗಳಾಗಿ ಶಿವಕಲಾಧಿಷ್ಠಿತವಾದ ಲಿಂಗವನ್ನು ಧರಿಸಿದವನನ್ನು ಕುರಿತು ಹೇಳಲ್ಪಟ್ಟ ವಾಕ್ಯಗಳಲ್ಲವೆಂದು ನಿಶ್ಚಯಿಸತಕ್ಕದ್ದು.

---

## ಶಿವಗೀತೆ - ಲಿಂಗಧಾರಣ

ಇನ್ನು ಪದ್ಮಪುರಾಣೋಕ್ತವಾದ ಅಗಸ್ತ್ಯ – ರಾಘವಸಂವಾದ ರೂಪವಾದ ಶಿವಗೀತೆಯಿಂದಲೂ, ಲಿಂಗಧಾರಣವು ಸಿದ್ಧಮಾಡಲ್ಪಡುತ್ತದೆ. ಶ್ರೀರಾಮನು ದಂಡಕಾರಣ್ಯವನ್ನು ಪ್ರವೇಶಿಸಿದ ಸಮಯದಲ್ಲಿ ದುಷ್ಟನಾದ ರಾವಣನು ಸೀತೆಯನ್ನು ಅಪಹರಿಸಲು, ರಾಮನು ಸೀತಾವಿಯೋಗವನ್ನು ಸಹಿಸಲಾರದೆ ಪರಿತಪಿಸುತ್ತಿರಲು ಭಗವಾನ್ ಅಗಸ್ತ್ಯನು ಶ್ರೀರಾಮನ ಬಳಿಗೈದಲಾಗಿ ಶ್ರೀರಾಮನು ಭಕ್ತಿಯಿಂದ ಸತ್ಕರಿಸಿ ಸಾಷ್ಟಾಂಗ ಪ್ರಮಾಣ ಗಳನ್ನೆಸಗಿ ಮಹರ್ಷಿಪುಂಗವನೇ? ಸೀತಾದೇವಿಯ ವಿಯೋಗದುಃಖವನ್ನು ಸಹಿಸಲಾರದೆ ಬಹಳವಾಗಿ ಬಳಲುತ್ತಿರುವೆನು. ಈ ದುಃಖವನ್ನು ಶಮನ ಗೊಳಿಸುವ ಉಪಾಯವನ್ನುಪದೇಶಿಸಬೇಕೆಂದು ಬೇಡಿಕೊಳ್ಳಲು ಅಗಸ್ತ್ಯ ಮಹರ್ಷಿಯು ಎಲೈ ಶ್ರೀರಾಮನೇ! ರಾವಣನು ಮಹಾಪರಾಕ್ರಮಿ ಯಾಗಿರುವನಲ್ಲದೆ ಸುರಾಸುರರಾದ ದುರ್ಜೇಯರಾದ ಇಂದ್ರಜಿತ್, ಕುಂಭಕರ್ಣ, ವಿಭೀಷಣ ಮುಂತಾದ ಬಲಿಷ್ಠರ ಸಹಾಯವುಳ್ಳವನಾಗಿ ರುತ್ತಾನೆ. ನೀನು ಅವನೊಡನೆ ಯುದ್ಧಮಾಡಲಾರೆ. ಆತನನ್ನು ಕೊಲ್ಲದ ಹೊರತು ನಿನಗೆ ಸಂಭವಿಸಿದ ಸೀತಾವಿಯೋಗದುಃಖವು ಪರಿಹಾರವಾಗುವು ದಿಲ್ಲವೆಂದು ಹೇಳಲು ಅದಕ್ಕೆ ಶ್ರೀರಾಮನು

ತಸ್ಮಾತ್ತಸ್ಯ ವಧೋಪಾಯಂ ಲಂಘಯಿತ್ವಾಂಬುಧಿಂ ರಣೇ ।
ಬ್ರೂಹಿ ಮೇ ಮುನಿಶಾರ್ದೂಲ ತ್ವತ್ತೋ ನಾನ್ಯೋsಸ್ತಿ ಮೇ ಗುರುಃ ॥

ಅರ್ಥ :— ಎಲೈ ಮುನಿಶ್ರೇಷ್ಠನಾದ ಅಗಸ್ತ್ಯನೇ! ಸಮುದ್ರವನ್ನು ದಾಟಿ ಲಂಕೆಯಂ ಪ್ರವೇಶಿಸಿ ಯುದ್ಧದಲ್ಲಿ ರಾವಣನನ್ನು ಕೊಲ್ಲುವುದಕ್ಕೆ ತಕ್ಕ ಉಪಾಯವನ್ನು ಹೇಳಬೇಕು. ನಿನ್ನಹೊರತು ನನಗಾರೂ ರಕ್ಷಕರಿಲ್ಲ ಎಂದು ಪ್ರಾರ್ಥಿಸಿದನು—

ಏವಂ ಚೇಚ್ಛರಣಂ ಯಾಹಿ ಪಾರ್ವತೀಪತಿಮವ್ಯಯಮ್ ।
ಸ ಚೇತ್ಪ್ರಸನ್ನೋ ಭಗವಾನ್ ವಾಂಛಿತಾರ್ಥಂ ಪ್ರದಾಸ್ಯತಿ ॥
ದೇವೈರಜೇಯೈಶ್ಶಕ್ರಾದ್ಯೈಃ ಹರಿಣಾ ಬ್ರಹ್ಮಣಾಪಿ ವಾ ।
ಸ ತೇ ವಧ್ಯಃ ಕಥಂ ವಾ ಸ್ಯಾತ್ ಶಂಕರಾನುಗ್ರಹಂ ವಿನಾ ॥

ಅತಸ್ತ್ವಾಂ ದೀಕ್ಷಯಿಷ್ಯಾಮಿ ವಿರಜಾಗಮಮಾಶ್ರಿತಃ ।
ತೇನ ಮಾರ್ಗೇಣ ಮರ್ತ್ಯತ್ವಂ ಹಿತ್ವಾ ತೇಜೋಮಯೋ ಭವ ॥
ಯೇನ ಹತ್ವಾ ರಣೇ ಶತ್ರೂನ್ ಸರ್ವಾನ್ ಕಾಮಾನವಾಪ್ಸ್ಯಸಿ ।
ಭುಕ್ತ್ವಾ ಭೂಮಂಡಲಂ ಚಾಂತೇ ಶಿವಸಾಯುಜ್ಯಮಾಪ್ಸ್ಯಸಿ ॥

ಅರ್ಥ :—ಎಲೈ ಶ್ರೀರಾಮನೇ! ನಾಶರಹಿತನೂ, ಪಾರ್ವತೀ ವಲ್ಲಭನೂ, ಆದ ಶಿವನನ್ನು ಆರಾಧಿಸು, ಬೇಗನೆ ನಿನ್ನಿಷ್ಟವು ಕೈಗೂಡುವುದು. ಇಂದ್ರಾದಿಗಳಿಂದಲೂ, ಬ್ರಹ್ಮಾದಿಗಳಿಂದಲೂ, ಅಜೇಯನಾಗಿರುವ ರಾವಣನನ್ನು ಶಿವಾನುಗ್ರಹವಿಲ್ಲದಹೊರತು ಕೊಲ್ಲಲಾರೆ. ಆದುದರಿಂದ ಶಿವಾಗಮಗಳಲ್ಲಿ ಹೇಳಿದಂತೆ ಶಿವಾರಾಧನೆಯ ಯೋಗ್ಯತೆಯನ್ನುಂಟುಮಾಡುವ ಶಿವದೀಕ್ಷೆಯನ್ನು ಮಾಡುವೆನು. ಬಳಿಕ ಶಿವಲಿಂಗವನ್ನು ವಿಧ್ಯುಕ್ತ ರೀತಿಯಿಂದ ಪೂಜಿಸು. ಇದರಿಂದ ಶಿವನು ಪ್ರತ್ಯಕ್ಷನಾಗಿ ನಿನ್ನಿಷ್ಟವಂ ನೀಡುವನು. ನೀನು ತೇಜೋಭರಿತನಾಗಿ ನಿರಾಯಾಸದಿಂದ ಶತ್ರುವಂ ಜಯಿಸುವೆ. ನಿನ್ನಿಷ್ಟದಂತೆ ಸಿದ್ಧಿಯನ್ನು ಪಡೆಯುವೆ. ಸುಖದಿಂದ ರಾಜ್ಯ ಭಾರವಹಿಸುವೆ. ಅಂತ್ಯದಲ್ಲಿ ಶಿವಸಾಯುಜ್ಯವನ್ನು ಪಡೆಯುವೆ ಎಂದು ಆದೇಶವನ್ನಿತ್ತನು.

ಶ್ರೀರಾಮನು

ಕೃತಾರ್ಥೋಽಹಂ ಮುನೇ ಜಾತೋ ವಾಂಛಿತಾರ್ಥೋ ಮಮಾಗತಃ ।
ಪೀತಾಂಬುಧಿಃ ಪ್ರಸನ್ನಸ್ತ್ವಂ ಯದಿ ಮೇ ಕಿಮು ದುರ್ಲಭಮ್ ॥
ಅತಸ್ತ್ವಂ ವಿರಜಾದೀಕ್ಷಾಂ ಬ್ರೂಹಿ ಮೇ ಮುನಿಸತ್ತಮ ।

ಅರ್ಥ :—ಎಲೈ ಮುನಿವರ್ಯನೇ, ನಾನು ಕೃತಾರ್ಥನಾದೆನು. ಸಮುದ್ರವನ್ನೇ ಆಪೋಶನಮಾಡಿದ ನೀನು ನನಗೆ ಪ್ರಸನ್ನನಾದಮೇಲೆ ಯಾವುದು ತಾನೇ ದುರ್ಲಭವು. ನನಗೆ ಶಿವಪ್ರಸಾದ ಹೇತುವಾದ ಶಿವದೀಕ್ಷೆಯಂ ಮಾಡಿ ಶಿವಲಿಂಗವನ್ನನುಗ್ರಹಿಸಬೇಕೆಂದು ಪ್ರಾರ್ಥಿಸಲು ಅಗಸ್ತ್ಯನು ರಾಮನಿಗೆ ಶಿವದೀಕ್ಷೆಯನೆಸಗಿ ಪಾಶುಪತವ್ರತವನ್ನು ಬೋಧಿಸಿ ತನ್ನಾಶ್ರಮಕ್ಕೆ ತೆರಳಿದನು. ಅಲ್ಲಿಂದ ಶ್ರೀರಾಮನು ಮಹಾ ಶಿವಭಕ್ತನೆನಿಸಿ

ಅಥ ರಾಮಗಿರೌ ರಾಮಃ ಪುಣ್ಯೇ ಗೋದಾವರೀತಟೇ ।
ಶಿವಲಿಂಗಂ ಪ್ರತಿಷ್ಠಾಪ್ಯ ಕೃತ್ವಾ ದೀಕ್ಷಾಂ ಯಥಾ ವಿಧಿ ॥
ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣೈರ್ಯುತಃ ।

ಅರ್ಥ :— ಪುಣ್ಯನದಿಯಲ್ಲಿ ಮಿಂದು ಭಸ್ಮರುದ್ರಾಕ್ಷಗಳಿಂದ ಭೂಷಿತನಾಗಿ ಗೋದಾವರೀ ತೀರದಲ್ಲಿರುವ ರಾಮಗಿರಿಯಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿ ಪೂಜಿಸಲುಪಕ್ರಮಿಸಿದನು. ಒಂದು ತಿಂಗಳವರೆಗೆ ಹಣ್ಣುಗಳ ಆಹಾರವನ್ನೂ, ಮತ್ತೊಂದು ತಿಂಗಳವರೆಗೆ ತರಗೆಲೆಗಳಾಹಾರವನ್ನೂ, ಮುಂದಿನ ತಿಂಗಳು ಕೇವಲ ಜಲಾಹಾರವನ್ನೂ, ಅದರ ಮುಂದಿನ ತಿಂಗಳು ಕೇವಲ ವಾಯ್ವಾಹಾರವನ್ನು ಮಾಡುತ್ತಾ ಎಡಬಿಡದೆ ದಹರಾಕಾಶದಲ್ಲಿ ಜ್ಯೋತೀರೂಪವಾದ ಶಿವಲಿಂಗಮೂರ್ತಿಯನ್ನು ಧ್ಯಾನಿಸುತ್ತ ಈ ನಾಲ್ಕುತಿಂಗಳವರೆಗೆ ಅತ್ಯುಗ್ರವಾದ ತಪಸ್ಸನ್ನಾಚರಿಸಿದನು. ಅಷ್ಟರಲ್ಲಿ ಪ್ರಳಯಕಾಲದ ಗುಡುಗಿನಂತೆ ಅತಿಭಯಂಕರವಾದ ದಿಗ್ಭಿತ್ತಿಗಳನ್ನು ಭೇದಿಸುವಂತೆ ಒಂದಾನೊಂದು ಧ್ವನಿಯು ಕೇಳಿಸಿತು. ಆಗ ಶ್ರೀರಾಮನು ಭಯಭ್ರಾಂತಿಯಿಂದೊಡಗೂಡಿ ಶಿರವಂ ಮೇಲಕ್ಕೆತ್ತಿನೋಡಲು ಅದ್ಭುತವಾದೊಂದು ತೇಜಃಪುಂಜವು ಕಾಣಿಸಿತು. ಆಗ ಇದು ಕರಾಳರಾಕ್ಷಸನ ಮಾಯೆಯೆಂದು ಚಕಿತನಾಗಿ ಕೋಪೋದ್ರೇಕದಿಂದ ಯುದ್ಧಕ್ಕೆ ಸಿದ್ಧನಾಗಿ ಬಿಲ್ಲುಬಾಣಗಳನ್ನೂ ಚಕ್ರ, ಮಹಾಚಕ್ರ, ಕಾಲಚಕ್ರ ಮುಂತಾದ ಅನೇಕಾನೇಕ ಶಸ್ತ್ರಾಸ್ತ್ರಗಳನ್ನುಉಪಯೋಗಿಸಿದನು. ಇವುಗಳೆಲ್ಲವೂ ಸಮುದ್ರದಲ್ಲಿ ಬೀಳುವ ಆನೆಕಲ್ಲಿನಂತೆ ಆ ತೇಜೋಮಂಡಲದಲ್ಲಿ ಮಾಯವಾದವು. ಈ ಭೀಕರಸ್ಥಿತಿಯನ್ನು ನೋಡಿ ಲಕ್ಷ್ಮಣನು ಮೂರ್ಛಿತನಾಗಿ ತಕ್ಷಣವೇ ನೆಲಕ್ಕುರುಳಿದನು. ಶ್ರೀರಾಮನು ಭಯದಿಂದಾಕುಲನಾಗಿ ಭೂಮಿಗೆ ಮೊಣಕಾಲುಗಳನ್ನೂರಿ ಕಣ್ಣುಗಳನ್ನು ಮುಚ್ಚಿಕೊಂಡು ಉಚ್ಚಸ್ವರದಿಂದ ಶಿವಸಹಸ್ರನಾಮಗಳನ್ನುಚ್ಚರಿಸುತ್ತ ನಾನಾವಿಧ ಸ್ತೋತ್ರಗಳಿಂದ ಪ್ರಾರ್ಥಿಸಿ ಧ್ಯಾನನಿರತನಾಗಿರುವಲ್ಲಿ ಮತ್ತೊಂದುಸಾರಿ ಸಿಡಿಲಿನಂತೆ ಅತಿಭೀಕರವಾದೊಂದು ಧ್ವನಿಯು ಕೇಳಿಸಿತು ಭೂಮಿಯು ಗಡಗಡನೆ ನಡುಗಿತು. ಗಿರಿಗಳು ಕಂಪಿಸಿದವು. ದಶದಿಶೆಗಳು ಮೊಳಗಿದವು. ದೇವತೆಗಳು ಅಂತರಿಕ್ಷದೊಳು ಪುಷ್ಪವೃಷ್ಟಿಯಂ ಸುರಿಸಿದರು. ಶ್ರೀರಾಮನು ಧ್ಯಾನವಂ ಪೂರೈಸಿ ಕರವ

ಜೋಡಿಸಿ ಮೆಲ್ಲಮೆಲ್ಲನೆ ಮೇಲಕ್ಕೇಳುವಷ್ಟರಲ್ಲಿ ವೃಷಭಾರೂಢನಾದ, ಭಾನುಕೋಟಿಪ್ರಕಾಶನಾದ ಶಿವನು ಪ್ರತ್ಯಕ್ಷನಾಗಿ ಸಮಾಧಾನಗೊಳಿಸಿ, ವರವ ನೀಡಿ ಜಯಸಾಧಕಗಳಾದ ಪಾಶುಪತಾದಿ ದಿವ್ಯಾಸ್ತ್ರಗಳನ್ನು ಅನುಗ್ರಹಿಸಿ

ಭಕ್ತಿಯೋಗೋ ಮಯಾ ಪ್ರೋಕ್ತ ಏವಂ ಕುರು ರಘೂತ್ತಮ ।
ಸರ್ವಕಾಮಪ್ರದಾನ್ಮತ್ತಃ ಕಿಮನ್ಯತ್ಜ್ಞಾತುಮಿಚ್ಛಸಿ ॥

ಅರ್ಥ :—ಎಲೈ ಶ್ರೀರಾಮನೇ! ಈಗ ನಿನಗೆ ಭಕ್ತಿಯೋಗವನ್ನು ಉಪದೇಶ ಮಾಡಿರುವೆನು. ಇನ್ನು ನೀನೇನನ್ನಪೇಕ್ಷಿಸುವೆಯೆಂದು ಈಶ್ವರನು ಕೇಳಲು—

ಭಗವಾನ್ ಮೋಕ್ಷಮಾರ್ಗೋಽಯಂ ತ್ವಯಾ ಸಮ್ಯಗುದಾಹೃತಃ ।
ತತ್ರಾಧಿಕಾರಿಣಂ ಬ್ರೂಹಿ ತತ್ರ ಮೇ ಸಂಶಯೋ ಮಹಾನ್ ॥

ಅರ್ಥ :—ಓ ದೇವದೇವನಾದ ಪರಮೇಶ್ವರನೇ, ಲೋಕಕಂಟಕನಾದ ರಾವಣನನ್ನು ಜಯಿಸುವ ಮಹಾಸ್ತ್ರಗಳನ್ನೂ ಅದಕ್ಕೆ ತಕ್ಕ ಸೇನಾಬಲವನ್ನೂ ಅನುಗ್ರಹಿಸಿ ಮೋಕ್ಷಮಾರ್ಗವನ್ನು ಉಪದೇಶಮಾಡಿರುವೆ. ಇನ್ನು ಆ ಮೋಕ್ಷಕ್ಕಧಿಕಾರಿಗಳಾರೆಂಬುದನ್ನು ತಿಳಿಯಲಪೇಕ್ಷಿಸುವೆನೆಂದು ಪ್ರಾರ್ಥಿಸಲು. ಅದಕ್ಕೆ ಈಶ್ವರನು—

ಬಹುನಾತ್ರ ಕಿಮುಕ್ತೇನ ಯಸ್ಯ ಭಕ್ತಿಃಶಿವಾರ್ಚನೇ ।
ಸ ಏವಾತ್ರಾಧಿಕಾರೀ ಸ್ಯಾನ್ನಾನ್ಯಚಿತ್ತಃ ಕಥಂ ಚ ನ ॥

ಅರ್ಥ :—ಎಲೈ ರಾಮನೇ! ಬಹಳ ಹೇಳಿ ಪ್ರಯೋಜನವಿಲ್ಲ. ಯಾವನು ಧೃಢಮನಸ್ಸಿನಿಂದ ಶಿವಾರಾಧನೆಯಲ್ಲಿ ಭಕ್ತಿಯುಳ್ಳವನಾಗಿರುವನೋ ಅವನೇ ಮೋಕ್ಷಾಧಿಕಾರಿಯೆಂದು ಹೇಳಿ

ಜಡಾಂಧೋ ಬಧಿರೋ ಮೂಕೋ ನಿಶ್ಶೌಚಃ ಕರ್ಮವರ್ಜಿತಃ ।
ಅಜ್ಞೋಽಪಹಾಸೋಽಭಕ್ತಶ್ಚ ಭೂತಿರುದ್ರಾಕ್ಷಧಾರಣೇ ॥

ಅರ್ಥ :—ಬುದ್ಧಿಯಿಲ್ಲದವನು, ಕಣ್ಣಿಲ್ಲದವನು, ಕಿವಿಯಿಲ್ಲದವನು, ಮಾತಿಲ್ಲದವನು, ವಿಹಿತಕರ್ಮಾಚರಣೆಯಿಲ್ಲದವನು, ದೈವಭಕ್ತಿಯಿಲ್ಲದ

ವನು, ಅಪಹಾಸಕನು, ವಿಭೂತಿರುದ್ರಾಕ್ಷಗಳಲ್ಲಿ ನಿಷ್ಠೆಯಿಲ್ಲದವನು ಮುಂತಾದವರು ಮೋಕ್ಷಕ್ಕಧಿಕಾರಿಗಳಲ್ಲ.

ಲಿಂಗಿನೋ ಯಶ್ಚ ವಾ ದ್ವೇಷ್ಟಿ ತೇ ನೈವಾತ್ರಾಧಿಕಾರಿಣಃ ॥

ಅರ್ಥ:—ಯಾರು ಶಿವಲಿಂಗಧಾರಿಗಳನ್ನು ದ್ವೇಷಿಸುವರೋ, ಅವರು ಮೋಕ್ಷವಿದ್ಯೆಗೆ ಅಧಿಕಾರಿಗಳಾಗುವುದಿಲ್ಲವು.



# ಪುರಾಣಗಳು - ಲಿಂಗಧಾರಣ

## " ಮಹಾಜನೋ ಯೇನ ಗತಸ್ಸಪಂಥಾಃ "

ಶಾಸ್ತ್ರಜ್ಞರೂ, ತಪೋನಿಷ್ಠರೂ, ಜ್ಞಾನವೃದ್ಧರೂ, ಆದ ಮಹಾಜನರು ಪೂರ್ವಕಾಲದಿಂದ ಯಾವ ಮಾರ್ಗವನ್ನನುಸರಿಸಿರುತ್ತಾರೆಯೋ ಆ ಮಾರ್ಗವನ್ನೇ ಎಲ್ಲರೂ ಅನುಸರಿಸಬೇಕೆಂಬ ಲೋಕನ್ಯಾಯಾನುಸಾರವಾಗಿ ಹಿಂದೆ ಇಂತಹ ಶಿವಲಿಂಗವನ್ನು ಯಾರು ಯಾರು ಕಂಠಾದ್ಯುತ್ತಮಾಂಗಗಳಲ್ಲಿ ಧರಿಸಿಯೂ, ಆರಾಧಿಸಿಯೂ, ಯಾವ ಯಾವ ಫಲವನ್ನು ಪಡೆದರೆಂಬುದನ್ನು ವ್ಯಾಸಮಹರ್ಷಿಗಳು ರಚಿಸಿರುವ ಲೈಂಗ್ಯಪುರಾಣದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ—

ಕಶ್ಯಪಾತ್ರಿಭರದ್ವಾಜಗೌತಮಾದ್ಯಾ ಮಹರ್ಷಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥
ನಾರಾಯಣೋಽಪಿ, ಭಗವಾನ್ ದೇವಾ ಬ್ರಹ್ಮಾದಯೋಽನಘಾಃ ।
ಧಾರಯಂತ್ಯುತ್ತಮಾಂಗೇಷು ಶಿವಲಿಂಗಮನಾಮಯಮ್ ॥
ಲಕ್ಷ್ಮೀಸರಸ್ವತೀಮುಖ್ಯಾಸ್ಸ್ವಲಲಾಟೋರ್ಧ್ವದೇಶಕೇ ।
ಧಾರಯಂತ್ಯಪ್ರಮಾದೇನ ಲಿಂಗಂ ತ್ರಿಭುವನೇಶ್ವರಮ್ ॥

(ಲಿಂಗಪುರಾಣ)

ಅರ್ಥ :—ಮಹಾತಪಸ್ವಿಗಳಾದ ಕಶ್ಯಪ, ಅತ್ರಿ, ಭರದ್ವಾಜ, ಗೌತಮ ಮುಂತಾದ ಮಹರ್ಷಿಗಳೂ, ಶಿವಲಿಂಗವನ್ನು ತಮ್ಮ ಉತ್ತಮಾಂಗದಲ್ಲಿ ಎಡೆಬಿಡದೆ ಧರಿಸಿರುತ್ತಾರೆ. ಮತ್ತು ಷಡ್ಗುಣೈಶ್ವರ್ಯಶಾಲಿಗಳಾದ ನಾರಾಯಣನು, ಚತುರ್ಮುಖ ಬ್ರಹ್ಮನೂ, ಇಂದ್ರಾದಿ ಅಷ್ಟದಿಕ್ಪಾಲಕರೂ ಭವರೋಗವಿನಾಶಕವಾದ ಶಿವಲಿಂಗವನ್ನು ತಮ್ಮ ಉತ್ತಮಾಂಗಗಳಲ್ಲಿ ಧರಿಸಿರುತ್ತಾರೆ. ಮತ್ತು ಲಕ್ಷ್ಮೀದೇವಿಯು, ಸರಸ್ವತೀದೇವಿಯು, ಶಚೀದೇವಿಯು ಮುಂತಾದ ಮಹಾಶಕ್ತಿಯರು ತ್ರಿಭುವನಾಧಿಪತಿಯಾದ ಶಿವಲಿಂಗವನ್ನು ಬಹು ಎಚ್ಚರಿಕೆಯಿಂದ ತಮ್ಮ ತಮ್ಮ ಹಣೆಗಳ ಮೇಲ್ಭಾಗದಲ್ಲಿ ಧರಿಸಿರುತ್ತಾರೆ—

ಸ್ಕಾಂದಪುರಾಣದ ಶಂಕರಸಂಹಿತೆಯಲ್ಲಿ :—

ಉರಸ್ಥಲೇ ಹರಿರ್ಲಿಂಗಂ ಧೃತ್ವಾ ಮೂರ್ಧ್ನಿ ಪಿತಾಮಹಃ ।
ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪತುಃ ॥೪೩॥
ಮಲ್ಲಿಂಗಂ ಮಸ್ತಕಾದ್ಯಂಗೇ ಧೃತ್ವಾ ಶಕ್ರಪುರೋಗಮಾಃ ।
ದೇವಾ ಮಾಂ ಲಿಂಗಮಧ್ಯಸ್ಥಂ ಪೂಜ್ಯಸ್ವಂ ಸ್ವಂ ಪದಂ ಯಯುಃ ॥೪೪॥
ಲಕ್ಷ್ಮೀಸರಸ್ವತೀಮುಖ್ಯಾ ದೇವ್ಯೋ ಮಲ್ಲಿಂಗಮಾದರಾತ್ ।
ಧೃತ್ವಾ ನಿಜಾಂಗೇ ತಲ್ಲೀನಭಾವಾ ಜಗ್ಮುಃ ಪರಂ ಸುಖಮ್ ॥೪೫॥

(ಸ್ಕಾಂದ ಶ. ಸಂ. ಅ. ೪೪)

ಅರ್ಥ :—ಶಿವಲಿಂಗವನ್ನು ವಿಷ್ಣುವು ವಕ್ಷಸ್ಥಲದಲ್ಲಿಯೂ, ಬ್ರಹ್ಮನು ಶಿರಸ್ಸಿನಲ್ಲಿಯೂ ಧರಿಸುತ್ತ ಆ ಲಿಂಗಮೂರ್ತಿಯಲ್ಲಿ ನೆಲೆಸಿರುವ ನನ್ನನ್ನು ಯಾವಾಗಲೂ ಪೂಜಿಸುತ್ತಿದ್ದುದರಿಂದ ವಿಷ್ಣುಪದವಿಯನ್ನೂ, ಬ್ರಹ್ಮಪದವಿಯನ್ನೂ ಪಡೆದರು. ಇಂದ್ರಾದಿದೇವತೆಗಳು ಶಿವಲಿಂಗವನ್ನು ಮಸ್ತಕ ಕಂಠ ಉರಸ್ಥಲಾದಿ ಉತ್ತಮಾಂಗಗಳಲ್ಲಿ ಧರಿಸುತ್ತ ಯಾವಾಗಲೂ ಪೂಜಿಸುತ್ತಿರುವುದರಿಂದ ಇಂದ್ರಾದಿ ತಮ್ಮ ತಮ್ಮ ಪದವಿಗಳನ್ನು ಪಡೆದರು. ಲಕ್ಷ್ಮೀ ಸರಸ್ವತೀ ಮುಂತಾದ ದೇವಿಯರು ಆ ಶಿವಲಿಂಗಮೂರ್ತಿಯನ್ನು ತಮ್ಮ ಅಂಗಗಳಲ್ಲಿ ಧರಿಸಿ ಆ ಲಿಂಗದಲ್ಲಿಯೇ ಲೀನವಾದ ಮನಸ್ಸುಳ್ಳರಾದುದರಿಂದ ನಿರತಿಶಯವಾದ ಸುಖವಂ ಪಡೆದರು.

ಸಿದ್ಧಾಂತಶಿಖಾಮಣಿಯಲ್ಲಿ :—

ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥
ಲಕ್ಷ್ಮ್ಯಾದಿಶಕ್ತಯಸ್ಸರ್ವಾಶ್ಶಿವಭಕ್ತಿವಿಭಾವಿತಾಃ ।
ಧಾರಯಂತ್ಯಲಿಕಾಗ್ರೇಷು ಶಿವಲಿಂಗಮಹರ್ನಿಶಮ್ ॥

ಅರ್ಥ :—ಬ್ರಹ್ಮವಿಷ್ಣು ಮುಂತಾದ ದೇವತೆಗಳೂ ಗೌತಮಾದಿ ಮಹರ್ಷಿಗಳೂ, ಲಕ್ಷ್ಮೀಸರಸ್ವತ್ಯಾದಿ ಶಕ್ತಿಯರೂ, ಶಿವಭಕ್ತಿ ಪರಾಯಣರಾಗಿ ಯಾವಾಗಲೂ ತಮ್ಮ ತಮ್ಮ ಉತ್ತಮಾಂಗಗಳಲ್ಲಿ ಶಿವಲಿಂಗವನ್ನು ಧರಿಸುತ್ತಾರೆಂದು ರೇಣುಕ ಭಗವತ್ಪಾದರು ಹೇಳಿರುತ್ತಾರೆ.

ಬ್ರಹ್ಮಕೈವರ್ತದಲ್ಲಿ :—

ರೌದ್ರಂ ಸಮಭ್ಯರ್ಚ್ಯ ಹಿ ಲಿಂಗಮಾದೌ ।
ಶಿಲಾಮಯಂ ಚಾರುಹರಿಸ್ಸ್ವಭಕ್ತ್ಯಾ ॥
ಸುದುರ್ಲಭಂ ವೈಷ್ಣವಮಾದ್ಯಮುಗ್ರ್ಯ ।
ಮವಾಪ್ತವಾನೇಷ ಪರಂ ಪದಂ ತತ್ ॥

ಅರ್ಥ :—ಹರಿಯು ಶಿಲಾಮಯವಾದ ಲಿಂಗವನ್ನು ಭಕ್ತಿಯಿಂದಾರಾಧಿಸಿ ಯಾರಿಂದಲೂ ಶಕ್ಯವಾಗದಿರುವ ಜಗದ್ರಕ್ಷಣದ ಕರ್ತೃತ್ವವನ್ನು ವಹಿಸಿ ವಿಷ್ಣು ಸಂಬಂಧವಾದ ಶ್ರೇಷ್ಠ ಪದವಿಯನ್ನು ಪಡೆದನು.

ಆದಿತ್ಯಪುರಾಣದಲ್ಲಿ :—

ಬ್ರಹ್ಮಾ ಪೂಜಯತೇ ನಿತ್ಯಂ ಲಿಂಗಂ ಶೈಲಮಯಂ ಶುಭಮ್ ।
ತಸ್ಯ ಸಂಪೂಜನಾದೇವ ಪ್ರಾಪ್ತಂ ಬ್ರಹ್ಮತ್ವಮುತ್ತಮಮ್ ॥
ಶಕ್ರೋऽಪಿ ದೇವರಾಜೇಂದ್ರೋ ಲಿಂಗಂ ಮಣಿಮಯಂ ಶುಭಮ್ ।
ಭಕ್ತ್ಯಾ ಪೂಜಯತೇ ನಿತ್ಯಂ ತೇನ ಶಕ್ರತ್ವಮಾಪ್ತವಾನ್ ॥
ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ ।
ವಿಷ್ಣುತ್ವಂ ಪ್ರಾಪ್ತವಾಂಸ್ತೇನ ವೈಕುಂಠಂ ಚ ಸನಾತನಮ್ ॥
ಸೋಮೋ ಮುಕ್ತಾಮಯಂ ಲಿಂಗಂ ಧನದೋ ಹೈಮಲಿಂಗಕಮ್ ।
ವಾಯುಃ ಪಿತ್ತಲಜಂ ಲಿಂಗಂ ವಸವಃ ಕಾಂಸ್ಯಲಿಂಗಕಮ್ ॥
ಅಶ್ವಿನೌ ಮರುತಶ್ಚೈವ ಸ್ಫಾಟಿಕಂ ಲಿಂಗಮಾದರಾತ್ ।
ದಿವಾಕರಸ್ತಾಮ್ರಮಯಂ ಪನ್ನಗಾಸ್ತು ಪ್ರವಾಳಕಮ್ ॥
ಅಸುರಾಃ ಕಾರ್ಷ್ಣಜಂ ಲಿಂಗಂ ಪಿಶಾಚಾಸ್ತ್ರಪುಜಂ ತಥಾ ।
ಏವಂ ದೇವಾಸ್ಸಗಂಧರ್ವಾಸ್ಸಯಕ್ಷೋರಗರಾಕ್ಷಸಾಃ ॥
ಪೂಜಯಂತಿ ಸದಾ ಲಿಂಗಮೀಶಾನಂ ಸುರನಾಯಕಮ್ ॥

ಅರ್ಥ :—ಚತುರ್ಮುಖಬ್ರಹ್ಮನು ಪ್ರತಿದಿವಸವೂ ಶಿಲಾಮಯವಾದ ಶಿವಲಿಂಗವನ್ನು ಆರಾಧಿಸಿ ಜಗತ್ಸೃಷ್ಟಿಕರ್ತೃತ್ವವನ್ನೂ, ದೇವತಾಸಾರ್ವಭೌಮನಾದ ದೇವೇಂದ್ರನು ರತ್ನಮಯವಾದ ಶಿವಲಿಂಗವನ್ನು ಆರಾಧಿಸಿ ಸ್ವರ್ಗಾಧಿಪತ್ಯವನ್ನೂ, ವಿಷ್ಣುವು ಇಂದ್ರನೀಲಮಯವಾದ ಲಿಂಗ

ವನ್ನು ಆರಾಧಿಸಿ ಜಗದ್ರಕ್ಷಣ ಕರ್ತೃತ್ವವನ್ನೂ, ಚಂದ್ರನು ಮುಕ್ತಾಮಯವಾದ ಲಿಂಗವನ್ನಾರಾಧಿಸಿ ಜಗತ್ತನ್ನು ಬೆಳಗುವ ಭಾರವನ್ನೂ, ಕುಬೇರನು ಸುವರ್ಣಮಯವಾದ ಲಿಂಗವನ್ನಾರಾಧಿಸಿ ನವನಿಧಿಯ ಆಧಿಪತ್ಯವನ್ನೂ ಪಡೆದರು. ಮತ್ತು ವಾಯುದೇವನು ಪಿತ್ತಲ (ಹಿತ್ತಾಳೆ) ಮಯವಾದ ಲಿಂಗವನ್ನೂ, ಅಷ್ಟವಸುಗಳು ಕಾಂಸ್ಯ (ಕಂಚು) ಲಿಂಗಗಳನ್ನೂ, ಅಶ್ವಿನೀ ದೇವತೆಗಳು ಮತ್ತು ಇತರ ದೇವತೆಗಳು ಸ್ಫಟಿಕಲಿಂಗಗಳನ್ನೂ, ಸೂರ್ಯನು ತಾಮ್ರಲಿಂಗವನ್ನೂ, ನಾಗೇಂದ್ರನು ಹವಳದ ಲಿಂಗವನ್ನೂ, ಅಸುರರು ಕಾರ್ಷಜ (ಮತ್ತಿಮರ) ಲಿಂಗವನ್ನೂ, ಪಿಶಾಚಿಗಳು ತ್ರಪು (ಸೀಸ) ಲಿಂಗವನ್ನೂ ಪೂಜಿಸುತ್ತ ತಮ್ಮ ತಮ್ಮ ಸ್ಥಿರಪದವಿಗಳನ್ನು ಪಡೆದರು. ಯಕ್ಷಗಂಧರ್ವರಾಕ್ಷಸ ಉರಗಾದಿ ಸಕಲದೇವದಾನವರು ದೇವೋತ್ತಮನಾದ ಶಿವನನ್ನು ಆರಾಧಿಸುತ್ತಿರುವರು.

**ಪಾರಾಶರಪುರಾಣದಲ್ಲಿ :—**

ರೌದ್ರಂ ಲಿಂಗಂ ಮಹಾ ವಿಷ್ಣುರ್ಭಕ್ತ್ಯಾ ಶುದ್ಧಂ ಶಿಲಾಮಯಮ್ ।
ಚಾರು ಚಿತ್ರಂ ಸಮಭ್ಯರ್ಚ್ಯ ಲಬ್ಧವಾನುತ್ತಮಂ ಪದಮ್ ॥

ಅರ್ಥ :—ಜಗದ್ರಕ್ಷಣಶೀಲನಾದ ಮಹಾವಿಷ್ಣುವು ಭಕ್ತಿಯಿಂದ ಶಿಲಾಮಯವಾದ ಲಿಂಗವನ್ನು ಪೂಜಿಸಿದ್ದರಿಂದ ಉತ್ತಮವಾದ ಪದವಿಯನ್ನು ಪಡೆದನು.

**ಭಾರತ ದ್ರೋಣಪರ್ವದಲ್ಲಿ :—**

ದೇವದೇವಸ್ತ್ವಚಿಂತ್ಯಾತ್ಮಾಽಜಯ್ಯೋ ವಿಷ್ಣುರವ್ಯಯಃ ॥
ಸರ್ವರೂಪಂ ಭವಂ ಜ್ಞಾತ್ವಾ ಲಿಂಗೇಽರ್ಚಯತಿ ತಂ ಪ್ರಭುಮ್ ।
ತಸ್ಮಿನ್ನಭ್ಯಧಿಕಾಂ ಪ್ರೀತಿಂ ಕರೋತಿ ವೃಷಭಧ್ವಜಃ ॥

ಅರ್ಥ :—ನಾಶರಹಿತನೂ, ಅಜೇಯನೂ, ದೇವೋತ್ತಮನೂ, ಅತಿ ಸೂಕ್ಷ್ಮನೂ, ಅಚಿಂತ್ಯಸ್ವರೂಪನೂ ಆದ ವಿಷ್ಣುವು ಭವಶಬ್ದವಾಚ್ಯನಾದ ನಿಗ್ರಹಾನುಗ್ರಹಕರ್ತನಾದ ಶಿವಲಿಂಗವನ್ನಾರಾಧಿಸಿದ್ದರಿಂದಲೇ ವೃಷಭಧ್ವಜನಾದ ಪರಮೇಶ್ವರನೊಲಿಮೆಯನ್ನು ಪಡೆದನು.

**ಕೂರ್ಮ ಪುರಾಣದಲ್ಲಿ :—**

ಬ್ರಹ್ಮಣಸ್ಸೃಷ್ಟಿಕರ್ತೃತ್ವಂ ವಿಷ್ಣೋರ್ದಾನವಮರ್ದನಮ್ ।
ಸ್ವರ್ಗಾಧಿಪತ್ಯಮಿಂದ್ರಸ್ಯ ಶಿವಲಿಂಗಸ್ಯ ಪೂಜನಾತ್ ॥

**ಅರ್ಥ :—**ಬ್ರಹ್ಮನು ಶಿವಲಿಂಗವನ್ನು ಪೂಜಿಸಿದ್ದರಿಂದ ಜಗತ್ತನ್ನು ನಿರ್ಮಿಸುವ ಸಾಮರ್ಥ್ಯವನ್ನೂ, ವಿಷ್ಣುವು ಸಕಲ ರಾಕ್ಷಸರನ್ನು ಸಂಹರಿಸುವ ಶಕ್ತಿಯನ್ನೂ, ಇಂದ್ರನು ದೇವತಾಸಾರ್ವಭೌಮನೆನಿಸಿ ಸ್ವರ್ಗಲೋಕಾಧಿಪತ್ಯವನ್ನೂ ಪಡೆದರು.

**ಶಂಕಾ :—**ಆದರೆ ಬ್ರಹ್ಮವೈವರ್ತ, ಆದಿತ್ಯಪುರಾಣ, ಮಹಾಭಾರತ ಮುಂತಾದ ಗ್ರಂಥಗಳಲ್ಲಿ ವಿಷ್ಣ್ವಾದಿ ದೇವದಾನವರು ಶಿವಲಿಂಗವನ್ನು ಪೂಜಿಸುತ್ತಿದ್ದರೆಂದು ಹೇಳಲ್ಪಟ್ಟಿದೆಯಲ್ಲದೆ ಶಿವಲಿಂಗವನ್ನು ದೇಹದಲ್ಲಿ ಧರಿಸುತ್ತ, ಹಸ್ತವೆಂಬ ಕರಪೀಠದಲ್ಲಿಟ್ಟು ಪೂಜಿಸುತ್ತಿದ್ದರೆಂದು ಹೇಳಲ್ಪಟ್ಟಿಲ್ಲ. ಆದುದರಿಂದ ಭೂಮಿಯಲ್ಲಿ ಪ್ರತಿಷ್ಠಿತವಾದ **ಸೋಮನಾಥಲಿಂಗ, ಮಲ್ಲಿಕಾರ್ಜುನಲಿಂಗ,** ಕೇದಾರೇಶ್ವರಲಿಂಗ ಮುಂತಾದ ಪುರಾಣಪ್ರಸಿದ್ಧಗಳಾದ ಜ್ಯೋತಿರ್ಲಿಂಗಗಳನ್ನು ಪೂಜಿಸುತ್ತಿದ್ದರೆಂದಾಗಲಿ ಅಥವಾ ಇಂದ್ರನೀಲಸ್ಫಟಿಕಾದಿ ಶಿವಲಿಂಗಗಳನ್ನು ದಾರು ರಜತ ಸುವರ್ಣಾದಿ ಪೀಠಗಳ ಮೇಲಿರಿಸಿ ಪೂಜಿಸುತ್ತಿದ್ದರೆಂದಾಗಲಿ ಹೇಳಬಹುದೇ ಹೊರತು ಸದಾ ದೇಹದಲ್ಲಿ ಧರಿಸಿಕೊಂಡು ನಿಯಮದಿಂದ ಹಸ್ತಪೀಠದಲ್ಲಿ ಪೂಜಿಸುತ್ತಿದ್ದರೆಂದು ಹೇಳಲಾಗುವುದಿಲ್ಲ.

**ಸಮಾಧಾನ :—**ಲಿಂಗಪುರಾಣ, ಸ್ಕಾಂದಪುರಾಣ, ಸಿದ್ಧಾಂತಶಿಖಾಮಣಿ ಮುಂತಾದ ಹಿಂದೆ ಹೇಳಲ್ಪಟ್ಟ ಗ್ರಂಥಗಳಲ್ಲಿ ಬ್ರಹ್ಮ, ವಿಷ್ಣು, ಇಂದ್ರಾದಿ ದೇವತೆಗಳು ಲಕ್ಷ್ಮೀ ಸರಸ್ವತಿ ಮುಂತಾದ ಶಕ್ತಿಯರೂ, ಶಿವಲಿಂಗವನ್ನು ಉತ್ತಮಾಂಗಗಳಲ್ಲಿ ಧರಿಸಿರುವರೆಂದೂ, ಕರಪೀಠಗಳಲ್ಲಿ ಪೂಜಿಸುತ್ತಿರುವರೆಂದೂ ಹೇಳಲ್ಪಟ್ಟಿರುವುದನ್ನು ಪರಿಶೀಲಿಸಿದರೆ ಬ್ರಹ್ಮವೈವರ್ತ, ಆದಿತ್ಯಪುರಾಣ, ಮಹಾಭಾರತಾದಿ ವಚನಗಳಲ್ಲಿ ಸಾಮಾನ್ಯವಾಗಿ ಲಿಂಗಪೂಜೆಯನ್ನು ಹೇಳಿದ್ದರೂ ಮೇಲಣ ವಾಕ್ಯಗಳನ್ನನುಸರಿಸಿ ಹಸ್ತಪೀಠದಲ್ಲಿಟ್ಟು ಪೂಜಿಸುತ್ತಿದ್ದರೆಂದೂ, ಕಂಠಾದಿ ಸ್ಥಾನಗಳಲ್ಲಿ ಧರಿಸುತ್ತಿದ್ದರೆಂದೂ

ಏಕವಾಕ್ಯತೆಯನ್ನು ಕಲ್ಪಿಸಬೇಕಲ್ಲದೆ ಸುವರ್ಣಾದಿ ಪೀಠಗಳಲ್ಲಿಟ್ಟು ಪೂಜಿಸುತ್ತಿರಲಿಲ್ಲವೆಂದು ಧೃಢಪಡುವುದರಿಂದ ವಿಷ್ಣುಬ್ರಹ್ಮಾದಿ ಸಕಲ ದೇವತೆಗಳೂ ಲಿಂಗವಂ ಧರಿಸಿದ್ದರೆಂಬ ಅರ್ಥವು ನಿಶ್ಚಿತವಾಗುವುದು.

ಇದಲ್ಲದೆ—

ಈಶ್ವರಂ ತಮಹಂ ವಂದೇ ಯಸ್ಯ ಲಿಂಗಮಹರ್ನಿಶವ್ ।
ಯಜಂತೇ ಸಹಭಾರ್ಯಾಭಿರಿಂದ್ರಜ್ಯೇಷ್ಠಾ ಮರುದ್ಗಣಾಃ ॥

(ಬ್ರಹ್ಮಾಂಡ ಪುರಾಣ ಚಿದಂಬರ ಸಂಹಿತೆ)

ಅರ್ಥ :—ಇಂದ್ರಾದಿ ದೇವತೆಗಳು ತಮ್ಮತಮ್ಮ ಪತ್ನಿಯರೊಡಗೂಡಿ ಎಡಬಿಡದೆ ರಾತ್ರಿಹಗಲು ಯಾವ ಪರಶಿವಮೂರ್ತಿಯಾದ ಲಿಂಗವನ್ನು ಧರಿಸಿರುತ್ತಾರೆಯೋ ಅಂತಹ ಶಿವಲಿಂಗವನ್ನು ನಮಸ್ಕರಿಸುವೆನು.

ಎಂದು ಬ್ರಹ್ಮಾಂಡಪುರಾಣದ ಚಿದಂಬರಸಂಹಿತೆಯಲ್ಲಿ ಹೇಳಿರುವುದರಿಂದ ಇಂದ್ರಾದಿ ದೇವತೆಗಳು ಶಿವಲಿಂಗವನ್ನು ಧರಿಸಿದ್ದರೆಂದು ಸ್ಪಷ್ಟವಾಗುತ್ತದೆ. ಈ ಶ್ಲೋಕದಲ್ಲಿರುವ "**ಯಜಂತೇ**" ಎಂಬ ಧಾತುವಿಗೆ ಧರಿಸುತ್ತಾರೆಂಬ ಅರ್ಥವು "**ಯಜ ದೇವಪೂಜಾಸಂಗತಿಕರಣದಾನೇಷು**" ಎಂಬ ಪಾಣಿನೀಯ ಧಾತುಪಾಠದಲ್ಲಿ "**ಸಂಗತಿಕರಣ**" ಎಂಬುದೊಂದು ಅರ್ಥವನ್ನು ಅಂಗೀಕಾರಮಾಡಿರುತ್ತಾರೆ. ಈ ಸಂಗತಿಕರಣವು ಸಂಬಂಧರೂಪವಾದುದರಿಂದ ದೇವತೆಗಳು ಅವಿಭಾಜ್ಯ ಸಂಬಂಧದಿಂದ ಶಿವಲಿಂಗವನ್ನು ಧರಿಸಿರುತ್ತಾರೆಂಬ ಅರ್ಥವು ನಿಶ್ಚಯವಾಗುವುದು.

ಶಂಕಾ :—ಆದರೆ ಈ ಶ್ಲೋಕದಲ್ಲಿ ಬಂದಿರುವ "**ಯಜಂತೇ**" ಎಂಬ ಧಾತುವಿಗೆ ದೇವಪೂಜಾಪರವಾದ ಅರ್ಥವೂ ಸಹ ಹೇಳಲ್ಪಟ್ಟಿರುವುದರಿಂದ ಆ ಇಂದ್ರಾದಿ ದೇವತೆಗಳು ಸುವರ್ಣ ರಜತ ದಾರು ಮುಂತಾದ ಬಾಹ್ಯಪೀಠಗಳ ಮೇಲೆ ರತ್ನಮಯಾದಿ ಲಿಂಗಗಳನ್ನಿಟ್ಟು ಪ್ರಾತರಾದಿ ಒಂದೊಂದು ಸಮಯಗಳಲ್ಲಿ ಗಂಧಾದಿ ಪೂಜಾದ್ರವ್ಯಗಳನ್ನು ಧರಿಸುತ್ತಿರಬೇಕೆಂಬ ಅರ್ಥವೂ ಸಹ ಆಗುತ್ತಿರುವಲ್ಲಿ ಇಂತಹ ಕಾದಾಚಿತ್ಕ (ಒಂದೊಂದು ಕಾಲ) ಸಂಬಂಧವನ್ನು ಬಿಟ್ಟು ಅವಿಭಾಜ್ಯ (ರಾತ್ರಿ ಹಗಲೂ) ಸಂಬಂಧದಿಂದ ದೇಹದಲ್ಲಿ ಧರಿಸತಕ್ಕುದೆಂಬ ಅರ್ಥವನ್ನೇಕೆ ಅಂಗೀಕರಿಸಬೇಕು?

**ಸಮಾಧಾನ :**---ಈಶ್ವರಂ..............ಮರುದ್ಗಣಾಃ || ಎಂಬ ಚಿದಂಬರ ಸಂಹಿತೆಯ ಶ್ಲೋಕದಲ್ಲಿ " **ಯಜಂತೇ** " ಎಂಬ ಕ್ರಿಯಾಪದ. ವಿರುವುದಲ್ಲದೆ " **ಅಹರ್ನಿಶಂ** " ಎಂಬುದೊಂದು ಪದವು ಸಹ ಇರುವುದು. ಇಲ್ಲಿ "ಅಹಃ" ಪದವು ಸಂಪೂರ್ಣವಾಗಿ ಹಗಲೆಂಬ ಅರ್ಥವನ್ನೂ "ನಿಶಾ" ಪದವು ಸಂಪೂರ್ಣವಾಗಿ ರಾತ್ರಿಯೆಂಬ ಅರ್ಥವನ್ನೂ ಕೊಡುತ್ತವೆ. ಇಂತಹ ಅಹ ರ್ನಿಶಾ ಶಬ್ದಗಳು " **ಯಜಂತೇ** " ಎಂಬ ಪದದ ಯಜಧಾತುವಿನಲ್ಲಿ ವಿಶೇಷಣ ಸಂಬಂಧದಿಂದ ಅನ್ವಯಿಸುವುದರಿಂದ **ಹಗಲು ರಾತ್ರಿ** ಎಂಬ ಕಾಲಭೇದವಿಲ್ಲದೆ ಎಲ್ಲಾ ಕಾಲಗಳಲ್ಲಿಯೂ ಇಷ್ಟಲಿಂಗವನ್ನು ಅವಿಭಾಜ್ಯ ಸಂಬಂಧದಿಂದ (ವಿಚ್ಛಿತ್ತಿಯಿಲ್ಲದೆ) ಧರಿಸಿರಬೇಕೆಂಬ ಅರ್ಥವು ಸಿದ್ಧವಾಗು ತ್ತದೆ. ಹೊರಗಣ ಪೀಠಗಳ ಮೇಲಿಟ್ಟು ಒಂದೊಂದು ಶುಭದಿವಸಗಳಲ್ಲಿ ಪವಿತ್ರಹಸ್ತದಿಂದ ಪೂಜಿಸುವುದೆಂಬ ಕಾದಾಚಿತ್ಕಸಂಬಂಧವನ್ನು ಕಲ್ಪಿಸಲು ಅವಕಾಶವಿಲ್ಲ.

**ಶಂಕಾ :**—" **ಯಜಂತೇ** " ಎಂಬ ಧಾತುವಿಗೆ ದೇವಪೂಜಾರೂಪ ವಾದ ಈ ಅರ್ಥವನ್ನಂಗೀಕರಿಸದೆ **ಸಂಗತಿಕರಣ** (ಧಾರಣ) ರೂಪವಾದ ಅರ್ಥವನ್ನಂಗೀಕರಿಸುವುದರಿಂದ ಅಹರ್ನಿಶಾಕಾಲಿಕತ್ವವು (ಸದಾ ಲಿಂಗ ವನ್ನು ದೇಹದಲ್ಲಿ ಧರಿಸುವುದು) ಸಿದ್ಧವಾದರೂ ಆಗಲಿ; ಆದರೆ ಕಂಠಾದಿ ಉತ್ತಮಾಂಗಗಳಲ್ಲಿ ಅವಿಭಾಜ್ಯಸಂಬಂಧದಿಂದ ಲಿಂಗವನ್ನು ಧರಿಸಿರಬೇ ಕೆಂಬ ಅರ್ಥವು ಹೇಗೆ ಸಿದ್ಧವಾದೀತು? " **ಯಜಂತೇ** " ಎಂಬ ಕ್ರಿಯಾ ಪದಕ್ಕೆ ಅಂತರಂಗದಲ್ಲಿ (ಮನಸ್ಸಿನಲ್ಲಿ) ಅಹೋರಾತ್ರಿಗಳಲ್ಲಿ ಎಡೆಬಿಡದೆ ಅವಿಚ್ಛಿನ್ನವಾಗಿ ಶಿವಲಿಂಗವನ್ನು ಧ್ಯಾನಿಸಬೇಕೆಂಬ ಅರ್ಥವನ್ನು ಮಾಡ ಬಹುದಲ್ಲವೆ?

**ಸಮಾಧಾನ :**—ಆ ಶ್ಲೋಕದಲ್ಲಿ ಬಂದಿರುವ "**ಯಜಂತೇ**" ಎಂಬ ಧಾತುವಿಗೆ ಹಾಗೆ ಅಂತರ್ಧಾರಣ ಪರವಾಗಿ ಅರ್ಥಮಾಡಲವಕಾಶವಿಲ್ಲ. ಏಕೆಂದರೆ–ಈ ಶ್ಲೋಕದಲ್ಲಿ ಅಂಥದೊಂದು "**ಅಂತಃ**" ಎಂಬ ಅರ್ಥವುಳ್ಳ ಪದವಾವುದೂ ಬಂದಿರುವುದಿಲ್ಲ. ಹಾಗೆ ಬಾರದೆ ಇದ್ದರೂ ಅಂತರ್ಧಾರಣ ರೂಪವಾಗಿ ಅರ್ಥಮಾಡುವುದಕ್ಕಾಗಿ ಇಲ್ಲದಿರುವ "**ಅಂತಃ**" ಎಂಬ

ಪದವನ್ನು ಸೇರಿಸಿಕೊಳ್ಳುವುದಾದರೆ ಆಗ ಅಧ್ಯಾಹಾರ ದೋಷವು ಪ್ರಾಪ್ತವಾಗುತ್ತದೆ. ಮತ್ತು "ಮಲ್ಲಿಂಗಂ ಮಸ್ತಕಾದ್ಯಂಗೇ ಧೃತ್ವಾ ಶಕ್ರಪುರೋಗಮಾಃ" ಇತ್ಯಾದಿ ಕಂಠ ಮಸ್ತಕಾದಿ ಸ್ಥೂಲಾಂಗಗಳಲ್ಲಿ ಲಿಂಗಧಾರಣವನ್ನು ವಿಧಾನಮಾಡುವ ಶಂಕರಸಂಹಿತಾ ಮುಂತಾದ ಗ್ರಂಥಗಳಿಗೆ ವಿರೋಧವು ಸಂಭವಿಸಬೇಕಾಗುವುದು. ಆದುದರಿಂದ "ಯಜಂತೇ" ಎಂಬ ಕ್ರಿಯಾಪದವು ಬಹಿರ್ಲಿಂಗಧಾರಣಪರವೆಂದು ಹೇಳುವುದೇ ಉತ್ತಮ ಪಕ್ಷವು.



## ಶಿವಾಗಮಗಳು-ಲಿಂಗಧಾರಣೆ

ಹೀಗೆ ಯಾವಜ್ಜೀವವೂ ಶರೀರದಲ್ಲಿ ಶಿವಲಿಂಗವನ್ನು ಧರಿಸಬೇಕೆಂದೂ, ಹಸ್ತಪೀಠದಲ್ಲಿರಿಸಿ ಪೂಜಿಸುತ್ತಿರಬೇಕೆಂದೂ, ಕೆಲವು ಆಗಮ ವಚನಗಳನ್ನು ಹಿಂದೆ ಉದಾಹರಿಸಿರುತ್ತೇವೆ. ಇದರಂತೆ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶೈವಾಗಮಗಳಲ್ಲಿಯೂ ಲಿಂಗಧಾರಣವು ಹೇಳಲ್ಪಟ್ಟಿರುತ್ತದೆ.

ಶಂಕಾ—ಹಾಗಾದರೆ ನೀವು ಹೇಳುವಂತೆ ಅಂಗದಲ್ಲಿ ಲಿಂಗಧಾರಣವೂ, ಹಸ್ತದಲ್ಲಿ ಪೂಜೆಯೂ ಆಗಮಗಳಲ್ಲಿ ಹೇಳಲ್ಪಟ್ಟಿರಬಹುದು. ನಾವು ಆಗಮಗಳನ್ನೇ ಪ್ರಮಾಣವಚನಗಳೆಂದು ಒಪ್ಪುವುದಿಲ್ಲ. ಇಂಥ ಅಪ್ರಮಾಣಗಳಾದ ಆಗಮಗಳಲ್ಲಿ ಲಿಂಗಧಾರಣವು ಹೇಳಲ್ಪಟ್ಟ ಮಾತ್ರದಿಂದ ನೀವು ಹೇಳುವ ಬಹಿರ್ಲಿಂಗಧಾರಣವೂ, ಹಸ್ತಪೀಠಾಧಿಕರಣಕ ಪೂಜೆಯೂ, ಹೇಗೆತಾನೆ ಸಿದ್ಧವಾದೀತು?

ಸಮಾಧಾನ—ಆಗಮಗಳು ಒಂದಲ್ಲ ಎರಡಲ್ಲ ಅಸಂಖ್ಯಾತಗಳಾಗಿವೆ. ಅವುಗಳಲ್ಲಿ ಶೈವಾಗಮಗಳೂ, ವೈಷ್ಣವಾಗಮಗಳೂ, ಬೌದ್ಧಾಗಮಗಳೂ, ಜೈನಾಗಮಗಳೂ ಇರುತ್ತವೆ. ಇವುಗಳೆಲ್ಲಾ ಅಪ್ರಮಾಣವೋ ಅಥವಾ ಶಿವನಿಂದ ಹೇಳಲ್ಪಟ್ಟ, ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಆಗಮಗಳು ಮಾತ್ರ ಅಪ್ರಮಾಣಗಳೋ ಎಂಬ ವಿಕಲ್ಪಗಳುದಿಸುವವು. ಎಲ್ಲಾ ಆಗಮಗಳೂ ಅಪ್ರಮಾಣಗಳೆಂದು ಹೇಳುವುದಾದರೆ;

> "'ನ ಗಾಯತ್ರ್ಯಾಃ ಪರಂ ಮಂತ್ರಂ' 'ಅಘೋರಾನ್ನಾಪರೋ ಮಂತ್ರೋ। ನಾಸ್ತಿ ತತ್ತ್ವಂ ಗುರೋಃ ಪರಮ್'"

ಗಾಯತ್ರೀ ಮಂತ್ರಕ್ಕಿಂತ ಶ್ರೇಷ್ಠವಾದ ಮಂತ್ರವಿಲ್ಲ. (ವೇದಮಾತಾ ಚ ಗಾಯತ್ರೀ) ಅಘೋರಮಂತ್ರಕ್ಕಿಂತ ಶ್ರೇಷ್ಠವಾದ ಮಂತ್ರವಿಲ್ಲ, ಗುರುವಿಗಿಂತ ಶ್ರೇಷ್ಠ ತತ್ತ್ವವಿಲ್ಲ'ವೆಂದು ಹೇಳಲ್ಪಟ್ಟಿರುವುದರಿಂದ ಋಗಾದಿ ವೇದಗಳಿಗೆ ಮಾತೃಸ್ವರೂಪವಾದ ಗಾಯತ್ರ್ಯಾದಿ ಮಂತ್ರಗಳ ಅನುಷ್ಠಾನ

ಪುರಶ್ಚರಣಗಳನ್ನು ಅವಶ್ಯವಾಗಿ ಅನುಷ್ಠಿಸಬೇಕಾಗಿರುತ್ತದೆ. ಮತ್ತು ಜನನ, ಜೀವನ, ತಾಡನ, ಬೋಧನ, ಅಭಿಷೇಕ, ವಿಮಲೀಕರಣ, ಆಪ್ಯಾಯನ, ಕರ್ಷಣ, ದೀಪನ, ಗುಪ್ತಿ ಎಂಬ ಹತ್ತು ಮಂತ್ರ ಸಂಸ್ಕಾರಗಳೂ, ನಮಃ, ಸ್ವಾಹಾ, ವಷಟ್, ವೌಷಟ್, ಹುಂ, ಫಟ್ ಎಂದು ಹೃದಯಾದಿ ಸ್ಥಾನಗಳಲ್ಲಿ ನ್ಯಾಸಮಾಡಬೇಕಾದ ಮಂತ್ರಗಳ ಆರು ಪಲ್ಲವಗಳೂ ಆಗಮಗಳಲ್ಲಿ ಹೇಳಲ್ಪಟ್ಟವೆ. ಪಲ್ಲವಗಳೇ ಮಂತ್ರಕ್ಕೆ ಪಾದಗಳು, ಪ್ರಣವವೇ ಶಿರಸ್ಸು, ಇಂತಹ ಮಂತ್ರಾಂಗಗಳಾದ ಶಿರಃ ಪಾದಾದಿಗಳಿಲ್ಲದ ಮಂತ್ರವು ಫಲಕೊಡುವುದಿಲ್ಲ. ಆಯಾಯ ಮಂತ್ರ ದ್ರಷ್ಟರಾದ ಋಷಿಗಳನ್ನು ಶಿರಸ್ಸಿನಲ್ಲಿಯೂ, ಆಯಾಯ ಮಂತ್ರಗಳ ಛಂದಸ್ಸನ್ನು ಮುಖದಲ್ಲಿಯೂ, ಆಯಾಯ ಮಂತ್ರಗಳ ದೇವತೆಗಳನ್ನು ಹೃದಯದಲ್ಲಿಯೂ, ಮಂತ್ರಗಳ ಬೀಜಶಕ್ತಿಗಳನ್ನು ಆಧಾರದಲ್ಲಿಯೂ, ಕೀಲಕವನ್ನು ಪಾದಗಳಲ್ಲಿಯೂ ನ್ಯಾಸಮಾಡತಕ್ಕದು. ಹೀಗೆ ನ್ಯಾಸಮಾಡದೆ ಜಪಿಸುವ ಮಂತ್ರವು ಮೂಕಮಂತ್ರವೆಂದೂ, ಆಸನಶುದ್ಧಿಯಿಲ್ಲದೆ ಜಪಿಸುವ ಮಂತ್ರವು ಸುಪ್ತ ಮಂತ್ರವೆಂದೂ, ಪಲ್ಲವವಿಲ್ಲದೆ ಜಪಿಸುವ ಮಂತ್ರವು ನಗ್ನ ಮಂತ್ರವೆಂದೂ, ಶಿರಸ್ಸಿಲ್ಲದೆ ಜಪಿಸುವ ಮಂತ್ರವು ಮೃತಮಂತ್ರವೆಂದೂ, ಗುರುವಿನಿಂದ ಉಪದೇಶ ಪಡೆಯದೆ ಜಪಿಸುವ ಮಂತ್ರವು ನಿಷ್ಫಲವೆಂದೂ, ಋಷಿ ದೈವತ ಛಂದಸ್ಸುಗಳಿಲ್ಲದೆ ಜಪಿಸುವ ಮಂತ್ರವು ಭುಜಂಗ ಮಂತ್ರವೆಂದೂ, ದುಷ್ಟನಿಗುಪದೇಶಿಸಿದ ಮಂತ್ರವು ಮೃತಮಂತ್ರವೆಂದೂ, ಅಧಿಕಾಕ್ಷರದಿಂದ ಕೂಡಿ ಬೀಜಕೀಲಕಗಳಿಲ್ಲದ ಮಂತ್ರವು ನಿರ್ವೀರ್ಯ ಮಂತ್ರವೆಂದೂ ಹೇಳಿಸಿಕೊಳ್ಳುವವು. ಇಂತಹ ಅಂಗವಿಕಲವಾದ ಶೂನ್ಯ ಮಂತ್ರಗಳನ್ನು ಜಪಿಸಬಾರದು, ಕೇಳಬಾರದು ಎಂದು ಆಗಮಗಳಲ್ಲಿ ಹೇಳಲ್ಪಟ್ಟಿದೆ. ಆಗಮಗಳು ಅಪ್ರಮಾಣವಾದರೆ ಅವುಗಳೆಲ್ಲಕ್ಕೂ ಫಲವಿಲ್ಲದೆ ಹೋಗಬೇಕು. ಇದಲ್ಲದೆ ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮತ್, ಸುಪ್ರಭೇದ, ವಿಜಯ, ನಿಶ್ವಾಸ, ಸ್ವಾಯಂಭುವ, ಅನಲ, ವೀರ, ರೌರವ, ಮುಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ,

ಲಲಿತ, ಸಿದ್ಧ, ಸಂತಾನ, ಶರ್ವೋಕ್ತ, ಪಾರಮೇಶ್ವರ, ಕಿರಣ, ವಾತುಲ ಎಂಬ ಇಪ್ಪತ್ತೆಂಟು ಶೈವಾಗಮಗಳಲ್ಲಿ ಮತ್ತು ವೇದವೇದಾಂತೋಪನಿಷತ್ತು ಗಳಲ್ಲಿಯೂ ಹೇಳಲ್ಪಟ್ಟ ಧರ್ಮಗಳು ಮುಕ್ತಿಸಾಧನಗಳೆಂದು—

ಇತ್ಯಾಗಮೇಷು ವೇದೇಷು ವೇದಾಂತೋಪನಿಷತ್ಸು ಚ ॥
ಧರ್ಮಸ್ತು ಶಾಶ್ವತಃ ಪ್ರೋಕ್ತೋ ಮುಕ್ತೇರ್ಮಾಹೇಶ್ವರೋ
ಮಹಾನ್ ॥

ಎಂದು ವೀರಾಗಮದಲ್ಲಿ ಹೇಳಲ್ಪಟ್ಟಿರುತ್ತದೆ. ಇಂತಹ ಪ್ರಸಿದ್ಧ ಆಗಮ ಗಳೆಲ್ಲ ಅಪ್ರಮಾಣವೆಂದು ಹೇಳುವುದಾದರೆ—

ಶಿವೇ ಶೈವಾಗಮೇ ಶೈವೇ ಧರ್ಮೇ ಶಿವಪರಿಗ್ರಹೇ ।
ಜಂಗಮೇ ಪ್ರಾಣಲಿಂಗೈಕ್ಯೇ ಶಿವಲಿಂಗಾರ್ಚನೇ ಗುಹ ॥
ಶಿವಸ್ಥಾನೇಷು ಸರ್ವೇಷು ವಾರಾಣಸ್ಯಾದಿಕೇಷು ಚ ।
ವಿಪರೀತಾ ಭವೇದ್ಬುದ್ಧಿಃ ಯಸ್ಯ ಸ್ಯಾತ್ ಸ ಬಹಿರ್ನರಃ ॥
ಶಿವನಿಂದಾಪರೋ ಮೂಢಃ ಶಿವಶಾಸ್ತ್ರವಿನಿಂದಕಃ ।
ತಸ್ಯ ನೋ ನಿಷ್ಕೃತಿರ್ದೃಷ್ಟಾ ಕ್ವಾಪಿ ಶಾಸ್ತ್ರೇsಪಿ ಕೇನ ಚ ॥

ಅರ್ಥ—ಎಲೈ ಷಣ್ಮುಖನೆ! ಶಿವನನ್ನೂ, ಶಿವಾಗಮಗಳನ್ನೂ, ಶಿವಧರ್ಮವನ್ನೂ, ಶಿವಪರಿಗ್ರಹವನ್ನೂ, ಪ್ರಾಣಲಿಂಗಧಾರಿಯಾದ ಜಂಗಮ ನನ್ನೂ, ಲಿಂಗಾರ್ಚಕನನ್ನೂ, ಶೈವಾಲಯಗಳನ್ನೂ. ಶಿವಕ್ಷೇತ್ರಗಳನ್ನೂ ದೂಷಿಸುವವರು ಬಹಿಷ್ಕೃತರಾಗುತ್ತಾರೆ. ಅವರಿಗೆ ಪ್ರಾಯಶ್ಚಿತ್ತವಿಲ್ಲ. ಅಪರಿಹಾರ್ಯವಾದ ಕೋಪಕ್ಕೆ ಭಾಗಿಯಾಗುತ್ತಾರೆ. ಎಂದು ಸ್ಕಾಂದಾದಿ ಪುರಾಣಗಳಲ್ಲಿ ಹೇಳಲ್ಪಟ್ಟಿರುತ್ತದೆ. ಇದಲ್ಲದೆ ಭೂಮಿಯಲ್ಲಿ ಸ್ಥಾವರ ಲಿಂಗವನ್ನು ಪ್ರತಿಷ್ಠಿಸುವ ಸಮಯದಲ್ಲಿಯೂ ಶಿವದೀಕ್ಷಾಸಂಸ್ಕಾರಪೂರ್ವಕ ಅಂಗದಲ್ಲಿ ಲಿಂಗವನ್ನು ಧರಿಸುವ ಸಮಯದಲ್ಲಿಯೂ, ಆ ಲಿಂಗಗಳಿಗೆ ಶಿಲಾತ್ವಾದಿ ದೋಷ ನಿವಾರಣಾರ್ಥವಾಗಿ ಮಾಡಬೇಕಾದ ಹನ್ನೆರಡು ಸಂಸ್ಕಾರಗಳೂ, ಕುಂಡ ಮಂಟಪಾದಿ ನಿರ್ಮಾಣಕ್ರಿಯೆಗಳೂ ವಾಸ್ತು ಪೂಜಾ ಹವನಾದಿ ಕರ್ಮಗಳೂ ಅಧಃಪಟ್ಟಿಕಾದಿ ಆಜ್ಯಪ್ರತಾರಿಕಾಂತವಾದ

ಲಿಂಗದ ಆಯಾಯ ಸ್ಥಾನಗಳಲ್ಲಿ ಮಾಡಬೇಕಾಗಿರುವ ಭುವನಾಧ್ವ, ತತ್ವಾಧ್ವ, ಕಲಾಧ್ವ, ಮಂತ್ರಾಧ್ವ, ಪದಾಧ್ವ, ವರ್ಣಾಧ್ವಗಳೆಂಬ ಷಡಧ್ವ ಶುದ್ಧಿಗಳೂ ಪ್ರತಿಷ್ಠಾದಿ ಉತ್ಸವಾಂತವಾದ ಕರ್ಮಗಳೂ ಕಾಮಿಕಾಗಮ ಕಾರಣಾಗಮುಗಳಲ್ಲಿ ವಿಶದವಾಗಿ ಹೇಳಲ್ಪಟ್ಟವೆ. ಇಂತಹ ಆಗಮುಗಳ ಹೊರತು ಇನ್ನಾವ ಗ್ರಂಥಗಳಲ್ಲಾಗಲಿ, ಪುರಾಣಾದಿಗಳಲ್ಲಿ ಆಗಲಿ ಹೇಳಲ್ಪಟ್ಟಿಲ್ಲವಾದುದರಿಂದ ಇಂತಹ ಆಗಮುಗಳನ್ನೆಲ್ಲಾ ಅಪ್ರಮಾಣಗಳೆಂದು ಹೇಳುವುದಾದರೆ ಸಕಲ ವೈದಿಕಜನರಿಗೂ ಆವಶ್ಯಕಗಳಾದ ಪ್ರತಿಷ್ಠಾದಿ ಕರ್ಮಗಳೇ ಇಲ್ಲದಂತಾಗಬೇಕಾಗುವುದು.

ಮತ್ತು ವೀರಶೈವ ಮತಾಚಾರ್ಯರಾದ **ನೀಲಕಂಠಶಿವಾಚಾರ್ಯರೆ** ಮುಂತಾದವರು ತಾವು ರಚಿಸಿರುವ ಸೂತ್ರ ಭಾಷ್ಯಗಳಲ್ಲಿ ಪರಶಿವನಲ್ಲಿರುವ ಅಸಾಧಾರಣಗಳಾದ ಕಲ್ಯಾಣಗುಣಗಳನ್ನು ಪ್ರತಿಪಾದಿಸುವ ಅವಸರದಲ್ಲಿ—

ಸರ್ವಜ್ಞತಾ ತೃಪ್ತಿರನಾದಿಬೋಧಃ ಸ್ವತಂತ್ರತಾ ನಿತ್ಯಮಲುಪ್ತಶಕ್ತಿಃ ।
ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ಷಡಾಹುರಂಗಾನಿ ಮಹೇಶ್ವರಸ್ಯ ॥
ಜ್ಞಾನಂ ವಿರಾಗತೈಶ್ವರ್ಯಂ ತಪಶ್ಶಕ್ತಿಃ ಕ್ಷಮಾ ಧೃತಿಃ ।
ಸ್ರಷ್ಟೃತ್ವಮಾತ್ಮಸಂಬಂಧೋಽಹ್ಯಧಿಷ್ಠಾತೃತ್ವಮೇವ ಚ ॥
ಅವ್ಯಯಾನಿ ದಶೈತಾನಿ ನಿತ್ಯಂ ತಿಷ್ಠಂತಿ ಶಾಂಕರೇ ।

ಪರಶಿವನು **ಸರ್ವಜ್ಞನು, ನಿತ್ಯತೃಪ್ತನು, ಅನಾದಿಬೋಧಸ್ವರೂಪನು, ಸ್ವತಂತ್ರನು, ಅಲುಪ್ತಶಕ್ತಿಯುತನು, ಅನಂತಶಕ್ತಿಯುತನು** ಎಂದು ಹೇಳಿ, **ಜ್ಞಾನ, ವಿರಾಗ, ಐಶ್ವರ್ಯ, ತಪಶ್ಶಕ್ತಿ, ಕ್ಷಮಾ, ಧೃತಿ, ಸೃಷ್ಟಿಕರ್ತೃತ್ವ, ಆತ್ಮಸಂಬಂಧ, ಅಧಿಷ್ಠಾತೃತ್ವ ಅವ್ಯಯತ್ವ** ಎಂಬ ನಾಶವಿಲ್ಲದ ಹತ್ತು ಧರ್ಮಗಳು ಆ ಪರಶಿವನಲ್ಲಿರುವವು ಎಂದು ಶಿವಾಗಮುಗಳನ್ನು ಪ್ರಮಾಣವಚನಗಳನ್ನಾಗಿ ಉದಾಹರಿಸಿರುತ್ತಾರೆ. ಇದಲ್ಲದೆ—

ಶ್ರೀ ಶಂಕರಾಚಾರ್ಯರು ಪ್ರಪಂಚಸಾರಾದಿಗ್ರಂಥಗಳಲ್ಲಿ ತ್ರ್ಯಯಂಬಕ ಷಡಕ್ಷರಾದಿ ಮಂತ್ರಗಳ ಅನುಷ್ಠಾನ ಪುನಶ್ಚರಣಾದಿಗಳನ್ನು ಶೈವಾಗಮ ವಚನ ಪ್ರಮಾಣಾಧಾರದಿಂದ ತೋರಿಸಿರುತ್ತಾರೆ. ಎಲ್ಲ ಆಗಮುಗಳೂ ಅಪ್ರಮಾಣಗಳೇ ಎಂದು ಹೇಳುವುದಾದರೆ ಇಂತಹ ಭಾಷ್ಯಕರ್ತರ

ವಚನಗಳಿಗೆಲ್ಲಾ ವಿರೋಧವುಂಟಾಗಬೇಕಾಗುವುದು. ತತ್ತ್ವಪ್ರಕಾಶಕರಾದ ಭಾಷ್ಯಕಾರರ ನುಡಿಗಳನ್ನು ಪುಸಿಯೆಂದು ಯಾರೂ ಹೇಳಬಾರದು. ಹಾಗೆ ಆಗಮಗಳು ಅಪ್ರಮಾಣಗಳಾಗಿದ್ದರೆ ಅವರೆಂಮೂ ಉದಹರಿಸುತ್ತಿದ್ದಿಲ್ಲ. ಇದರಂತೆ ವ್ಯಾಸ, ಮನು ಮುಂತಾದ ಮಹರ್ಷಿಗಳೂ ಆಗಮಗಳಿಗೆ ವಿಶೇಷ ವಾಗಿ ಪ್ರಾಮಾಣ್ಯವನ್ನು ಕೊಟ್ಟಿರುತ್ತಾರೆ. ಇನ್ನು ಬುದ್ಧಾದಿಗಳಿಂದ ಬರೆಯಲ್ಪಟ್ಟ ಆಗಮಗಳು ಮಾತ್ರ ಅಪ್ರಮಾಣಗಳೆಂದು ಹೇಳುವದಾದರೆ ಅದು ನಮಗೆ ಇಷ್ಟವೇ ಆಗಿದೆ. ಏಕೆಂದರೆ– ಒಂದು ಕಾಲದಲ್ಲಿ ವಿಷ್ಣುವು ಪ್ರಪಂಚರಕ್ಷಣೆಗಾಗಿ ಜಗನ್ಮೋಹಿನೀವೇಷವನ್ನು ಧರಿಸಿದನು. ರಾಮಾ ದ್ಯವತಾರಕಾಲಗಳಲ್ಲಿ ಜಗತ್ತನ್ನು ಮೋಹಪಡಿಸುವುದಕ್ಕಾಗಿ ಸೀತಾಲಕ್ಷ್ಮಣ ವಿಯೋಗದಿಂದುಂಟಾದ ಮೋಹವನ್ನು ವ್ಯಕ್ತಪಡಿಸಿದನು. ಬುದ್ಧಾವತಾರ ವನ್ನೆತ್ತಿ ವೇದವಿರುದ್ಧಗಳಾದ ಅನೇಕ ಆಗಮಗಳನ್ನು ರಚಿಸಿದನು. ಅಂತಹ ಆಗಮಗಳನ್ನು ಯಾವ ವೈದಿಕ ಮತಾನುಯಾಯಿಗಳೂ ಅಂಗೀಕರಿಸಿಲ್ಲ.

ಏವಂ ಸಂಬೋಧಿತೋ ರುದ್ರೋ ಮಾಧವೇನ ಮುರಾರಿಣಾ ।
ಚಕಾರ ಮೋಹಶಾಸ್ತ್ರಾಣಿ ಕೇಶವೋಽಪಿ ಶಿವೇರಿತಃ ॥

ಅರ್ಥ—ರುದ್ರನು ವಿಷ್ಣುಪ್ರೇರಿತನಾಗಿ ಜಗತ್ತನ್ನು ಮೋಹಪಡಿಸುವ ಶಾಸ್ತ್ರಗಳನ್ನು ರಚಿಸಿದನು. ವಿಷ್ಣುವು ರುದ್ರನಿಂದ ಪ್ರೇರಿತನಾಗಿ ಮೋಹ ಶಾಸ್ತ್ರಗಳನ್ನುರಚಿಸಿದನು. ಅವುಗಳೇ ಕಾಪಾಲ, ಲಾಕುಲ, ಶಾಕ್ತ, ಭೈರ ವಾದಿ ಮತಗಳೆನಿಸಿದವು.

ನಿರ್ಮಿತಂ ಹಿ ಮಯಾ ಪೂರ್ವಂ ವ್ರತಂ ಪಾಶುಪತಂ ಶುಭಮ್ ।
ಗುಹ್ಯಾತ್ ಗುಹ್ಯತರಂ ಸೂಕ್ಷ್ಮಂ ವೇದಸಾರಂ ವಿಮುಕ್ತಯೇ ॥
ಏಷ ಪಾಶುಪತಾಚಾರಃ ಸೇವನೀಯೋ ಮುಮುಕ್ಷುಭಿಃ ।

ಎಂಬ ಪ್ರಮಾಣಾನುಸಾರವಾಗಿ ವೇದಗಳ ಸಾರವೂ ಅತಿ ಸೂಕ್ಷ್ಮವೂ ಆದ ಪಾಶುಪತವ್ರತವನ್ನು ಈಶ್ವರನು ಬೋಧಿಸಿದನು. ರುದ್ರಾಕ್ಷ ಲಿಂಗ ಧಾರಣ ರೂಪವಾದ ಇಂತಹ ಪಾಶುಪತವ್ರತವನ್ನು ಮುಮುಕ್ಷುಗಳು ಅವಶ್ಯ ವಾಗಿ ಅನುಷ್ಠಿಸಬೇಕೆಂದು ಈಶ್ವರೋಕ್ತಿ ಇರುವುದರಿಂದ ಕಾಮಿಕಾದಿ

ವಾತುಲಾಂತವಾದ ಇಪ್ಪತ್ತೆಂಟು ದಿವ್ಯಾಗಮಗಳು ವೈದಿಕರಿಂದ ಅಂಗೀಕರಿಸಲ್ಪಟ್ಟಿರುವುವು.

ವಾಮಂ ಪಾಶುಪತಂ ಸೋಮಂ ಲಾಕುಲಂ ಚೈವ ಭೈರವಮ್ ।
ನ ಸೇವ್ಯಮೇತತ್ಕಥಿತಂ ವೇದಬಾಹ್ಯಂ ತಥೇತರತ್ ॥
ಯಾನಿ ಶಾಸ್ತ್ರಾಣಿ ದೃಶ್ಯಂತೇ ಯುಗೇsಸ್ಮಿನ್ವಿವಿಧಾನಿ ತು ।
ಶ್ರುತಿಸ್ಮೃತಿವಿರುದ್ಧಾನಿ ತೇಷಾಂ ನಿಷ್ಠಾ ಹಿ ತಾಮಸೀ ॥

ಅರ್ಥ—ವಾಮ, ಅವೈದಿಕ ಪಾಶುಪತ, ಸೋಮ, ಲಾಕುಲ, ಭೈರವ ಮುಂತಾದ ಮತಗಳು ವೇದಬಾಹ್ಯಗಳಾದುದರಿಂದ ಅವನ್ನನುಷ್ಠಿಸತಕ್ಕುದಲ್ಲ—ಶ್ರುತಿಸ್ಮೃತಿಗಳಿಗೆ ವಿರುದ್ಧಗಳಾದ ಆಗಮಗಳು ತಾಮಸಗಳಾದುದರಿಂದ ಪ್ರಮಾಣಗಳಲ್ಲ.

ಹೀಗೆ ವೇದಾನುಕೂಲಗಳಾದ ಅನಂತ ಶೈವಾಗಮಗಳೂ, "ಸರ್ವಲಿಂಗಂ ಸ್ಥಾಪಯತಿ" ಮುಂತಾದ ಶ್ರುತಿಗಳೂ ತತ್ವಮಸ್ಯಾದಿ ಮಹಾವಾಕ್ಯಗಳೂ, ಈಶ, ಕೇನ, ಕೈವಲ್ಯ, ಕಾಲಾಗ್ನಿರುದ್ರ, ಬೃಹದಾರಣ್ಯಕಾದ್ಯುಪನಿಷತ್ತುಗಳೂ ಲಿಂಗಧಾರಣ, ಲಿಂಗಾಂಗಸಾಮರಸ್ಯ, ವಿಭೂತಿ, ರುದ್ರಾಕ್ಷಧಾರಣಗಳನ್ನು ವಿಧಿಸುವುದರಿಂದ ಮುಮುಕ್ಷುಗಳಾದ ವೀರಶೈವರು ಕ್ರಮವಿಡಿದು ಗುರುವಿನಿಂದ ಶಿವದೀಕ್ಷೆಯಂ ಪಡೆದು ಮಸ್ತಕಾದ್ಯುತ್ತಮಾಂಗಗಳಲ್ಲಿ ದೇಹವಿರುವವರೆಗೂ ಶಿವಲಿಂಗವಂ ಧರಿಸುತ್ತ ತ್ರಿಕಾಲದೊಳಾಗಲಿ ದ್ವಿಕಾಲದೊಳಾಗಲಿ ಏಕಕಾಲದೊಳಾಗಲಿ ವಾಮಹಸ್ತವೆಂಬ ಸಿಂಹಾಸನದ ಮೇಲಿರಿಸಿ ಗಂಧಾಕ್ಷತೆಗಳಿಂದರ್ಚಿಸುತ್ತ ತ್ರಿವಿಧ ದೇಹಂಗಳಲ್ಲಿ ತ್ರಿವಿಧ ಲಿಂಗಗಳ ಸಿದ್ಧಿಯಂಪಡೆದು—

"ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರಿ"

ಎಂಬ ಶಿವಾಗಮ ವಾಕ್ಯಾನುಸಾರ ದುಃಖಕಾರಿಯಾದ ಭವಪಾಶದಿಂದ ಬಿಡುಗಡೆಯಾಗಿ ಶಿವಸಾಯುಜ್ಯವನ್ನು ಪಡೆಯಬೇಕು.

ಶ್ರೀಮಜ್ಜಗದ್ಗುರು ನಂದಿಕೇಶ್ವರ ಶಿವಾಚಾರ್ಯವಂಶಸಂಜಾತ ಮೈಸೂರು
ಶ್ರೀಮನ್ಮಹಾರಾಜ ನಾಲ್ಮಡಿ ಶ್ರೀ ಕೃಷ್ಣರಾಜೇಂದ್ರಾನುಗೃಹೀತ
"**ಪಂಡಿತರತ್ನಂ**" ಬಿರುದಾಂಕಿತ ಶ್ರೀ ಚಾಮರಾಜೇಂದ್ರ
ಸಂಸ್ಕೃತ ಮಹಾಪಾಠಶಾಲಾ ವೇದಾಂತಪ್ರೊಫೆಸರ್
ಆಸ್ಥಾನಮಹಾವಿದ್ವಾನ್
**ಶಿರಸಿ ಗುರುಶಾಂತಶಾಸ್ತ್ರಿಯಿಂದ**
ಪ್ರಣೀತಮಾದ ಶ್ರೀ ನಂದಿಕೇಶ್ವರ ವಿರಚಿತ
ಲಿಂಗಧಾರಣಚಂದ್ರಿಕೆಯ ಕನ್ನಡ
ಅನುವಾದದಲ್ಲಿ ಪೂರ್ವಭಾಗವು
ಸಮಾಪ್ತವಾದುದು



ನಮಃ ಶಿವಾಭ್ಯಾಮ್

# ಲಿಂಗಧಾರಣ ಚಂದ್ರಿಕೆ

## ಉ ತ್ತ ರಾ ರ್ಧ

## ಭೂನಿಕ್ಷೇಪ (ಸಮಾಧಿ) ದ ಆವಶ್ಯಕತೆ

**ಶಂಕೆ:**—ಇದುವರಂವಿಗೆ ವೇದಾಗಮ ಸ್ಮೃತಿಪುರಾಣೇತಿಹಾಸಗಳ ಪ್ರಮಾಣದಿಂದಲೂ ಯುಕ್ತ್ಯನುಭವಗಳಿಂದಲೂ ಶಿವಲಿಂಗವನ್ನು ಕಂಠಾದ್ಯುತ್ತಮಾಂಗಗಳಲ್ಲಿ ಯಾವುದಾದರೊಂದು ಅಂಗದಲ್ಲಿ ಧರಿಸಿ ಹಸ್ತಪೀಠದಲ್ಲಿಟ್ಟು ಪ್ರತಿದಿವಸವೂ ಪೂಜಿಸಬೇಕೆಂದು ಸಿದ್ಧವಾಯಿತು. ಆದರೆ ಮೃತನಾದ ಬ್ರಾಹ್ಮಣನ ಶರೀರಕ್ಕೆ ದಹನವಿಧಿಯು ಹೇಳಲ್ಪಟ್ಟದೆಯಲ್ಲದೆ ಖನನವಿಧಿಯು (ಭೂನಿಕ್ಷೇಪ) ಯಾವ ಗ್ರಂಥಗಳಲ್ಲಿಯೂ ಹೇಳಲ್ಪಟ್ಟಿಲ್ಲ. ಹೀಗೆ ಇರುವಲ್ಲಿ ಲಿಂಗಾಂಗಿಯಾದ ವೀರಶೈವನ ಮೃತದೇಹವನ್ನು ಭೂನಿಕ್ಷೇಪ ಮಾಡುವುದೆಂತು ?

**ಸಮಾಧಾನ—**

**ಕರ್ದಮೇನ ಪ್ರಜಾ ಭೂತಾ ಮಯಿ ಸಂಭವ ಕರ್ದಮ ॥**

**ಅನ್ವಯಾರ್ಥ**—ಕರ್ದಮೇನ – ಪೃಥಿವಿಯಿಂದ, ಪ್ರಜಾಃ – ಪಶುಪಕ್ಷಿ ಮಾನವಾದಿ ಸಮಸ್ತ ಜೀವರಾಶಿಗಳೂ, ಭೂತಾಃ – ಹುಟ್ಟಿದವು, ಆದುದರಿಂದ ಹೇ ಕರ್ದಮ – ಜಲಮಿಶ್ರವಾದ ಮೃತ್ಪಿಂಡರೂಪವಾದ ಎಲೈ ಪೃಥಿವಿಯೇ ಮಯಿ - ಕಾಲಪರಿಪಾಕದಿಂದ ಮರಣಹೊಂದಿದ ನನ್ನ ಶರೀರವನ್ನು ಸಮಾಧಿಯೆಂಬ ನಿನ್ನ ಗರ್ಭದಲ್ಲಿ ಇರಿಸಲಾಗಿ, ಸಂಭವ - ಮೃತ್ತಿಕೆಯಿಂದ ಆಚ್ಛಾದಿಸಿ ನನ್ನ ಸಕಲ ಪಾಪಗಳನ್ನು ನಾಶಗೊಳಿಸಿ ಉತ್ತಮಲೋಕವನ್ನು ಹೊಂದಿಸು ಎಂದು ಋಗ್ವೇದದಲ್ಲಿ ಹೇಳಲ್ಪಟ್ಟದೆ.

ಈ ಮಂತ್ರದಲ್ಲಿ ಕರ್ದಮ ಎಂಬ ಶಬ್ದವನ್ನು ಪ್ರಯೋಗಿಸಿದೆ. ನೀರಿನಿಂದ ಮಿಶ್ರವಾದ ಮಣ್ಣಿಗೆ ಕರ್ದಮ (ಕೆಸರು) ಎಂದು ಹೇಳು

ವರಲ್ಲದೆ ನೀರಿಲ್ಲದ ಬರೀ ಮಣ್ಣಿಗೆ ಕರ್ದಮವೆಂದು ಹೇಳುವುದಿಲ್ಲ. ಇಲ್ಲಿ ಕರ್ದಮ ಶಬ್ದದಿಂದ **ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ** ಎಂಬ ಪಂಚಮಹಾಭೂತಗಳು ಉಪಲಕ್ಷಿತಗಳಾಗಿವೆ. ಇವೆಲ್ಲ ಭೂತಗಳಿಗೂ ಪೃಥಿವಿಯೇ ಪ್ರಧಾನವಾದುದರಿಂದ **ಉಪಾದಾನಕಾರಣವಾಗಿರುತ್ತದೆ.** ಜಲ, ತೇಜ, ವಾಯು, ಆಕಾಶಗಳು ವಿಶೇಷಣಗಳಾಗಿರುವುದರಿಂದ **ಸಹಕಾರಿಕಾರಣಗಳಾಗಿರುತ್ತವೆ.** ಲೋಕದಲ್ಲಿ ಪ್ರತಿಯೊಂದು ಕಾರ್ಯವೂ ಸಹಕಾರಿಕಾರಣಗಳಿಲ್ಲದೆ ಪ್ರಧಾನವಾದ ಉಪಾದಾನಕಾರಣವೊಂದರಿಂದ ಸಿದ್ಧಿಸುವುದಿಲ್ಲ. ಆದುದರಿಂದ ಜಲಾದಿಗಳ ಮಿಶ್ರವಿಲ್ಲದೆ ಕಠಿಣವಾದ ಪೃಥಿವಿಯೊಂದರಿಂದ ದೇಹವು ನಿರ್ಮಾಣವಾಗದು. ಅಂತಹ ಜಲಮಿಶ್ರವಾದ ಭೂದೇವಿಯನ್ನು ಕುರಿತು ಮೃತಪುರುಷನು ಪ್ರಾರ್ಥಿಸಿರುವನು. ಮತ್ತು ಪರಾಯತೋಕ್ತ ನಕ್ಷತ್ರೇಷ್ಟಿಯಲ್ಲಿ

**ಮಹೀಂ ದೇವೀಂ ವಿಷ್ಣು ಪತ್ನೀಮಜೂರ್ಯಾಮ್ ।**
**ಪ್ರತೀಚೀಮೇನಾಂ ಹವಿಷಾ ಯಜಾಮಃ ॥**

ಎಂಬ ಮಂತ್ರವು ಮೃತಶರೀರವನ್ನು ಭೂಮಿಯಲ್ಲಿ ನಿಕ್ಷೇಪ ಮಾಡಬೇಕೆಂದು ವಿಧಿಸುತ್ತದೆ. ಕರ್ತೃವಾದ ಪುರುಷನು ತನ್ನ ಇಷ್ಟಮಿತ್ರಬಂಧುಗಳಿಂದೊಡಗೂಡಿ ಮೃತಪುರುಷನ ಶರೀರವನ್ನು ಕ್ರಮದಿಂ ರಚಿಸಿದ ವಿಮಾನದಲ್ಲಿ ಕುಳ್ಳಿರಿಸಿ ವಾದ್ಯವೈಭವದೊಡನೆ ಸಮಾಧಿಯ ಬಳಿಗೈತಂದು ಮೃತದೇಹಕ್ಕೆ ಮಾಡಬೇಕಾದ ವಿಧ್ಯುಕ್ತಗಳಾದ ಅಪರಸಂಸ್ಕಾರಗಳನ್ನೆಸಗಿ, ಮೃತಶರೀರವನ್ನು ಮೆಲ್ಲನೆ ಸಮಾಧಿಯೊಳಗಿಳಿಸುವ ಸಮಯದಲ್ಲಿ ಈ ಮಂತ್ರವು ವಿನಿಯೋಗಿಸಲ್ಪಟ್ಟಿರುತ್ತದೆ. " **ಅಜೂರ್ಯಾಂ ವಿಷ್ಣು ಪತ್ನೀಂ ಮಹೀಂ ದೇವೀಮ್** " ವಿಷ್ಣುವಿನ ಭಾರ್ಯೆಯೆನಿಸಿರುವ ಪೂಜ್ಯಳಾದೀ ಭೂದೇವಿಯನ್ನು ಹವಿಷಾ – ಮೃತಪುರುಷನ ದೇಹವೆಂಬ ಹವಿಃಪ್ರದಾನದಿಂದ, ಯಜಾಮಃ – ಆರಾಧಿಸುವೆವು— ಎಂದು ಮಂತ್ರದ ಅರ್ಥವು. ಯಜ್ಞದಲ್ಲಿ ಅಗ್ನಿದೇವತೆಗೆ ಸ್ವಾಹಾಕಾರದಿಂದ ಕೊಡಲ್ಪಟ್ಟ ಆಜ್ಯಪುರೋಡಾಶಾದಿ ಹವಿರ್ದ್ರವ್ಯಗಳೂ ಆ ವೈದಿಕಾಗ್ನಿಗಳಲ್ಲಿಯೇ ವಿಲೀನ(ಅಡಕ)ವಾಗುವಂತೆ ಮೃತಶರೀರವೂ ಒಂದು ಹವಿಸ್ಸಾದುದರಿಂದ ಅದನ್ನು ಸಮಾಧಿಯಲ್ಲಿ

ಗೋಪನ ಮಾಡದ ಹೊರತು ಆ ಮೃತದೇಹವು ಮರೆಯಾಗದು. ಇದರಿಂದ ಮೃತದೇಹವನ್ನು ಭೂನಿಕ್ಷೇಪ ಮಾಡಬೇಕೆಂಬ ಅರ್ಥವು ನಿಶ್ಚಿತವಾಗುತ್ತದೆ.

**ಶಂಕಾ**—ಶರೀರವು ಪೃಥಿವಿ ಜಲ ಅಗ್ನಿ ವಾಯು ಆಕಾಶ ಗಳೆಂಬ ಪಂಚಭೂತಗಳಿಂದಾದುದರಿಂದ ಇದನ್ನು ಪಾಂಚಭೌತಿಕದೇಹ ವೆಂದು ಕರೆಯುತ್ತಾರೆ. ಇಂತಹ ಭೌತಿಕ ಶರೀರವು ಪಂಚತ್ವ(ಮರಣ) ವನ್ನೈದಲು ಆಯಾಯ ಅಂಶಗಳು ಆಯಾಯ ಭೂತಗಳೊಳಗೆ ಸೇರಿಕೊಳ್ಳ ಬೇಕಲ್ಲದೆ ಪಂಚಾಂಶಗಳಿಂದ ಕೂಡಿದ ದೇಹವನ್ನು ಪೃಥಿವೀರೂಪವಾದ ಒಂದೇ ಭೂತದಲ್ಲಿ ವಿಲೀನಗೊಳಿಸುವುದೆಂತು ?

**ಸಮಾಧಾನ**—ದೇಹದಲ್ಲಿರುವ ಪಂಚಭೂತಾಂಶಗಳು ಬೇರೆ ಬೇರೆ ಪಂಚಮಹಾಭೂತಗಳಲ್ಲಿ ಸೇರುವುದು ನ್ಯಾಯವಾದುದು. ಈ ಪಂಚ ಭೂತಗಳೊಳಗೆ ಆಕಾಶ, ವಾಯು ಇವೆರಡೂ ಇಂದ್ರಿಯಗಳಿಗಗೋಚರ ಗಳಾದುದರಿಂದ ಇಂತಹ ಅಪ್ರತ್ಯಕ್ಷವಾದ ಆಕಾಶದೊಳು ಆಕಾಶಾಂಶವನ್ನೂ, ವಾಯುವಿನೊಳು ವಾಯುವಿನ ಅಂಶವನ್ನೂ ಸೇರಿಸಲಳವಲ್ಲವು. ಇನ್ನು ಅಗ್ನಿ, ಜಲ ಈ ಎರಡು ಭೂತಗಳು ಪ್ರತ್ಯಕ್ಷಗಳಾಗಿದ್ದರೂ ಪೃಥಿವಿ ಯಾಧಾರದಲ್ಲಿಯೇ ನಿಂತಿರುತ್ತವೆ. ಅಂತಹ ಸರ್ವಾಧಾರವಾದ ಪೃಥಿವಿ ಯಲ್ಲಿ ಮೃತದೇಹವನ್ನು ನಿಕ್ಷೇಪಮಾಡುವ ಮೂಲಕವಾಗಿ ಆಯಾಯ ಅಂಶಗಳನ್ನು ಆಯಾಯ ತತ್ತ್ವಗಳಲ್ಲಿ ಸೇರಿಸುವುದು ಉತ್ತಮವಾಗಿರು ವುದು—

ಶರೀರಂ ಪಂಚಭೂತಾಖ್ಯಂ ತತ್ತ್ವಂ ತತ್ತ್ವೇನ ಯೋಜಯೇತ್ ।
ತತ್ರಾಪಿ ಪೃಥಿವೀತತ್ತ್ವೇ ಯೋಜನಂ ಮೋಕ್ಷಸಾಧನಮ್ ॥

(ಪಾರಾಶರಸ್ಮೃತಿ)

**ಅರ್ಥ**—ದೇಹವು ಪಂಚಭೂತಗಳಿಂದಾದುದರಿಂದ ಆಯಾಯ ತತ್ತ್ವಾಂಶಗಳನ್ನು ಆಯಾಯ ತತ್ತ್ವಾಂಶಗಳಲ್ಲಿಯೇ ಸೇರಿಸಬೇಕು. ಅದ ರಲ್ಲಿಯೂ ಪೃಥಿವೀತತ್ತ್ವದಲ್ಲಿ ಸೇರಿಸುವುದೇ ಮುಕ್ತಿಸಾಧನವೆಂದು ಸ್ಮೃತಿಕಾರರು ಭೂನಿಕ್ಷೇಪವನ್ನಂಗೀಕಾರಮಾಡಿರುತ್ತಾರೆ.—

ದಗ್ಧೇಽಪಿ ದೇಹೇ ಪುನರಂಗಶೇಷೋ
ನಿಕ್ಷಿಪ್ಯತೇಽ ಸೌ ಭುವಿ ವಾ ಜಲೇ ವಾ।
ತಸ್ಮಾದ್ವಿನಿಕ್ಷೇಪವಿಧಿರ್ಬಲೀಯಾನ್
ನಿಶ್ಶೇಷಭಾವಾದಪುನರ್ವಿಧಾನಾತ್ ॥

(ಕೂರ್ಮಪುರಾಣ)

ಅರ್ಥ :—ಮೃತದೇಹವು ಅಗ್ನಿಯಲ್ಲಿ ದಹಿಸಲ್ಪಟ್ಟರೂ, ರಕ್ತ ಮಾಂಸ ಮೂಳೆಗಳಲ್ಲಿ ಕೆಲವು ಅಂಶಗಳು ಸುಟ್ಟು ಭಸ್ಮವಾದರೂ, ಅಸ್ಥಿ ಮುಂತಾದ ಕೆಲವು ಅಂಶಗಳು ಹಾಗೆಯೇ ಉಳಿಯುತ್ತವೆ. ಪುನಃ ಆ ಅಸ್ಥ್ಯಾದಿಗಳನ್ನು ತೆಗೆದುಕೊಂಡು ಹೋಗಿ "ಪೃಥಿವೀಂ ಗಚ್ಛ" ಎಂಬ ಮಂತ್ರವನ್ನು ಉಚ್ಚರಿಸುತ್ತ ಭೂಮಿಯಲ್ಲಾಗಲಿ, ಗಂಗೆಯೊಳಾಗಲಿ ಹಾಕಬೇಕಾಗುವುದು. ಹೀಗೆ ಕೆಲವು ಅಂಶಗಳನ್ನು ಅಗ್ನಿಯಲ್ಲಿಯೂ, ಇನ್ನುಳಿದ ಅಂಶಗಳನ್ನು ಜಲದಲ್ಲಿಯೂ ಪೃಥಿವಿಯಲ್ಲಿಯೂ ಸೇರಿಸಬೇಕಾಗುವುದು. ಇದಕ್ಕಿಂತ ಖನನವಿಧಿಯನ್ನನುಸರಿಸಿ ಮೃತದೇಹವನ್ನು ಸರ್ವಭೂತಗಳಿಗೆ ಆಧಾರವಾದ ಪೃಥಿವಿಯೊಂದರಲ್ಲಿ ನಿಕ್ಷೇಪಮಾಡುವುದರಿಂದ ಎಲ್ಲಾ ಅಂಶಗಳೂ ನಿಶ್ಶೇಷವಾಗುತ್ತವೆ. ಆದುದರಿಂದ ಪುನಃ ಜಲಾದಿಗಳಲ್ಲಿ ಸೇರಿಸುವ ವಿಧಿಯನ್ನು ಅನುಸರಿಸಬೇಕಾಗಿಲ್ಲ. ಇದರಿಂದ ಭೂನಿಕ್ಷೇಪವಿಧಿಯೇ ಬಲಿಷ್ಠವಾದುದೆಂದು ಕೂರ್ಮಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ.

ಶಂಕೆ :—ಓಹೋ, ಹಾಗಾದರೆ–ಶ್ರುತಿಸ್ಮೃತಿ ಪುರಾಣಗಳಲ್ಲೆಲ್ಲ ಮೃತದೇಹವನ್ನು ಭೂನಿಕ್ಷೇಪಮಾಡುವ ವಿಧಾನವೇ ಶ್ರೇಷ್ಠವಾದುದೆಂದು ಹೇಳುವುದಾದರೆ ಮೃತದೇಹವನ್ನು ದಹಿಸಬೇಕೆಂದು ಪಿತೃಮೇಧಾದಿ ಪ್ರಕರಣದಲ್ಲಿ ಹೇಳಲ್ಪಟ್ಟ ಶ್ರುತ್ಯಾದಿಗಳಿಗೆಲ್ಲ ಗತಿಯೇ ಇಲ್ಲದಂತಾಯಿತಲ್ಲ?

ಸಮಾಧಾನ :—ಪಿತೃಮೇಧ ಪ್ರಕರಣದಲ್ಲಿ ದಹನವಿಧಾಯಕ ವಚನಗಳಿದ್ದರೂ ಅವುಗಳು ಲಿಂಗಧಾರಿಗಳಲ್ಲದ ದ್ವಿಜರನ್ನುದ್ದೇಶಿಸಿ ಹೊರಟಿರುವ ವಚನಗಳಾಗಿರುತ್ತವೆ. ಖನನವಿಧಾಯಕ ಶ್ರುತಿಸ್ಮೃತಿಗಳೆಲ್ಲ ಲಿಂಗಧಾರಿಗಳನ್ನುದ್ದೇಶಿಸಿ ಹೇಳಲ್ಪಟ್ಟ ವಚನಗಳಾಗಿರುತ್ತವೆಯೆಂದು ಅರ್ಥ

ಸಂಕೋಚವನ್ನು ಮಾಡತಕ್ಕದ್ದು. ಇಂತಹ ಸಂದೇಹವುಂಟಾದ ಸ್ಥಲದಲ್ಲಿ ಪೂರ್ವಮೀಮಾಂಸಾಕಾರರು "ಛಾಗಪಶುನ್ಯಾಯ"ವನ್ನು ತೋರಿಸಿ ಅರ್ಥಸಂಕೋಚಮಾಡಿದ್ದಾರೆ. ಈ ನ್ಯಾಯವು ಹಿಂದೆ (ಪು. ೨೩) ವಿವರಿಸಲ್ಪಟ್ಟಿರುತ್ತದೆ. ಹೀಗೆ ಅರ್ಥಸಂಕೋಚಮಾಡದಿದ್ದರೆ ದಹನವನ್ನು ವಿಧಿಸುವ ವಚನಗಳಿಗೂ ಖನನವನ್ನು ವಿಧಿಸುವ ವಚನಗಳಿಗೂ ಒಂದಕ್ಕೊಂದು ವಿರೋಧವು ಸಂಭವಿಸಿ ಎರಡು ವಾಕ್ಯಗಳೂ ಅಪ್ರಮಾಣಗಳಾಗುವುದರಿಂದ ಎರಡಕ್ಕೂ ಅವೈದಿಕತ್ವದೋಷವುಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ಪೂರ್ವಾಚಾರ್ಯರು ಪರಸ್ಪರ ವಿರುದ್ಧಾರ್ಥವುಳ್ಳ ಶ್ರುತಿಗಳಿಗೆ ಅರ್ಥಸಂಕೋಚವನ್ನು ಕಲ್ಪಿಸಿ ಸರ್ವ ಶ್ರುತಿಗಳಿಗೂ ಸಮನ್ವಯಮಾಡಿರುತ್ತಾರೆ.

"ದ್ವಾ ಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ
ನಶ್ನನ್ನನ್ಯೋಽಭಿಚಾಕಶೀತಿ ॥"

"ದ್ವೇ ಬ್ರಹ್ಮಣೀ ವೇದಿತವ್ಯೇ ಪರಂ ಚಾಪರಂ ಚ"

**ಅನ್ವಯಾರ್ಥ** :—ದ್ವಾಸುಪರ್ಣಾ – ಜೀವಾತ್ಮ, ಪರಮಾತ್ಮರೆಂಬ ಎರಡು ಪಕ್ಷಿಗಳು (**ಸುಪಾಂ ಸುಲುಕ್**) ಎಂಬ ಶಾಸ್ತ್ರದಿಂದ ದ್ವಿವಚನದಲ್ಲಿ ಡಾದೇಶ ಬಂದಿದೆ. ಸಯುಜಾ - ಯಾವಾಗಲೂ ಕೂಡಿರುವವುಗಳಾಗಿ, ಸಖಾಯಾ-ಒಂದಕ್ಕೊಂದು ಸ್ನೇಹವುಳ್ಳವುಗಳಾಗಿ, ಸಮಾನಂ ವೃಕ್ಷಂ-ಒಂದೇ ಶರೀರವೆಂಬ ವೃಕ್ಷವನ್ನು, ಪರಿಷಸ್ವಜಾತೇ-ಆಶ್ರಯಿಸಿಕೊಂಡಿರುತ್ತವೆ, ತಯೋಃ-ಆ ಎರಡು ಪಕ್ಷಿಗಳೊಳಗೆ, ಅನ್ಯಃ-ಜೀವಾತ್ಮನೆಂಬ ಒಂದು ಪಕ್ಷಿಯು, ಪಿಪ್ಪಲಂ-ಕರ್ಮಾನುಗುಣವಾದ ಸುಖದುಃಖರೂಪವಾದ ಫಲವನ್ನು, ಸ್ವಾದು-ಅಭಿರುಚಿಯಾಗಿ, ಅತ್ತಿ-ಅನುಭವಿಸುವುದು. ಅನ್ಯಃ-ಪರಮಾತ್ಮನೆಂಬ ಮತ್ತೊಂದು ಪಕ್ಷಿಯು, ಅನಶ್ನನ್-ಅಂತಹ ಕರ್ಮಫಲವಾವುದನ್ನೂ ಅನುಭವಿಸದೆ, ಅಭಿಚಾಕಶೀಃ-ಎಲ್ಲಾ ಕಡೆಯಲ್ಲಿಯೂ ಬೆಳಗುತ್ತಿರುವುದು.

ದ್ವೇ ಬ್ರಹ್ಮಣೀ-ಇಬ್ಬರು ಬ್ರಹ್ಮರಿರುತ್ತಾರೆ, ಪರಂ ಚಾಪರಂ ಚ-ಅವುಗಳೊಳಗೆ ಒಂದು ಪರಮಾತ್ಮನೆಂತಲೂ ಇನ್ನೊಂದು ಜೀವಾತ್ಮನೆಂತಲೂ, ವೇದಿತವ್ಯೇ-ತಿಳಿಯತಕ್ಕದು.

ಈ ಶ್ರುತಿಗಳಲ್ಲಿ ಶರೀರವನ್ನು "ಊರ್ಧ್ವಮೂಲಮಧಶ್ಶಾಖಮಶ್ವತ್ಥಂ ಪ್ರಾಹುಃ" ಎಂದು ಮೇಲುಭಾಗದಲ್ಲಿ ಬುಡವುಳ್ಳ ಕೆಳಭಾಗದಲ್ಲಿ ಕೊಂಬೆಗಳುಳ್ಳ ಲೋಕವಿಲಕ್ಷಣವಾದ ಅಶ್ವತ್ಥವೃಕ್ಷವನ್ನಾಗಿ ವರ್ಣಿಸಿರುತ್ತಾರೆ. ಹೀಗೆ ಜೀವಾತ್ಮಪರಮಾತ್ಮರು ಈ ಶರೀರವೆಂಬ ಅಶ್ವತ್ಥವೃಕ್ಷದಲ್ಲಿ ಪರಸ್ಪರ ಮೈತ್ರೀಭಾವದಿಂದ ಇರುತ್ತಾರೆ. ಇವರಲ್ಲಿ ಜೀವಾತ್ಮನು ಅವಿದ್ಯಾವೃತನಾದುದರಿಂದ ಕರ್ಮಾನುಗುಣವಾದ ಫಲವನ್ನು ಅನುಭವಿಸುವನು. ಪರಮಾತ್ಮನು ಅವಿದ್ಯಾರಹಿತನಾದುದರಿಂದ ಕರ್ಮಫಲವನ್ನನುಭವಿಸುವುದಿಲ್ಲವೆಂದು ಶ್ರುತಿಯು ಜೀವಾತ್ಮ ಪರಮಾತ್ಮರಿಗೆ ಭೇದವನ್ನಂಗೀಕಾರಮಾಡಿರುವುದು.

ಇನ್ನು ಕೆಲವು ಶ್ರುತಿಗಳು—

"ಏಕಮೇವಾದ್ವಿತೀಯಂ ಬ್ರಹ್ಮ", "ನೇಹ ನಾನಾಸ್ತಿ ಕಿಂಚನ"

"ನಾನ್ಯತೋಽಸ್ತಿ ದ್ರಷ್ಟಾ ನಾನ್ಯತೋಽಸ್ತಿ ಶ್ರೋತಾ ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ"

"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ"

ಅರ್ಥ :—ಪರಮಾತ್ಮನು ಸಜಾತೀಯ ವಿಜಾತೀಯ ಸ್ವಗತ ಎಂಬ ಮೂರು ಭೇದಗಳಿಲ್ಲದ ಒಂದೇ ವಸ್ತುವಾಗಿರುವನು. ಪರಮಾತ್ಮನಿಗಿಂತ ಮತ್ತೊಂದು ವಸ್ತುವಾವುದೂ ಇಲ್ಲವು. ಪರಮಾತ್ಮನ ಹೊರತು ಬೇರೆ ನೋಡುವವನಾಗಲಿ, ಕೇಳುವವನಾಗಲಿ, ತಿಳಿಯುವವನಾಗಲಿ ಇಲ್ಲವು, ಪರಮಾತ್ಮನಿಗೆ ದ್ವಿತೀಯವಸ್ತುವಿಲ್ಲವು. ಎಂದು ಜೀವಾತ್ಮಪರಮಾತ್ಮರಿಗೆ ಅಭೇದವನ್ನು ಬೋಧಿಸುವುವು. ಹೀಗೆ ಎರಡು ಶ್ರುತಿವಾಕ್ಯಗಳೂ ಅಪ್ರಮಾಣಗಳಾಗಬೇಕಾಗುವುದರಿಂದ ವಿಶಿಷ್ಟಾದ್ವೈತ ಪಕ್ಷವನ್ನು ಅಂಗೀಕರಿಸಿ ಎಲ್ಲಾ ಶ್ರುತಿಗಳಿಗೂ ಪ್ರಾಮಾಣ್ಯವನ್ನು ಒಪ್ಪಿಕೊಳ್ಳುವುದು ಉತ್ತಮ ಪಕ್ಷವು. ಅಂದರೆ "ವಿಶಿಷ್ಟಂ ಚ ವಿಶಿಷ್ಟಂ ಚ ವಿಶಿಷ್ಟೇ ತಯೋಃ

ಅದ್ವೈತಂ ವಿಶಿಷ್ಟಾದ್ವೈತಂ" ಎಂಬ ಸಮಾಸವಿಧಾನದಿಂದ ಒಂದು ವಿಶಿಷ್ಟಪದದಿಂದ ಸೂಕ್ಷ್ಮ ಚಿದಚಿತ್ಪ್ರಪಂಚವಿಶಿಷ್ಟವಾದ ಬ್ರಹ್ಮವನ್ನು ಮತ್ತೊಂದು ವಿಶಿಷ್ಟಪದದಿಂದ ಸ್ಥೂಲ ಚಿದಚಿತ್ಪ್ರಪಂಚವಿಶಿಷ್ಟವಾದ ಬ್ರಹ್ಮ ವನ್ನು ಸ್ವೀಕರಿಸಿ ಇವೆರಡಕ್ಕೂ ಅಭೇದವನ್ನು ಹೇಳುವುದರಿಂದ ಅಭೇದ ಶ್ರುತಿಗಳಿಗೂ, ವಿಶೇಷಣವಿಶೇಷ್ಯಭೇದವನ್ನು ಸ್ವೀಕರಿಸಿ ದ್ವೈತಶ್ರುತಿ ಗಳಿಗೂ ಪ್ರಾಮಾಣ್ಯವು ಅಂಗೀಕರಿಸಲ್ಪಟ್ಟಿರುತ್ತದೆ.

**ಶಂಕೆ :**—ಅದೇಕೆ? ದಹನ ವಿಧಾಯಕ ವಚನಗಳೆಲ್ಲ ಬ್ರಾಹ್ಮಣ ರನ್ನುದ್ದೇಶಿಸಿಯೂ, ಖನನ (ಸಮಾಧಿ) ವಿಧಾಯಕ ವಚನಗಳೆಲ್ಲ ಶೂದ್ರಾ ದಿಗಳನ್ನುದ್ದೇಶಿಸಿಯೂ ಹೊರಟಿರುತ್ತವೆ. ಲಿಂಗಧಾರಿಗಳು ಇದಕ್ಕೆ ವಿಷ ಯವೇ ಅಲ್ಲವೆಂದೇಕೆ ಹೇಳಬಾರದು?

**ಸಮಾಧಾನ :**—ಹಾಗೆ ದ್ವಿಜರಿಗೆ ದಹನ ವಿಧಿಯನ್ನೂ, ಶೂದ್ರರಿಗೆ ಖನನವಿಧಿಯನ್ನೂ ಒಪ್ಪುವುದಾದರೆ ದಹನವಿಧಿಯೋಪಾದಿಯಲ್ಲಿ ಖನನ ವಿಧಿಯೂ ವೈದಿಕವಿಧಿಯಾದುದರಿಂದ ಶೂದ್ರರಿಗೂ ಸಹ ವೇದವಿಹಿತ ಕರ್ಮಾಧಿಕಾರವನ್ನು ಒಪ್ಪಿಕೊಳ್ಳಬೇಕಾಗುವುದು. ಆಗ ಶೂದ್ರರಿಗೆ ವೇದೋಕ್ತ ಕರ್ಮಾಧಿಕಾರವಿಲ್ಲವೆಂದು ಹೇಳುವ ಧರ್ಮಶಾಸ್ತ್ರಗಳೇ ವ್ಯರ್ಥ ವಾಗಬೇಕು. ಮತ್ತು ಬ್ರಾಹ್ಮಣರಿಗೆ ಖನನವಿಧಿಯನ್ನೂ ಶೂದ್ರರಿಗೆ ದಹನ ವಿಧಿಯನ್ನೂ ಅನುಸರಿಸಬಹುದಲ್ಲವೆ? ಎಂದರೆ ಆಚಾರ ವ್ಯವಹಾರಗಳಿಗೆಲ್ಲ ವಿರೋಧವುಂಟಾಗುವುದರಿಂದ ದಹನವಾಕ್ಯಗಳೆಲ್ಲವೂ ಲಿಂಗಿಗಳಲ್ಲದ ದ್ವಿಜರ ವಿಷಯಕಗಳೆಂದೂ ಖನನ ವಾಕ್ಯಗಳೆಲ್ಲವೂ ಲಿಂಗಾಂಗಿ ವಿಷಯಕಗಳೆಂದೂ ಹೇಳುವುದೇ ನ್ಯಾಯವಾದುದು.

**ಶಂಕೆ :**—ಹಿಂದೆ ಹೇಳಿದ "ಕರ್ದಮೇನ" ಇತ್ಯಾದಿ ಮಂತ್ರಗಳಿಗೆ ಲಿಂಗಾಂಗಿಯ ಮೃತದೇಹವನ್ನು ಭೂನಿಕ್ಷೇಪಮಾಡಬೇಕೆಂದು ಅವಿಚಾರ ದೃಷ್ಟಿಯಿಂದ ಸಾಮಾನ್ಯವಾಗಿ ಅರ್ಥಮಾಡಿದರೂ "ಮೃತಪುರುಷಂ ಖನೇತ್" ಮೃತಪುರುಷನ ದೇಹವನ್ನು ಭೂನಿಕ್ಷೇಪಮಾಡಬೇಕು ಎಂದು ಲಿಂಗ್‌ಲೋಟ್‌ತವ್ಯಪ್ರತ್ಯಯಾಂತಘಟಿತಗಳಾದ ವಿಧಿವಾಕ್ಯಗಳೆಲ್ಲಿಯೂ ಇಲ್ಲ ವಾದುದರಿಂದ ಖನನಕರ್ಮಕ್ಕೆ ವಿಧಿರೂಪತ್ವವೇ ಸಂಭವಿಸುವುದಿಲ್ಲವಲ್ಲ?

ಸಮಾಧಾನ:—ಹಾಗಾದರೆ, "ಪ್ರೇತಂ ದಹೇತ್" ಮೃತದೇಹ ವನ್ನು ದಹಿಸಬೇಕು ಎಂದು ಲಿಂಗ್‌ಲೋಟ್‌ತವ್ಯಪ್ರತ್ಯಯಾಂತಗಳಾದ ವಿಧಿವಾಕ್ಯಗಳೆಲ್ಲಿಯೂ ಇಲ್ಲದಿದ್ದರೂ ವಿಧಿಪ್ರಯೋಜಕವಾದ ರೂಪವನ್ನು ಅಂಗೀಕರಿಸಿ ಪಿತೃಮೇಧಾದಿ ಪ್ರಕರಣಗಳಲ್ಲಿ ಹೇಳಲ್ಪಟ್ಟ ಮಂತ್ರಸಿದ್ಧವಾದ ಲಿಂಗ (ಚಿನ್ಹೆ) ಗಳಿಂದ "ಪ್ರೇತಂ ದಹೇತ್" ಎಂಬ ವಿಧಿಯನ್ನು ಕಲ್ಪಿಸಿ ಕೊಂಡಿರುವಂತೆ "ಕರ್ದಮೇನ ಪ್ರಜಾಭೂತಾಃ" ಇತ್ಯಾದಿ ಮಂತ್ರಸ್ಥ ವಾದ ಚಿಹ್ನಗಳಿಂದ ವಿಧಿಪ್ರಯೋಜಕರೂಪವನ್ನಂಗೀಕರಿಸಿ "ಮೃತ ಪುರುಷಂ ಖನೇತ್" ಮೃತಪುರುಷನನ್ನು ಭೂನಿಕ್ಷೇಪ (ಸಮಾಧಿ) ಮಾಡ ಬೇಕು ಎಂದು ವಿಧಿಯನ್ನು ಕಲ್ಪಿಸಿಕೊಳ್ಳುತ್ತೇವೆ. ಈ ವಿಷಯದಲ್ಲಿ—

"ಶೈಲಂ ಲಿಂಗಮುರಸ್ಥಲೇ ಧಾರ್ಯಂ ವಿಪ್ರೇಣ।
ಶಿವಾ ತನೂರಚಿತ್ತಾದ್ಬಿಲೇ ನಿಕ್ಷಿಪೇತ್ ॥"

(ಸಾನಂದೋಪನಿಷತ್)

ಅರ್ಥ:—ಶೈಲಂ – ಶ್ರೀಶೈಲಶಿಲಾಮಯವಾದ, ಲಿಂಗಂ – ಪಂಚ ಸೂತ್ರಘಟಿತಲಿಂಗವನ್ನು, ವಿಪ್ರೇಣ–ದ್ವಿಜನಿಂದ, ಉರಸ್ಥಲೇ–ವಕ್ಷಸ್ಥಲ ದಲ್ಲಿ, ಧಾರ್ಯಂ–ಧರಿಸಲ್ಪಡತಕ್ಕುದು, ಶಿವಾ–ಲಿಂಗರೂಪಶಿವಸಂಬಂಧ ವುಳ್ಳ, ತನೂಃ – ದೇಹಗಳನ್ನು, ಅಚಿತ್ತಾತ್ – ಮರಣಹೊಂದಿದಬಳಿಕ, ಬಿಲೇ – ಶುದ್ಧಭೂಮಿಯಲ್ಲಿ ವಿದ್ಯುಕ್ತವಾಗಿ ರಚಿಸಲ್ಪಟ್ಟ ಸಮಾಧಿಯಲ್ಲಿ, ನಿಕ್ಷಿಪೇತ್ – ಮರೆಮಾಡತಕ್ಕುದು ಎಂದು ಉಪನಿಷತ್ತಿನಲ್ಲಿ ಹೇಳಲ್ಪಟ್ಟಿರು ತ್ತದೆ. ಮತ್ತು—

"ಸ ಯಾವಜ್ಜೀವೋ ಮ್ರಿಯತೇ ಅಥೈನಮುವನಯೇ ಹರಂತಿ"

ಅರ್ಥ:—ಜೀವಃ – ಲಿಂಗಧಾರಣರೂಪ ಶಿವದೀಕ್ಷೆಯುಳ್ಳ ಭಕ್ತನು, ಯಾವತ್ – ಎಷ್ಟರಲ್ಲಿ, ಮ್ರಿಯತೇ - ದೇಹವನ್ನು ಬಿಡುವನೋ, ಅಥ – ಮರಣಾನಂತರದಲ್ಲಿ, ಏನಂ - ಮರಣಹೊಂದಿದ ಭಕ್ತಶರೀರವನ್ನು, ಅವ ನಯೇ - ಭೂಮಿಗೋಸ್ಕರ, ಹರಂತಿ-ಭೂಗರ್ಭದಲ್ಲಿ ಸಮಾಧಿಕ್ರಿಯೆಯನ್ನು ಮಾಡಿ ಭಕ್ತ ದೇಹಹರಣವನ್ನು ಮಾಡತಕ್ಕುದು ಎಂದು ಅನೇಕ ಉಪ ನಿಷತ್ತುಗಳು ಹೇಳುತ್ತವೆ.

ಶಂಕೆ :—ಈ ಮಂತ್ರದಲ್ಲಿರುವ " ಅವನಯೇ ಹರಂತಿ " ಎಂಬ ವಾಕ್ಯಕ್ಕೆ ಭೂನಿಕ್ಷೇಪ ಪರವಾಗಿ ಅರ್ಥಮಾಡದೆ ಮೃತದೇಹವನ್ನು ಭೂಮಿಯ ಮೇಲಿರಿಸಿ ಅಗ್ನಿಯಿಂದ ದಹಿಸತಕ್ಕುದೆಂದು ಅರ್ಥಮಾಡಬಹುದಲ್ಲವೆ ?

ಸಮಾಧಾನ :—

" ವಿಪ್ರಾಯ ಗಾ ದದ್ಯಾದದದ್ಯಾದ್ದಾನಂ ಸ್ವಗೋತ್ರಾಯ "

ಬ್ರಾಹ್ಮಣನಿಗೆ ಗೋವುಗಳನ್ನು ದಾನಮಾಡಬೇಕು. ತನ್ನ ಗೋತ್ರದವನಿಗೆ ದಾನಮಾಡಕೂಡದು ಎಂಬ ವಾಕ್ಯದಲ್ಲಿ ಗೋದಾನಾದಿಗಳಿಗೆ ಪಾತ್ರವಾದ ವಿಪ್ರಾದಿ ಪದಗಳಿಗೆ ಸಂಪ್ರದಾನ ಸಂಜ್ಞೆಯು ಬಂದಿರುವಂತೆ ಹರಂತಿ ಎಂಬ ಹರಣಪದದ ಹಿಂದಿರುವ ಅವನಿ ಪದಕ್ಕೆ ಸಂಪ್ರದಾನ ಸಂಜ್ಞೆಯು ಬಂದಿರುತ್ತದೆ. ಮತ್ತು ಆ ಮಂತ್ರದಲ್ಲಿ ಅಗ್ನಿ ಪದವು ಬಂದಿಲ್ಲವು. ಬರದಿದ್ದರೂ ಸೇರಿಸಿಕೊಳ್ಳುತ್ತೇವೆಂದು ಹೇಳಿದರೆ ಅಧ್ಯಾಹಾರದೋಷವುಂಟಾಗುವುದಲ್ಲವೆ ? ಆದುದರಿಂದ "ಅವನಯೇ ಹರಂತಿ" ಎಂಬ ಪದಕ್ಕೆ ಭೂಮ್ಯೈಹರಂತಿ ಎಂದು ಸಂಪ್ರದಾನ ಸಂಜ್ಞೆಯೇ ನ್ಯಾಯವಾದುದು.

ಭೂಮೌ ವಿನಿಕ್ಷಿಪೇದ್ದೇಹಂ ಭಕ್ತಾನಾಂ ಶಿವಯೋಗಿನಾಮ್ ।
ಅಜ್ಞಾತ್ವಾ ದಹನಂ ಕುರ್ಯಾನ್ನರಕಂ ವ್ಯಾಧಿಗಚ್ಛತಿ ॥
ನ ಶರೀರಂ ದಹೇದ್ಧೀಮಾಂಚ್ಛಿವಭಕ್ತಸ್ಯ ಕಸ್ಯಚಿತ್ ।
ಪ್ರೇತಾಶೌಚಂ ಪರೋಕ್ಷೇ ಚ ವರ್ಜಯೇನ್ಮನಿಸತ್ತಮ ॥
ಶಿವಭಕ್ತೋ ಮೃತೋ ಯಸ್ತು ದಹನಾದಿರ್ನವಿದ್ಯತೇ ।
ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ನ ಹಿ ॥
ಜ್ಞಾನಾಗ್ನಿದಗ್ಧದೇಹಾನಾಂ ನ ಚ ದಾಹೋ ನ ಚ ಕ್ರಿಯಾ ।

ಅರ್ಥ :—ಶಿವಭಕ್ತರ ಮತ್ತು ಶಿವಯೋಗಿಗಳ ದೇಹವನ್ನು ಭೂಮಿಯಲ್ಲಿ ನಿಕ್ಷೇಪಮಾಡತಕ್ಕುದು. ಪ್ರಮಾದದಿಂದ ದಹನಮಾಡಿದರೆ ನರಕಭಾಗಿಯಾಗುವನು. ಬುದ್ಧಿಶಾಲಿಯಾದವನು ಶಿವಭಕ್ತನ ದೇಹವನ್ನು ದಹಿಸಬಾರದು, ಪರೋಕ್ಷದಲ್ಲಿಯೂ ಪ್ರೇತಾಶೌಚವನ್ನು ಆಚರಿಸತಕ್ಕುದಲ್ಲ. ಶಿವಭಕ್ತನು ಮೃತನಾದರೆ ದಹನಕರ್ಮವನ್ನಾಚರಿಸಕೂಡದು.

ಬೆಂದ ಪದಾರ್ಥವನ್ನು ಮತ್ತೆ ಹೇಗೆ ಬೇಯಿಸಲಾಗುವುದಿಲ್ಲವೋ ಹಾಗೆ ಜ್ಞಾನಾಗ್ನಿಯಿಂದ ದಗ್ಧವಾಗಿರುವ ದೇಹಗಳನ್ನು ಪುನಃ ದಹನಮಾಡಲಾಗ ದೆಂದು ಶಿವಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

> ಶರೀರಂ ಪಾರ್ಥಿವಂ ಬಾಹ್ಯಂ ಲಿಂಗಂ ಯತ್ತದ್ಧಿ ಪಾರ್ಥಿವಮ್ ।
> ಉಭಯಂ ಪಾರ್ಥಿವಂ ಯಸ್ಮಾದ್ಗೋಪ್ಯಂ ರಂಧ್ರೇ ತು ಪಾರ್ಥಿವೇ ॥

**ಅರ್ಥ** :—ದೇಹವು ಪೃಥಿವಿಗೆ ಸಂಬಂಧಪಟ್ಟುದು. ದೇಹದಲ್ಲಿ ಧರಿಸಲ್ಪಟ್ಟ ಶಿವಲಿಂಗವೂ ಪೃಥಿವಿಗೆ ಸಂಬಂಧಪಟ್ಟುದು. ಎರಡೂ ಪಾರ್ಥಿವ ಗಳಾದುದರಿಂದ ಮೃತದೇಹವನ್ನು ಪೃಥಿವಿಯಲ್ಲಿ ನಿಕ್ಷೇಪಮಾಡುವುದು ಉತ್ತಮವೆಂದು **ವಾತುಲಾಗಮ**ದಲ್ಲಿ ಹೇಳಲ್ಪಟ್ಟಿರುತ್ತದೆ.

**ಶಂಕೆ** :—ಓಹೋ! ನಮ್ಮ ಶರೀರವು ಪಂಚಭೂತಮಯವಾಗಿರು ತ್ತವೆಯಲ್ಲದೆ ಕೇವಲ ಪೃಥಿವೀಮಯವಾಗಿಲ್ಲ ಆದುದರಿಂದ ಪೃಥಿವಿ ಯಲ್ಲಿಯೇ ಮೃತದೇಹವನ್ನು ನಿಕ್ಷೇಪಮಾಡಬೇಕೆಂಬ ನಿಯಮವೇಕೆ? ಅಗ್ನಿಜಲಾದಿಗಳಲ್ಲಿಯೂ ನಿಕ್ಷೇಪಮಾಡಬಹುದಲ್ಲವೇ?

**ಸಮಾಧಾನ** :—ಶರೀರವು ಪಂಚಭೂತವಿಕಾರವಾಗಿದ್ದರೂ, ಭೂವ್ಯಾದಿ ಪಂಚಭೂತಗಳು ಪೃಥಿವಿಯಾಧಾರದಲ್ಲಿಯೇ ನಿಂತಿರುವುದ ರಿಂದಲೂ, ಮತ್ತು ಪೃಥಿವಿಯೇ ಅತಿ ಸಮೀಪವಾಗಿರುವುದರಿಂದಲೂ, ಮೊದಲನೆಯದಾದ ಪೃಥಿವಿಯನ್ನು ಬಿಟ್ಟು ಮುಂದಿನ ಜಲ ಅಗ್ನ್ಯಾದಿ ಗಳನ್ನು ತೆಗೆದುಕೊಳ್ಳಲು ಕಾರಣವಿಲ್ಲದುದರಿಂದಲೂ, ಮೃತದೇಹವನ್ನು ಪೃಥಿವೀತತ್ವದಲ್ಲಿ ಏಕೀಕರಣಮಾಡುವುದರಲ್ಲಿ ಔಚಿತ್ಯವಿರುವಂತೆ ದಹ ನಾದಿಗಳಲ್ಲಿಲ್ಲವು. ಮತ್ತು **ಉತ್ಸರ್ಗಶಾಸ್ತ್ರ, ಅಪವಾದಶಾಸ್ತ್ರ** ಎಂದು ಎರಡು ಶಾಸ್ತ್ರಗಳುಂಟು. ಇವುಗಳಲ್ಲಿ ಅಪವಾದ (ವಿಶೇಷ) ಶಾಸ್ತ್ರವೇ ಬಲವಾದುದು ಹೇಗೆಂದರೆ "**ಅಗ್ನೀಷೋಮೀಯಂ ಪಶುಮಾಲ ಭೇತ**" ಅಗ್ನೀಷೋಮ ಎಂಬ ಯಾಗಕ್ಕೆ ಸಂಬಂಧಪಟ್ಟ ಪಶುವನ್ನು ವಧಿಸತಕ್ಕುದು ಎಂಬ ವಾಕ್ಯವೇ ಪ್ರಬಲವಾಗಿರುವಂತೆ ಖನನ ವಿಧಾಯಕವಾಕ್ಯವು ವಿಶೇಷವಾಕ್ಯವಾದುದರಿಂದ ಪ್ರಬಲವಾಗಿರುತ್ತದೆ. "**ಮಾಹಿಂಸ್ಯಾತ್ಸರ್ವಾ ಭೂತಾನಿ**" ಯಾವ ಪ್ರಾಣಿಯನ್ನು ಯಾವಾ

ಗಲೂ ವಧಿಸತಕ್ಕದ್ದಲ್ಲ ಎಂಬ ಸಾಮಾನ್ಯ (ಉತ್ಸರ್ಗ) ವಾಕ್ಯವು ದುರ್ಬಲ ವಾಗಿರುವಂತೆ ದಹನವಿಧಾಯಕ ವಾಕ್ಯಗಳು ದುರ್ಬಲಗಳಾಗಿರುತ್ತವೆ. ಅಂದರೆ ಸೋಮಯಾಗದಲ್ಲಿ ಸಂಸ್ಕರಿಸಲ್ಪಟ್ಟ ಪಶುವನ್ನು ಮಾತ್ರ ಬಿಟ್ಟು ಉಳಿದ ಎಲ್ಲಾ ಪಶುಗಳ ವಿಷಯದಲ್ಲಿ ಹೇಗೆ (ಮಾಹಿಂಸ್ಯಾತ್ಸರ್ವಾ ಭೂತಾನಿ) ಎಂಬ ಆ ಸಾಮಾನ್ಯಶಾಸ್ತ್ರವು ಪ್ರವರ್ತಿಸುವುದೋ, ಅದರಂತೆ ಲಿಂಗಾಂಗಿಯ ಮೃತದೇಹವನ್ನು ಬಿಟ್ಟು ಇನ್ನುಳಿದ ಮೃತದೇಹಗಳಿಗೆ ದಹನವಿಧಾಯಕವಾದ ಸಾಮಾನ್ಯಶಾಸ್ತ್ರವನ್ನೇ ಅನುಸರಿಸಬೇಕು.

**ಶಂಕಾ:**—ಹಾಗಾದರೆ ಇದುವರೆಗೆ ಉದಾಹರಿಸಲ್ಪಟ್ಟ ಖನನ ವಿಷಯಕವಾದ ಪ್ರಮಾಣವಚನಗಳು ಸಂನ್ಯಾಸಿಗಳನ್ನುದ್ದೇಶಿಸಿರುವದಲ್ಲದೆ ಲಿಂಗಾಂಗಿಗಳನ್ನುದ್ದೇಶಿಸಿರುವುದಿಲ್ಲವೆಂದು ಏಕೆ ಹೇಳಬಾರದು?

**ಸಮಾಧಾನ:**—ಮೃತದೇಹವನ್ನು ಭೂನಿಕ್ಷೇಪಮಾಡಬೇಕೆಂದು ಇದುವರೆಗೆ ನಮ್ಮಿಂದ ಉದಾಹರಿಸಲ್ಪಟ್ಟ ಪ್ರಮಾಣವಚನಗಳಲ್ಲಿ ಸಂನ್ಯಾಸಿ ಗಳನ್ನು ನಿಕ್ಷೇಪಮಾಡಬೇಕೆಂಬ ಅರ್ಥವನ್ನು ಕೊಡುವ ಪದಗಳಾವುವೂ ಕಂಡುಬರುವುದಿಲ್ಲ. ಅಥವಾ ಲಿಂಗಾಂಗಿಯಾದ ಮೃತದೇಹವನ್ನು ಭೂನಿಕ್ಷೇಪಮಾಡುವಂತೆ ಸಂನ್ಯಾಸಿಗಳನ್ನು ಭೂನಿಕ್ಷೇಪಮಾಡುವ ವ್ಯವ ಹಾರವೂ ಕಂಡುಬರುವುದರಿಂದ ಖನನವಿಧಾನವು ಲಿಂಗಾಂಗಿಗಳು ಸಂನ್ಯಾಸಿಗಳು ಈ ಉಭಯ ಸಾಧಾರಣವೆಂದು ಹೇಳಬಹುದಲ್ಲದೆ ಖನನ ವನ್ನು ವಿಧಿಸುವ ಶ್ರುತಿಗಳೆಲ್ಲ ಸಂನ್ಯಾಸಿವಿಷಯಗಳೇ ಹೊರತು ಲಿಂಗಾಂಗಿ ವಿಷಯಗಳೇ ಅಲ್ಲವೆಂದು ಹೇಳಬಾರದು. ನಾವು ಹಿಂದೆ ಉದಾಹರಿಸಿದ ಶ್ರುತಿ ಸ್ಮೃತ್ಯಾಗಮಾದಿಗಳಲ್ಲಿ ಲಿಂಗಾಂಗಿಯ ದೇಹವನ್ನು ಖನನಮಾಡ ಬೇಕೆಂಬ ಅರ್ಥವುಳ್ಳ ಪದಗಳು ಸ್ಪಷ್ಟವಾಗಿರುತ್ತವೆ.

ಸ್ವಭಾವಮರಣಂ ನಾಮ ನ ತದಾತ್ಮೇಚ್ಛಯಾ ಭವೇತ್ ।
ತದಾ ಮೃತಾನಾಂ ಯತ್ಕಾರ್ಯಂ ತನ್ಮೇ ಶೃಣು ಯಥಾ ತಥಾ ॥
ಭೂಮೌ ಸಂವೇಶಯೇದ್ದೇಹಂ ನರಸ್ಯವಿನಶಿಷ್ಯತಃ ॥
ನಿರ್ಜೀವಂ ಶೃಣುಯಾತ್ಸದ್ಯೋ ವಾಸನಾತ್ತು ಕಲೇವರಮ್ ॥

ಮಾಲ್ಯಗಂಧೈರಲಂಕೃತ್ಯ ಸುವರ್ಣೇನ ಚ ಭಾಮಿನಿ।
ಸ್ಮಶಾನೇ ದಕ್ಷಿಣೇ ದೇಶೇ ಚಿತಾಗ್ನೌ ಪ್ರದಹೇನ್ಮೃತಮ್॥
ಅಥವಾ ನಿಕ್ಷಿಪೇಧ್ಭೂಮೌ ಶರೀರಂ ಜೀವವರ್ಜಿತಮ್।

(ಅನುಶಾಸನಪರ್ವ)

**ಅರ್ಥ:**—ಮರಣವೆಂಬುದು ಸ್ವಾಭಾವಿಕವಾದುದು. ತನ್ನಿಚ್ಛೆಯಿಂದ ಬರತಕ್ಕುದಲ್ಲ. ಮರಣಹೊಂದಿದವರಿಗೆ ಯಾವ ಸಂಸ್ಕಾರವನ್ನು ಮಾಡಬೇಕೆಂಬ ಪಾರ್ವತಿಯ ಪ್ರಶ್ನೆಗೆ ಪರಮೇಶ್ವರನು ಎಲೌ ಪಾರ್ವತಿಯೇ! ಮೃತದೇಹವನ್ನು ಗಂಧಮಾಲ್ಯ ಸುವರ್ಣಾದಿಗಳಿಂದ ಲಂಕರಸಿ ದಕ್ಷಿಣ ಭಾಗದಲ್ಲಿರುವ ಸ್ಮಶಾನಕ್ಕೆ ತೆಗದುಕೊಂಡುಹೋಗಿ ಚಿತಾಗ್ನಿಯಲ್ಲಿ ದಹಿಸತಕ್ಕುದು. ಅಥವಾ ಭೂಮಿಯಲ್ಲಿ ನಿಕ್ಷೇಪಮಾಡತಕ್ಕುದು ಎಂದು ಉತ್ತರವನ್ನು ಕೊಟ್ಟನೆಂದು ಮಹಾಭಾರತದ ಅನುಶಾಸನ ಪರ್ವದಲ್ಲಿ ಹೇಳಲ್ಪಟ್ಟಿದೆ.

**ಶಂಕೆ:**—ಆಗಲಿ, ದಹನ–ನಿಕ್ಷೇಪಗಳೆರಡನ್ನೂ ಒಪ್ಪುತ್ತೇವೆ. ಆದರೆ ದ್ವಿಜನ ಮೃತದೇಹವನ್ನು ದಹನಮಾಡಬೇಕು. ಶೂದ್ರನ ಮೃತದೇಹವನ್ನು ನಿಕ್ಷೇಪಮಾಡಬೇಕೆಂದು ವ್ಯವಸ್ಥೆಯಾಗುವಲ್ಲಿ ಲಿಂಗಧಾರಿಯ ಮೃತ ಶರೀರವನ್ನೆ ಭೂನಿಕ್ಷೇಪಮಾಡಬೇಕೆಂದು ಹೇಳಲಾಗುವುದಿಲ್ಲ.

**ಸಮಾಧಾನ:**—ದಹನಕ್ರಿಯೆಯು ಬ್ರಾಹ್ಮಣರಿಗೆಂದೂ, ಭೂನಿಕ್ಷೇಪವು ಶೂದ್ರರಿಗೆಂದೂ ವಿನಿಗಮನಮಾಡಲು ಅವಕಾಶವಿಲ್ಲ. ಹಾಗೆ ಮಾಡುವುದಾದರೆ ಬ್ರಾಹ್ಮಣರಿಗೆ ಭೂನಿಕ್ಷೇಪವನ್ನು, ಶೂದ್ರರಿಗೆ ದಹನ ಕ್ರಿಯೆಯನ್ನು ಮಾಡಬಹುದೆಂದು ವಿಪರೀತವಾಗಿ ಕಲ್ಪಿಸಲೂ ಒಹುದು. ಮತ್ತು ದಹನಕರ್ಮವು ಹೇಗೆ ಶ್ರೌತಕರ್ಮವಾಗಿರುವುದೋ ಖನನ ಕರ್ಮವೂ ಹಾಗೆ ಶ್ರೌತಕರ್ಮವೇ ಆಗಿದೆ. ಶೂದ್ರರಿಗೆ ಅಂತಹ ಶ್ರೌತ ಕರ್ಮಾಧಿಕಾರವಿಲ್ಲದುದರಿಂದ ಬ್ರಾಹ್ಮಣರಿಗೆ ದಹನಕರ್ಮವೇ ವಿಹಿತವಾಗುವಂತೆ ಖನನವಿಧಾನವು ಲಿಂಗಾಂಗಿಗಳಿಗೇನೇ ವಿಧಿವಿಹಿತವೆಂದು ಸಿದ್ಧ ವಾಗುವುದು.

ಲಿಂಗಂ ಶಿವೋ ಭವೇತ್ ಕ್ಷೇತ್ರಮಂಗಂ ಸಂಯೋಗ ಆಶ್ರಯಃ ।
ತಸ್ಮಾಲ್ಲಿಂಗಾಂಗಸಂಯುಕ್ತೋ ಯೋಽಪಿ ಸೋಽತ್ಯಾಶ್ರಮೀ ಭವೇತ್ ॥
ಅದರ್ಶನಮಿತಿ ಶ್ರೇಷ್ಠಮವಿಯೋಗೋಽಂಗಲಿಂಗಯೋಃ ।
ತಥೈವ ಖನನಂ ಶ್ರೇಷ್ಠಂ ವಿಶುದ್ಧೇ ಪೃಥಿವೀ ಬಿಲೇ ॥

**ಅರ್ಥ**:—ಲಿಂಗವೇ ಶಿವನು. ಅಂಗವೇ ಕ್ಷೇತ್ರವು. ಅಂಗಲಿಂಗಗಳ ಆಶ್ರಯವೇ ಸಂಯೋಗವು. ಇಂತಹ ಲಿಂಗಾಂಗಗಳಿಂದೊಡಗೂಡಿದವನು ಅತ್ಯಾಶ್ರಮಿಯೆಂದು ಹೇಳಿಸಿಕೊಳ್ಳುವನು. ಇವನಿಗೆ ಅಂಗಲಿಂಗಗಳ ನಿತ್ಯಸಂಬಂಧವಿರುವುದರಿಂದ ಇಂತಹ ಲಿಂಗಾಂಗಿಯಾದ ಮೃತದೇಹವನ್ನು ಪರಿಶುದ್ಧವಾದ ಭೂಮಿಯಲ್ಲಿ ಖನನಮಾಡುವುದೇ ಶ್ರೇಷ್ಠವಾದುದು ಎಂದು **ವಾತುಲೋತ್ತರ** ತಂತ್ರದಲ್ಲಿ ಹೇಳಲ್ಪಟ್ಟಿರುವುದರಿಂದ ಲಿಂಗಾಂಗಿಗಳಿಗೆ ಶ್ರೌತವೆನಿಸಿದ ಖನನಕರ್ಮವೇ ಸಾಧುವಾಗಿದೆಯಲ್ಲದೆ ದಹನಕರ್ಮವು ವಿಹಿತವಾಗುವುದಿಲ್ಲ.

ಅರ್ಥೀ ಸಮರ್ಥೋ ವಿದ್ವಾನ್ ಜಾತಪುತ್ರಃ
ಕೃಷ್ಣಕೇಶೋಽಗ್ನೀನಾದಧೀತ

**ಅರ್ಥ**:—ಅಪೇಕ್ಷೆಯುಳ್ಳವನೂ, ಸಮರ್ಥನೂ, ವಿದ್ವಾಂಸನೂ, ಮಕ್ಕಳುಳ್ಳವನೂ, ಕಪ್ಪುಕೇಶವುಳ್ಳವನೂ ಅಗ್ನ್ಯಾಧಾನ ಮಾಡಬೇಕು.

**ಅಂದರೆ**:—ಬ್ರಾಹ್ಮಣನು ವಸಂತಕಾಲದಲ್ಲಿಯೂ, ಕ್ಷತ್ರಿಯನು ಗ್ರೀಷ್ಮ ಕಾಲದಲ್ಲೂ, ವೈಶ್ಯನು ಶರತ್ಕಾಲದಲ್ಲೂ ಅಗ್ನ್ಯಾಧಾನ ಮಾಡಬೇಕೆಂದು ಬೇರೆ ವಾಕ್ಯಗಳಿಂದ ತಿಳಿಯಲ್ಪಡುತ್ತದೆ. ಆಧಾನಕರ್ಮಕ್ಕೆ ಅಂಗಭೂತರಾಗಿರುವ ಕರ್ತೃಗಳನ್ನು ಉದ್ದೇಶಿಸಿ ಈ ವಾಕ್ಯದಲ್ಲಿ "ಜಾತಪುತ್ರ, ಕೃಷ್ಣಕೇಶಿ" ಎಂಬ ವಿಶೇಷಣಗಳನ್ನು ವಿಧಿಸುವುದರಿಂದ ವಾಕ್ಯಭೇದವೆಂಬ ದೋಷವು ಪ್ರಸಕ್ತವಾಗುತ್ತದೆ. ಅದನ್ನು ಪರಿಹಾರಮಾಡುವದಕ್ಕಾಗಿ "ಜಾತಪುತ್ರಃ ಕೃಷ್ಣಕೇಶಿ" ಎಂಬ ಎರಡು ಪದಗಳಿಗೂ ಲಕ್ಷಣಾರ್ಥವನ್ನು ಸ್ವೀಕರಿಸಬೇಕೆಂದು ಮೀಮಾಂಸಾಶಾಸ್ತ್ರದಲ್ಲಿ ನಿಶ್ಚಯಗೊಳಿಸಿರುತ್ತಾರೆ. ಇಲ್ಲಿ ಜಾತಪುತ್ರನೆಂದರೆ ಮಕ್ಕಳುಳ್ಳವನು, ಕೃಷ್ಣಕೇಶಿಯೆಂದರೆ ಕಪ್ಪಾದ ಕೂದಲುಳ್ಳವನು, ಯಾವನು ಮಕ್ಕಳುಳ್ಳವನೋ,

ಯಾವನು ಕಪ್ಪಾದ ಕೂದಲುಳ್ಳವನೋ ಅವನೇ ಆಧಾನಕರ್ಮದಲ್ಲಿ ಕರ್ತೃವಾಗಿರಲು ಅರ್ಹನಾಗಿದ್ದಾನೆ ಎಂದು ಅವಯವಾರ್ಥದಿಂದ ತಿಳಿಯುವದು. ಇದರಿಂದ ಮಕ್ಕಳಿಲ್ಲದವನು, ಬಿಳುಪಾದ ಕೂದಲುಳ್ಳವನೂ ಅಗ್ನ್ಯಾಧಾನಕರ್ಮಕ್ಕೆ ಯೋಗ್ಯನಲ್ಲವೆಂದು ಗೊತ್ತಾಗುತ್ತದೆ. ಆದರೆ ಈ ಎರಡು ಪದಗಳಿಗೂ ಯಥಾಶ್ರುತವಾದ ಅರ್ಥವನ್ನಂಗೀಕರಿಸಿದರೆ ಹಿಂದೆ ಹೇಳಿದಂತೆ ಏಕವಾಕ್ಯತೆಯು ತಪ್ಪಿಹೋಗಿ ಭಿನ್ನವಾಕ್ಯತೆಯುಂಟಾಗುತ್ತದೆ. ಆದುದರಿಂದ ಏಕವಾಕ್ಯತೆಯನ್ನು ತೋರಿಸುವುದಕ್ಕಾಗಿ ಈ ಎರಡು ವಾಕ್ಯಗಳು ಸೇರಿ ಲಕ್ಷಣಾವೃತ್ತಿಯಿಂದ ವಯೋವಿಶೇಷವನ್ನು ತೋರಿಸುತ್ತವೆ ಅಂಥ ವಯೋವಿಶೇಷದಿಂದ ಕೂಡಿದವರೇ ಅಗ್ನ್ಯಾಧಾನಕ್ಕೆ ಅಂಗಭೂತರಾದ ಕರ್ತೃಗಳಾಗಿರಬೇಕೆಂದು ಸಂಕೋಚವನ್ನು ಮಾಡಬೇಕು. ಇದರಿಂದ ಅತ್ಯಂತ ಬಾಲಕನಾದವನಿಗೆ ಪುತ್ರೋತ್ಪತ್ತಿಯಾಗುವುದಿಲ್ಲ. ಬಹಳ ಮುದುಕನಾದವನಿಗೆ ಕೂದಲು ಕಪ್ಪಾಗಿರುವುದಿಲ್ಲ. ಆಧಾನಕರ್ಮದಲ್ಲಿ ಕರ್ತೃತ್ವವನ್ನು ವಹಿಸಬೇಕಾದರೆ ಅಂತಹ ಪುತ್ರೋತ್ಪತ್ತಿ ಶಕ್ತಿಯಿಲ್ಲದ ಅತಿಬಾಲಕನನ್ನು, ಬಿಳುಪು ಕೂದಲುಳ್ಳ ಅತಿವೃದ್ಧನನ್ನು ಬಿಟ್ಟು ಉಳಿದ ಯಾರನ್ನಾದರೂ ಆಧಾನದಲ್ಲಿ ಕರ್ತೃಗಳಾಗಬಹುದೆಂದು ನಿರ್ಧರಿಸಿರುತ್ತಾರೆ. ಇದರಂತೆ ದಹನವಿಧಿ ಮತ್ತು ಖನನವಿಧಿಗಳು ಎಲ್ಲರಿಗೂ ಹೇಳಲ್ಪಟ್ಟಿದ್ದರೂ ಪ್ರಕೃತದಲ್ಲಿ ಲಿಂಗಧಾರಣವಿಲ್ಲದ ಬ್ರಾಹ್ಮಣರನ್ನೂ, ಸ್ತ್ರೀಯರನ್ನೂ ಬಿಟ್ಟು ಮಿಕ್ಕ ಲಿಂಗಧಾರಿಗಳಾದ ಸ್ತ್ರೀಪುರುಷರ ಮೃತ ಶರೀರಗಳಿಗೆಲ್ಲಾ ಖನನ (ಭೂನಿಕ್ಷೇಪ) ಕರ್ಮವೇ ವಿಧಿವಿಹಿತವೆಂದು ನಿರ್ಣಯಿಸತಕ್ಕದು.

**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ।**
**ಯಜ್ಞೇನ ದಾನೇನ ತಪಸಾನಶನೇನ॥**

ಬ್ರಹ್ಮನಿಷ್ಠರಾದವರು, ಬ್ರಹ್ಮಶಬ್ದವಾಚ್ಯನಾದ ಪರಮಾತ್ಮನನ್ನು ವೇದಾನುವಚನದಿಂದಲೂ, ಯಜ್ಞಾದಿಕರ್ಮದಿಂದಲೂ, ದಾನದಿಂದಲೂ, ಕೃಚ್ಛ್ರಚಾಂದ್ರಾಯಣಾದಿ ತಪಸ್ಸಿನಿಂದಲೂ, ಅನಶನ ವ್ರತದಿಂದಲೂ, ತಿಳಿಯಲಿಚ್ಛಿಸುತ್ತಾರೆ.

ಅಂದರೆ:—ವಿವಿದಿಷೆ (ಮುಮುಕ್ಷು) ಯುಳ್ಳವನು ಯಜ್ಞಾದಿ ಕರ್ಮಗಳನ್ನು ಅವಶ್ಯ ಅನುಷ್ಠಿಸಲೇಬೇಕೆಂದು ನಿಶ್ಚಯಿಸಲ್ಪಟ್ಟಿರುವಂತೆ ಲಿಂಗಧಾರಿಗಳಾದ ಎಲ್ಲಾ ವೀರಶೈವ ಸ್ತ್ರೀ ಪುರುಷರ ಮೃತಶರೀರಗಳನ್ನು ಭೂಸಿಕ್ಷೇಪಮಾಡುವುದೇ ಅವಶ್ಯಕರ್ತವ್ಯವೆಂದು ನಿರ್ಣಯವಾಗುತ್ತದೆ.

ಕಶ್ಯಪಾದಿಭರದ್ವಾಜಗೌತಮಾದ್ಯಾ ಮಹರ್ಷಯಃ ।

ಇತ್ಯಾದಿ ವಚನಾನುಸಾರವಾಗಿ ಲಿಂಗಧಾರಿಗಳಾದ ಕಶ್ಯಪ, ಅತ್ರಿ, ಭರದ್ವಾಜಾದಿ ಮಹರ್ಷಿಗಳೂ ಶಿವಪುರಾಣದಲ್ಲಿ ವಾಯವೀಯ ಸಂಹಿತೆಯೊಳು ಜಟಾಲಿಂಗಧಾರಣವನ್ನು ಹೇಳುವ ಪ್ರಸ್ತಾಪದಲ್ಲಿ ಆಹಿತಾಗ್ನಿಗಳ ಧರ್ಮವನ್ನು ಹೇಳುವುದರಿಂದ, ಈಚಿನವರಾದ ಕೆಲ ಪೂರ್ವಶೈವರಿಗೂ ಆಹಿತಾಗ್ನಿತ್ವವನ್ನು ಹೇಳುವುದರಿಂದ ಅಂತಹ ಆಹಿತಾಗ್ನಿಗಳಿಗೆ ದಹನ ಕ್ರಿಯೆಯು ಮಾಡಬೇಕೆಂಬ ನಿಷೇಧವು ಪ್ರಸಕ್ತವಾಗಲಾಗಿ "ಆಹಿತಾಗ್ನಿಮಗ್ನಿಭಿರ್ದಹಂತಿ ಯಜ್ಞಪಾತ್ರೈಃ" ಯಜ್ಞಪಾತ್ರೆಗಳೊಡನೆ ಆಹಿತಾಗ್ನಿಯನ್ನು ದಹಿಸಬೇಕೆಂದು ಕಲ್ಪಸೂತ್ರದಲ್ಲಿ ಹೇಳಲ್ಪಟ್ಟಿದೆ.

ಏವಂ ಮೃತಾಂ ಸವರ್ಣಾಂ ಸ್ತ್ರೀಂ ದ್ವಿಜಾತಿಃ ಪೂರ್ವಮಾರಿಣೀಮ್
ದಾಹಯೇದಗ್ನಿಹೋತ್ರೇಣ ಯಜ್ಞಪಾತ್ರೈಶ್ಚ ಧರ್ಮವಿತ್ ।
ಭಾರ್ಯಾಯೈ ಪೂರ್ವಮಾರಿಣ್ಯೈ ದತ್ವಾಗ್ನೀನಂತ್ಯಕರ್ಮಣಿ
ಪುನರ್ದಾರಕ್ರಿಯಾಂ ಕುರ್ಯಾತ್ಪುನರಾಧಾನಮೇವ ಚ ॥

(ಮನು)

ಎಂಬ ಮನುಸ್ಮೃತ್ಯನುಸಾರವಾಗಿ ಯಾಗಶೀಲನ ಪತ್ನಿಯು ಅಕಸ್ಮಾತ್ ಮರಣಹೊಂದಲು ಯಾಗ ಸಂಬಂಧವಾದ ಅಗ್ನಿಹೋತ್ರದ ಪಾತ್ರೆಗಳೊಡನೆ ಆಕೆಯನ್ನು ದಹನಮಾಡಬೇಕೆಂದು ವಿಧಿಸಿದೆ. ಎರಡನೆಯ ವಿವಾಹವಾಗುವುದಕ್ಕಿಂತ ಮುಂಚಿತವಾಗಿ ಅಂಥ ಯಾಗಶೀಲನು ಮರಣಹೊಂದಲು ಆ ಅಗ್ನಿಹೋತ್ರ ಪಾತ್ರೆಗಳನ್ನು ಮೊದಲೇ ವಿನಿಯೋಗ ಮಾಡಿರುವುದರಿಂದ, ಕಲ್ಪಸೂತ್ರದಲ್ಲಿ ಹೇಳಲ್ಪಟ್ಟ ಯಾಗಸಂಬಂಧಿಗಳಾದ ಅಗ್ನಿಹೋತ್ರ ಪಾತ್ರೆಗಳೇ ಇರುವುದಿಲ್ಲ. ಆಗ, ಅಗ್ನಿಹೋತ್ರಪಾತ್ರೆಗಳೇ ಸಾಧನವಾದ ದಹನಕರ್ಮಕ್ಕೆ ಅನಿತ್ಯವನ್ನು ಸ್ವೀಕರಿಸಬೇಕಾಗುವುದು.

**ಶಂಕೆ:**—ಕಲ್ಪಸೂತ್ರದಲ್ಲಿ "ಯಜ್ಞಪಾತ್ರೈರ್ವಾ" ಎಂದು ವಿಕಲ್ಪವನ್ನು ವಿಧಾನಮಾಡಿರುವುದರಿಂದ ಯಜ್ಞದ ಅರಣಿ ಮುಂತಾದವುಗಳ ಹೊರತು ಅಗ್ನಿಹೋತ್ರ ಪಾತ್ರೆಗಳೊಡನೆ ಯಜ್ಞಮಾಡಿದವನ ಮರಣ ಹೊಂದಿದ ಪತ್ನಿಯನ್ನು ದಹನಮಾಡಿದರೂ, ಅರಣಿಮಂಥನಗಳು ಹಾಗೆಯೇ ಉಳಿದುಕೊಳ್ಳುವುದರಿಂದ ಯಜ್ಞಮಾಡಿದವನು ಮರಣಹೊಂದಲಾಗಿ ಮತ್ತೆ ಅಗ್ನಿಯನ್ನು ಹುಟ್ಟಿಸಿ ಅರಣ್ಯಾದಿಗಳೊಡನೆ ದಹನಮಾಡಲ್ಪಡಬೇಕು.

**ಸಮಾಧಾನ:**-"ಯಜ್ಞಪಾತ್ರೈಶ್ಚ ಧರ್ಮವಿತ್" ಎಂದು ಮನುಸ್ಮೃತಿಯಲ್ಲಿ ಹೇಳಿರುವದರಿಂದ ಕಿಂಚಿತ್ಪಾತ್ರಗಳ ಹೊರತು ಮಿಕ್ಕ ಪಾತ್ರೆಗಳೊಡನೆ ದಹನಕ್ರಿಯೆಯು ತೋರದಿರುವುದರಿಂದಲೂ ಹಾಗಿದ್ದರೂ ಯಾಗ ಸಂಬಂಧವಾದ ಅಗ್ನಿಹೋತ್ರದಿಂದ ಯಜ್ಞಮಾಡುವವನಿಗೆ ದಹನವಿಲ್ಲದಿರುವುದರಿಂದಲೂ ಕಲ್ಪಸೂತ್ರದಲ್ಲಿ ಹೇಳಿದ ಕರ್ಮಗಳಿಗೆ ಅನಿತ್ಯತ್ವವನ್ನು ಪರಿಹರಿಸಲಾಗುವುದೇ ಇಲ್ಲ. ಮತ್ತು—

ಪ್ರಾಜಾಪತ್ಯಾಂ ನಿರೂಪ್ಯೇಷ್ಟಿಂ ಸರ್ವಸ್ವೇನ ಸದಕ್ಷಿಣಾಮ್ ।
ಆತ್ಮನ್ಯಗ್ನೀನ್ ಸಮಾರೋಪ್ಯ ಬ್ರಾಹ್ಮಣಃ ಪ್ರವ್ರಜೇತ್ ಗೃಹಾತ್ ॥

**ಅರ್ಥ:**—ಆಹಿತಾಗ್ನಿಯಾದ ಬ್ರಾಹ್ಮಣನು ಸಂನ್ಯಾಸ ಸ್ವೀಕಾರ ಮಾಡುವ ಸಮಯವುಂಟಾಗಲು ಪ್ರಾಜಾಪತ್ಯಯಾಗವನ್ನು ಮಾಡಿ ವೈದಿಕಾಗ್ನಿಗಳನ್ನು ಆತ್ಮನಲ್ಲಿ ಸಮಾರೋಪಣಂಗೈದು, ಮನೆಮಠಗಳನ್ನು ತ್ಯಾಗಮಾಡಿ, ಸಂನ್ಯಾಸ ಸ್ವೀಕಾರ ಮಾಡಬೇಕೆಂದು ಮನುಸ್ಮೃತಿಕಾರರು ಹೇಳಿರುತ್ತಾರೆ. ಅಂತಹ ಸಂನ್ಯಾಸವನ್ನು ಸ್ವೀಕರಿಸಿದವನಿಗೆ

ಸರ್ವಕರ್ಮನಿವೃತ್ತಸ್ಯ ಧ್ಯಾನಯೋಗರತಸ್ಯ ಚ

ಎಂದು ಅದೇ ಮನುಸ್ಮೃತಿಯಲ್ಲಿ ಹಿಂದೆ ಉದಾಹರಿಸಿರುವ ವಚನಗಳಿಂದ ದಹನಕರ್ಮವು ನಿಷೇಧಿಸಲ್ಪಟ್ಟಿರುವುದರಿಂದ ಅನಿತ್ಯತ್ವವು ಸಂಘಟಿಸುವುದು.

**ಶಂಕೆ:**—ಯಾಗಶೀಲನಾದವನು ಸಂನ್ಯಾಸವನ್ನು ಸ್ವೀಕರಿಸಿದಮೇಲೆ ಆತನ ಮೃತದೇಹಕ್ಕೆ ದಹನಕ್ರಿಯೆಯು ನೆರವೇರಿಸಲ್ಪಡದಿದ್ದರೂ ಆತನ

ಹೆಂಡತಿ ತನ್ನ ದೇಹವಿರುವವರಿವಿಗೂ ಆ ಯಜ್ಞಪಾತ್ರೆಗಳನ್ನು ಸಂಗ್ರಹಿಸಿದ್ದು ಅವಸಾನಸಮಯದಲ್ಲಿ ಆ ಪಾತ್ರೆಗಳೊಡನೆ ಆಕೆಯು ದಹಿಸಲ್ಪಡುತ್ತಾಳೆ.

**ಸಮಾಧಾನ :**—"ಆಹಿತಾಗ್ನಿಮಗ್ನಿಭಿರ್ದಹಂತಿ" ಎಂದು ಶ್ರುತಿಯಲ್ಲಿ ಪುಲ್ಲಿಂಗವನ್ನು ಪ್ರಯೋಗಿಸಿರುವುದರಿಂದ ಆಹಿತಾಗ್ನಿಪದವು ಯಾಗಶೀಲಪರವಾದುದರಿಂದ ಅವನನ್ನು ದಹಿಸದಿದ್ದರೆ ಅನಿತ್ಯತ್ವವು ಪರಿಹಾರವಾಗುವುದಿಲ್ಲ.

**ಶಂಕೆ :**—ಅದೇಕೆ ? ಶ್ರುತಿಯಲ್ಲಿರುವ ಆಹಿತಾಗ್ನಿಪದವು ಪುಲ್ಲಿಂಗವಾಗಿದ್ದರೂ ಲಿಂಗವ್ಯತ್ಯಾಸಮಾಡಿ ಆತನ ಪತ್ನಿಯ ಪರವೆಂದು ಹೇಳಬಹುದಲ್ಲವೆ ?

**ಸಮಾಧಾನ :**—ಹಾಗೆ ಹೇಳಲಾಗುವುದಿಲ್ಲ. ಏಕೆಂದರೆ ಯಾಗಸಂಬಂಧಗಳಾದ ಅಗ್ನಿಹೋತ್ರ ಮತ್ತು ಪಾತ್ರ ಈ ಉಭಯವೂ ಸಾಧನವಾಗುಳ್ಳ ದಹನಕರ್ಮವು ಪತ್ನಿಗೆ ಇಲ್ಲದಿರುವುದರಿಂದ ಕಲ್ಪಸೂತ್ರದಲ್ಲಿ ಹೇಳಿದ ಕರ್ಮಕ್ಕೆ ಅನಿತ್ಯತ್ವವನ್ನು ಅವಶ್ಯವಾಗಿ ಒಪ್ಪಲೇಬೇಕಾಗಿರುವುದರಿಂದಲೂ ಮತ್ತು ದೇಶ ಕಾಲ ವೈಪರೀತ್ಯಾದಿಗಳಿಂದ ಯಜ್ಞಪಾತ್ರೆಗಳು ವಿಚ್ಛಿನ್ನವಾದರೆ ಅವುಗಳೊಡನೆ ದಹನಮಾಡಲು ಸಾಧ್ಯವಿಲ್ಲವಾದುದರಿಂದಲೂ ಸಂನ್ಯಾಸವನ್ನು ಸ್ವೀಕರಿಸಿದ ಯಾಗಶೀಲನು ಅಗ್ನಿಹೋತ್ರವನ್ನು ಆತ್ಮಾರೋಪಣಮಾಡುವ ಸಮಯದಲ್ಲಿ ಪಾತ್ರೆಗಳನ್ನು ಬೇರೆ ದಹಿಸಿ ಸಂನ್ಯಾಸವನ್ನು ಸ್ವೀಕರಿಸಬಹುದೆಂಬ ಪಕ್ಷದಲ್ಲಿ ಅವನ ಪತ್ನಿಯ ದೇಹ ಬಿಡುವವರಿವಿಗೂ ಪಾತ್ರೆಗಳೇ ಇಲ್ಲದಂತಾಗುವುದರಿಂದ ಹಾಗೆ ಹೇಳಲಾಗುವುದಿಲ್ಲ. ಮತ್ತು—

ಗೃಹಸ್ಥಸ್ತು ಯದಾ ಪಶ್ಯೇದ್ವಲೀಪಲಿತಮಾತ್ಮನಃ ।
ಅಪತ್ಯಸ್ಯೈವ ಚಾಪತ್ಯಂ ತದಾರಣ್ಯಂ ಸಮಾಶ್ರಯೇತ್ ॥
ಸಂತ್ಯಜ್ಯ ಗ್ರಾಮ್ಯಮಾಹಾರಂ ಸರ್ವಂ ಚೈವ ಪರಿಚ್ಛದಮ್ ।
ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ಸಹೈವ ವಾ ॥

ಅಗ್ನಿಹೋತ್ರಂ ಸಮಾದಾಯ ಗೃಹಂ ಚಾಗ್ನಿಪರಿಚ್ಛದಮ್ ।
ಗ್ರಾಮಾದರಣ್ಯಂ ನಿಸ್ಸೃತ್ಯ ನಿವಸೇನ್ನಿಯತೇಂದ್ರಿಯಃ ॥
ವೈತಾನಿಕಂ ಚ ಜಹುಯಾದಗ್ನಿಹೋತ್ರಂ ಯಥಾ ವಿಧಿ ।

ಎಂದು ಸ್ಮೃತಿಕಾರರು ಬ್ರಹ್ಮಚಾರಿಯು ಗೃಹಸ್ಥಾಶ್ರಮವನ್ನೂ, ಗೃಹಸ್ಥನು ವಾನಪ್ರಸ್ಥಾಶ್ರಮವನ್ನೂ, ವಾನಪ್ರಸ್ಥನು ಸಂನ್ಯಾಸಾಶ್ರಮವನ್ನೂ ಸ್ವೀಕಾರ ಮಾಡಬೇಕೆಂದು ಆಶ್ರಮಗಳ ಕ್ರಮವನ್ನು ತೋರಿಸಿರುತ್ತಾರೆ. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವ ಸಮಯದಲ್ಲಿ ತಾನು ಆಹಿತಾಗ್ನಿಯಾಗಿದ್ದರೆ ಪ್ರಾಜಾಪತ್ಯೇಷ್ಟಿಯನ್ನುಮಾಡಿ ತನ್ನೊಳು ಅಗ್ನಿಸಮಾರೋಪಣಂಗೈದು, ಪತ್ನಿಯನ್ನು ಪುತ್ರರೊಂದಿಗೆ ಬಿಟ್ಟು ಅರಣ್ಯಪ್ರವೇಶಮಾಡಬೇಕು. ಒಂದುಪಕ್ಷ ವಾನಪ್ರಸ್ಥಾಶ್ರಮದಲ್ಲಿರುವವನಿಗೆ ಅಗ್ನಿಹೋತ್ರಾದಿಕರ್ಮಗಳ ಅಧಿಕಾರವಿರುವದರಿಂದ ಅಗ್ನಿಹೋತ್ರ ಪಾತ್ರಾದಿಗಳನ್ನು ತೆಗೆದುಕೊಂಡು ಹೆಂಡತಿಯೊಡನೆ ಕಾಡಿಗೆ ಹೋಗಿ ಗೆಡ್ಡೆ ಗೆಣಸು ತಿಂದು ಜೀವಿಸುತ್ತಿರಬೇಕೆಂದು ಹೇಳಿರುವದರಿಂದ ಯಾಗಶೀಲನಾದ ವಾನಪ್ರಸ್ಥನು ದೇಹ ಬಿಡುವ ಸಮಯವೊದಗಲಾಗಿ

"ವಾನಪ್ರಸ್ಥಂ ಯೋಗಿನಂ ಚ ಲಿಂಗೈಕ್ಯಂ ಭಿಕ್ಷುಕಂ ಯತಿಮ್"

ಎಂದು ಹಿಂದೆ ಹೇಳಲ್ಪಟ್ಟ ಶಾತಾತಪಸ್ಮೃತಿಯಂತೆ ಅಂಥ ವಾನಪ್ರಸ್ಥನಿಗೆ ಖನನವನ್ನು ಮಾಡಬೇಕೆಂದು ವಿಧಿಸಿರುವುದರಿಂದ ಕಲ್ಪಸೂತ್ರದಲ್ಲಿ ಹೇಳಿರುವಂತೆ ಯಾಗಸಂಬಂಧಗಳಾದ ಅಗ್ನಿಹೋತ್ರಪಾತ್ರಸಾಧಕವಾದ ದಹನಕರ್ಮಕ್ಕೆ ನಿತ್ಯತ್ವವೇ ಇಲ್ಲದಂತಾಗುವುದು.

**ಶಂಕೆ:**—ಅಂಥವನಿಗೆ ದಹನಕರ್ಮ ನಡೆಯದಿದ್ದರೂ ಅವನ ಪತ್ನಿಯು ಮರಣಹೊಂದುವವರೆಗೆ ಆ ಪಾತ್ರೆಗಳನ್ನಿಟ್ಟುಕೊಂಡಿದ್ದು ಅವುಗಳೊಡನೆ ದಹನಕ್ರಿಯೆಯು ಮಾಡಲ್ಪಡುತ್ತದೆಂದು ಹೇಳುತ್ತೇವೆ.

**ಸಮಾಧಾನ:**— ಪತ್ನಿಯೊಡನೆ ವಾನಪ್ರಸ್ಥಾಶ್ರಮ ಸ್ವೀಕಾರಮಾಡಿರುವುದರಿಂದ ಆಕೆಯೂ ವಾನಪ್ರಸ್ಥಾಶ್ರಮ ಸ್ವೀಕಾರಮಾಡಿದಂತಾಗುವುದರಿಂದ ಆಕೆಯನ್ನು ದಹನಮಾಡಲವಕಾಶವಿಲ್ಲ. ಹಾಗಾದರೆ ಯಜ್ಞೀಯ ಪಾತ್ರೆಗಳಿಗೇನು ಗತಿಯೆಂದರೆ ಅಗ್ನಿಹೋತ್ರದಿಂದ ಪಾತ್ರೆಗಳನ್ನು ಬೇರೆ ಬೇರೆ ದಹನ

ಮಾಡತಕ್ಕದ್ದು. ವಾನಪ್ರಸ್ಥನ ಪತ್ನಿಯ ಮೃತಶರೀರವನ್ನು ಖನನಮಾಡ ತಕ್ಕದ್ದೆಂದು ನಿರ್ಧರಿಸತಕ್ಕುದು. ಆಗಲಿ, ವಾನಪ್ರಸ್ಥನ ಹೆಂಡತಿಗೆ ದಹನ ಕರ್ಮವೇ ಮಾಡಲ್ಪಡತಕ್ಕುದೆಂದು ಹೇಳುವುದಾದರೂ ಯಜಮಾನನು ಇಲ್ಲದೆ ಹೋದರೆ ವೈತಾನಿಕಾಗ್ನಿಗಳೇ ಇಲ್ಲದಂತಾಗುವುದರಿಂದ ಅಂಥ ಪಾತ್ರೆ ಗಳು ದೇಶಕಾಲ ವೈಪರೀತ್ಯದಿಂದ ವಿಚ್ಛಿನ್ನವಾಗಿ ಹೋಗಲು ಲೌಕಿಕಾಗ್ನಿ ಯಿಂದ ದಹನಕರ್ಮವನ್ನು ನೆರವೇರಿಸಬೇಕಾಗುವದು. ಆಗ ಕಲ್ಪಸೂತ್ರ ಗಳಲ್ಲಿ ಹೇಳಲ್ಪಟ್ಟ ಕರ್ಮಗಳಿಗೆ ಅನಿತ್ಯತ್ವವೆಂಬುದು ಮತ್ತಿಷ್ಟೂ ವಜ್ರ ಲೇಪದಂತೆ ಘಟ್ಟಗೊಳ್ಳುವುದು

**ಶಂಕಾ:**—ಮನು, ಕಲ್ಪಸೂತ್ರಗಳಲ್ಲಿ ಹೇಳಿದಂತೆ ಅಗ್ನಿಯಿಂದ ದಹನಮಾಡುವುದೇ ಶ್ರೌತಕರ್ಮವಾದ್ದರಿಂದಲೂ, ಶಾತಾತಪ ಮುಂತಾದ ಸ್ಮೃತಿಗಳಲ್ಲಿ ಹೇಳಿದಂತೆ ದಹನವು ಖನನಕ್ಕಿಂತ ಬಲವತ್ತರವಾದುದ ರಿಂದಲೂ, ಅಂತಹ ಖನನವಿಧಾಯಕ ವಚನಗಳೇ ಅನಿತ್ಯಗಳಾಗುವುವಲ್ಲದೆ ದಹನವಿಧಾಯಕ ವಚನಗಳು ನಿತ್ಯಗಳೇ ಆಗಿರುತ್ತವೆ.

**ಸಮಾಧಾನ:**—ಆದರೆ ಶ್ರುತಿಯಲ್ಲಿಯೂ ಅನಿತ್ಯತ್ವವು ಹೇಳ ಲ್ಪಟ್ಟಿರುತ್ತದೆ.

"ಯೇಽಗ್ನಿದಗ್ಧಾ ಯೇಽನಗ್ನಿದಗ್ಧಾ ಯೇ ವಾ ಜಾತಾಃ ।
ಕುಲೇ ಮಮ ಭೂಮೌ ದತ್ತೇನ ಪಿಂಡೇನ ತೃಪ್ತಾ ಯಾಂತು
ಪರಾಂ ಗತಿಮ್ ॥"

ಈ ಮಂತ್ರವು ಪಿಂಡಪ್ರದಾನಮಾಡುವ ಸಮಯದಲ್ಲಿ ಹೇಳಲ್ಪಟ್ಟಿರು ತ್ತದೆ. ಇಲ್ಲಿ ಆಹಿತಾಗ್ನಿಗಳನ್ನು ಅಗ್ನಿಯಿಂದ ದಹನಮಾಡಬಾರದೆಂದು ಅನಗ್ನಿದಗ್ಧಕೋಟಿ ಪ್ರವೇಶಮಾಡಿಸಿರುತ್ತಾರೆ.

**ಶಂಕೆ:**—

"ನ್ಯೂನಂ ದ್ವಿವಾರ್ಷಿಕಂ ಬಾಲಂ ನಿಧನೇ ನ ತು ದಾಹಯೇತ್"

ಎರಡು ವರ್ಷ ಮೀರದ ಮಕ್ಕಳನ್ನು ದಹನಮಾಡಬಾರದೆಂದು ನಿಷೇಧಮಾಡಿರುವುದರಿಂದ ಅಂಥ ಬಾಲಕರನ್ನು ಮಾತ್ರ ಅನಗ್ನಿಕೋಟಿ ಯಲ್ಲಿ ಪ್ರವೇಶಮಾಡಿಸುವುದರಿಂದ ಸೂತ್ರದಲ್ಲಿ ಹೇಳಿದಂತೆ ದಹನಕರ್ಮಕ್ಕೆ ನಿತ್ಯತ್ವವೇ ಉಂಟಾಯಿತೆಂದು ಹೇಳುತ್ತೇವೆ.

ಅಸಂಸ್ಕೃತಪ್ರಮೀತಾ ಯೇ ತ್ಯಾಗಿನ್ಯೋ ಯಾಃ ಕುಲಸ್ತ್ರಿಯಃ ।
ದಾಸ್ಯಾಮಿ ತೇಭ್ಯೋ ವಿಕರಮನ್ನಂ ತಾಭ್ಯಶ್ಚಪ್ಯೈತ್ಯಕವ್ ॥

ಎಂದು ಹೇಳಿರುವುದರಿಂದ ಅಂಥ ಬಾಲಕರಿಗೆ ಪ್ರತ್ಯೇಕ ವಿಧಾನಮಾಡಿರುವುದರಿಂದ ದಹನವಿಧಾಯಕ ವಾಕ್ಯಗಳಿಗೆ ಅನಿತ್ಯತ್ವವನ್ನು ಒಪ್ಪಲೇಬೇಕಾಗುವುದು.

ಶಂಕೆ :—ಹಾಗಾದರೆ ಸಂನ್ಯಾಸಿಗಳನ್ನು ಅಗ್ನಿಯಲ್ಲಿ ದಹಿಸಬಾರದೆಂದು ಅನಗ್ನಿಕೋಟಿ ಪ್ರವೇಶಮಾಡಿಸುತ್ತೇವೆ.

ಸಮಾಧಾನ :—

ನ ತಸ್ಯ ದಹನಂ ಕಾರ್ಯಂ ನ ಚ ಪಿಂಡೋದಕಕ್ರಿಯಾ ।
ಏಕೋದ್ದಿಷ್ಟಂ ನ ಕರ್ತವ್ಯಂ ಸಂನ್ಯಸ್ತಾನಾಂ ಕದಾಚನ ॥

ಎಂದು ಶೌನಕ ಸ್ಮೃತಿಯಲ್ಲಿ ಸಂನ್ಯಾಸಿಗಳಿಗೆ ದಹನಸಂಸ್ಕಾರಪೂರ್ವಕ ಪಿಂಡಪ್ರದಾನ ಮಾಡಕೂಡದೆಂದು ನಿಷೇಧಿಸಿರುವುದರಿಂದ ಅಗ್ನಿದಗ್ಧರಿಗೂ ಅನಗ್ನಿದಗ್ಧರಿಗೂ ಪಿಂಡಪ್ರದಾನ ಹೇಳಿರುವುದರಿಂದ ಸಂನ್ಯಾಸಿಗಳನ್ನು ಅನಗ್ನಿದಗ್ಧಕೋಟಿಯಲ್ಲಿ ಪ್ರವೇಶಮಾಡಿಸಲವಕಾಶವಿಲ್ಲ.

ಯಜಮಾನಕುಲೇ ಜಾತಾಃ ದಾಸಾ ದಾಸ್ಯೋಽನ್ನಕಾಂಕ್ಷಿಣಃ

ಎಂಬ ಪ್ರಮಾಣವಚನಗಳಿರುವುದರಿಂದ ಶೂದ್ರರಿಗೆ ವೇದೋಕ್ತ ಕರ್ಮಾಧಿಕಾರವೇ ಇಲ್ಲದುದರಿಂದ ಅಂತಹ ಪಿಂಡಪ್ರದಾನಾದಿಗಳನ್ನು ಮಾಡದೆ ಕೇವಲ ಅನ್ನದಿಂದ ದಾಸೀದಾಸಾದಿಗಳನ್ನು ತೃಪ್ತಿಗೊಳಿಸಬೇಕಾಗಿರುವುದರಿಂದಲೂ, ಶೂದ್ರರನ್ನು ಅನಗ್ನಿಕೋಟಿಯಲ್ಲಿ ಪ್ರವೇಶಿಸಲವಕಾಶವಿಲ್ಲ. ಪಾರಿಶೇಷನ್ಯಾಯದಿಂದ ದೇಶಾಂತರದಲ್ಲಿ ಯಾರೂ ಇಲ್ಲದ ಪ್ರದೇಶದಲ್ಲಿ ಮರಣಹೊಂದಿದ ಮಕ್ಕಳೊಂದಿಗನಿಗೆ ಕರ್ತರಾರೂ ಇಲ್ಲದ ಪ್ರಯುಕ್ತ ಅಗ್ನಿಸಂಸ್ಕಾರವಿಲ್ಲದವರಿಗೂ, ಯಜಮಾನ ಕುಲದಲ್ಲಿ ಹುಟ್ಟಿದ ಆಹಿತಾಗ್ನಿಗಳಾಗಲಿ, ಅನಾಹಿತಾಗ್ನಿಗಳಾಗಲಿ, ಅರಣ್ಯಪ್ರವೇಶಮಾಡಿದ ಗೃಹಸ್ಥರಿಗೂ ಖನನವಿಧಿಯಲ್ಲಿ ಹೇಳಲ್ಪಟ್ಟ ಆಹಿತಾಗ್ನಿ, ವಾನಪ್ರಸ್ಥರಿಗೂ, ಅವಸಾನವುಂಟಾಗಲು ಅವರಿಗೆ ಅಗ್ನಿದಹನಕರ್ಮವನ್ನು ಮಾಡದಿರುವುದರಿಂದ ಅನಗ್ನಿಕೋಟಿಯಲ್ಲಿ ಪ್ರವೇಶಮಾಡಿಸತಕ್ಕದ್ದೆಂದು ನಿರ್ಧರಿಸಬೇಕು.

ಇದರಿಂದ ಕಲ್ಪಸೂತ್ರಾದಿಗಳಲ್ಲಿ ಹೇಳಿದಂತೆ ಅಗ್ನಿದಹನಕ್ರಿಯೆಯು ಅನಿತ್ಯವೆಂದು ಸಿದ್ಧವಾಯಿತು.

ಲಿಂಗಾಂಗಿಗಳಾದ ವೀರಶೈವರಿಗೆ ಹಿಂದೆ ಉದಾಹರಿಸಿದ ಶ್ರುತಿಸ್ಮೃತ್ಯಾದಿ ಅನೇಕ ಪ್ರಮಾಣಗಳಿಂದ ಖನನವಿಧಾನವೇ ಹೇಳಲ್ಪಟ್ಟಿತಲ್ಲದೆ ಆಹಿತಾಗ್ನಿಗಳಿಗೂ, ದೇಹ ಬಿಡುವುದಕ್ಕೆ ಪೂರ್ವ ಪ್ರಾಜಾಪತ್ಯೇಷ್ಟಿಯನ್ನು ಮಾಡಿ ವೈದಿಕಾಗ್ನಿಗಳನ್ನು ಆತ್ಮಸಮಾರೋಪಣವಾಡಿ ದೇಹವನ್ನು ಬಿಡುವುದರಿಂದ ಅವರಿಗೂ ಖನನವಿಧಿಯು ಹೇಳಲ್ಪಟ್ಟಿದೆ ಯಜ್ಞಪಾತ್ರೆಗಳನ್ನು ಬೇರೆ ಬೇರೆ ದಹಿಸಿದ ತರುವಾಯ ಅವರ ಪತ್ನಿಗೂ ತಮ್ಮ ಅವಸಾನದಲ್ಲಿ ಖನನವೇ ವಿಧಿಸಲ್ಪಟ್ಟಿದೆ. ಇದಲ್ಲದೆ ಮಾರ್ಗಶೈವರಿಗೆ ಖನನಕರ್ಮವನ್ನು ಬಿಟ್ಟು ದಹನಕರ್ಮವನ್ನು ಮಾಡುವುದು ದೋಷಾರ್ಹವೆಂದು ಹೇಳಿರುವುದರಿಂದ ಆಹಿತಾಗ್ನಿಗಳೇ ಆಗಲಿ, ಅನಾಹಿತಾಗ್ನಿಗಳೇ ಆಗಲಿ, ಇಂಥ ಮಾರ್ಗಶೈವರ ವಿಷಯದಲ್ಲಿ ದಹನವನ್ನು ವಿಧಿಸುವ ಸಕಲ ವಾಕ್ಯಗಳಿಗೂ ಸಂಕೋಚವನ್ನು ಅಂಗೀಕಾರಮಾಡಲೇಬೇಕು.

ಶಿವಲಿಂಗಧರಂ ವಿಪ್ರಂ ವಿಪನ್ನಂ ತು ನ ದಾಹಯೇತ್
ಯದಿ ವಾ ದಾಹಯೇತ್ತಸ್ಯ ಬ್ರಹ್ಮಹತ್ಯಾ ತದಾ ಭವೇತ್ ॥

ಲಿಂಗಧಾರಿಯಾದವನನ್ನು ಎಂತಹ ವಿಪತ್ತೊದಗಿದರೂ ಖನನಮಾಡಬೇಕಲ್ಲದೆ ದಹನಸಂಸ್ಕಾರ ಮಾಡಬಾರದು. ಪ್ರಮಾದದಿಂದ ದಹನಮಾಡಿದವನು ಬ್ರಹ್ಮಹತ್ಯಾ ದೋಷಕ್ಕೆ ಭಾಗಿಯಾಗುವನು ಎಂದು ಸದಾನಂದೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತವೆ.

ಮೃತಲಿಂಗಾಂಗಿನೋ ದೇಹಮಜ್ಞಾನಾದ್ದಹತೇ ಯದಿ ।
ಶಿವಾಲಯಸಹಸ್ರಾಣಾಂ ದಾಹದೋಷಮವಾಪ್ನುಯಾತ್ ॥
ಯದೀಚ್ಛೇದ್ದಹನಂ ತತ್ರ ಶಿವಾಗ್ನೌ ತನ್ನಿವೇದಯೇತ್ ।
ತತ್ರಾಪಿ ಲಿಂಗಕಾಯಸ್ಯ ದಹನಂ ತು ವಿವರ್ಜಯೇತ್ ॥

**ಅರ್ಥ** :—ಲಿಂಗಧಾರಿ (ವೀರಶೈವ) ಯಾದ ಮಾನವನ ಮೃತದೇಹವನ್ನು ಅಜ್ಞಾನದಿಂದ ದಹಿಸಿದರೆ ಸಾವಿರಾರು ಶಿವಾಲಯಗಳನ್ನು ದಹಿಸುವುದರಿಂದಾದ ದೋಷವುಂಟಾಗುವುದು. ಒಂದು ಪಕ್ಷ ದಹನವನ್ನಪೇಕ್ಷಿಸಿ

ದರೆ ಶಿವಾಗ್ನಿಯಲ್ಲಿ ನಿವೇದಿಸತಕ್ಕದ್ದು. ಅಂಗದಲ್ಲಿ ಲಿಂಗವನ್ನು ಧರಿಸಿದವ ನನ್ನೆಂದೂ ಅಗ್ನಿಯಿಂದ ದಹಿಸಬಾರದೆಂದು ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ.

ಸರ್ವಾಶ್ರಮಾತಿರೇಕೇಣ ಭವೇದತ್ಯಾಶ್ರಮೀ ದ್ವಿಜಃ ।
ಲಿಂಗಾಂಗೀ ಯದಿ ವಾ ಮುಕ್ತೋ ದಗ್ಧುಂ ನಾರ್ಹತಿ ಕರ್ಮಣಾ ॥

ಸಕಲ ಆಶ್ರಮಗಳನ್ನು ಅತಿಕ್ರಮಿಸಿ ಅತ್ಯಾಶ್ರಮವನ್ನು ಸ್ವೀಕರಿಸಿದವನು ಲಿಂಗಧಾರಿಯಾಗಿ ಮುಕ್ತಾತ್ಮನಾಗಿದ್ದರೆ ಅವನ ಮೃತದೇಹವನ್ನು ಅಗ್ನಿಯಿಂದ ದಹಿಸಬಾರದೆಂದು ಪದ್ಮಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ.

ಷಡಧ್ವಶುದ್ಧಿಂ ವಿಧಿವತ್‌ಪ್ರಾಪ್ತೋ ವಾ ಮ್ರಿಯತೇ ಯದಿ ।
ಪಶೂನಾಮಿವ ತಸ್ಯೇಹ ನ ಕುರ್ಯಾದೌರ್ಧ್ವದೈಹಿಕಮ್ ॥

ಅರ್ಥ :—ವರ್ಣಾಧ್ವ ಪದಾಧ್ವ ಮುಂತಾದ ಷಡಧ್ವಶೋಧನ ಸಂಸ್ಕಾರಪೂರ್ವಕ ಶಿವಲಿಂಗಧಾರಿಯಾದವನು ಮರಣಹೊಂದಲಾಗಿ ಪಶುಕರ್ಮದೋಪಾದಿಯಲ್ಲಿ ದಹನಪೂರ್ವಕವಾದ ಔರ್ಧ್ವದೈಹಿಕಕರ್ಮವನ್ನು ಮಾಡಬಾರದೆಂದು ವಾಯುವೀಯ ಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತದೆ.

ಯಃ ಪ್ರಾಣಲಿಂಗಸಂಲಗ್ನೋ ಲಿಂಗಪ್ರಾಣೀ ವಿಯುಜ್ಯತೇ ।
ಶರೀರದಹನಾತ್ತಸ್ಯ ನರಕೇ ಕಾಲಮಕ್ಷಯಮ್ ॥
ಭಸ್ಮೋದ್ಧೂಲಿತಸರ್ವಾಂಗಮಾಪಾದತಲಮಸ್ತಕಮ್ ।
ರೋಮರೋಮಭವೇಲ್ಲಿಂಗಂ ತದ್ದೇಹಂ ದಾಹವರ್ಜಿತಮ್ ॥
ಯೋಗಾಗ್ನಿಪ್ಲುಷ್ಟಕಾಯಸ್ಯ ತ್ವಾತ್ಮಲಿಂಗೇಷ್ಟಲಿಂಗಯೋಃ ।
ಸಂಯೋಗಾನ್ಮೋಕ್ಷಕಾಲೇ ತು ಮುಮುಕ್ಷೋಸ್ಸಾ ತನೂಶ್ಶಿವಾಃ
ಯದಂಗಂ ತು ಮೃತಂ ದೃಷ್ಟಂ ನಿಕ್ಷಿಪೇತ್ತತ್ತು ಲಿಂಗಿನಃ ।
ತದ್ದೇಹದಹನಾದ್ ಘೋರಂ ರೌರವಂ ನರಕಂ ವ್ರಜೇತ್ ॥
ಪ್ರಾಣಲಿಂಗವತಾಂ ಪುಂಸಾಂ ಲಿಂಗಪ್ರಾಣವತಾಂ ತನೋಃ ।
ಪ್ರಾಪ್ತೇ ಮರಣಕಾಲೇ ತು ನ ಕುರ್ಯಾದ್ದಹನಂ ಬುಧಃ ॥
ಅಜ್ಞಾನಾದ್ದಹನಂ ಕೃತ್ವಾ ನರಕಂ ವಾಧಿಗಚ್ಛತಿ ॥

ಅರ್ಥ :—ಪ್ರಾಣದಲ್ಲಿ ಲಿಂಗವನ್ನೂ ಲಿಂಗದಲ್ಲಿ ಪ್ರಾಣವನ್ನೂ ಇರಿಸಿರುವ ಲಿಂಗಾಂಗಿಯು ಮರಣಹೊಂದಿರಲು ಅವನ ಲಿಂಗದೇಹವನ್ನು

ದಹನಮಾಡಬಾರದು. ತಿಳಿಯದೇ ದಹನಮಾಡಿದವನು ಅನೇಕಕಾಲ ನರಕವನ್ನನುಭವಿಸುವನು. ಪಾದಾದಿ ಮಸ್ತಕದವರೆಗೂ ಸರ್ವಾಂಗಗಳಲ್ಲಿ ಭಸ್ಮಾವಲೇಪನಂಗೈದು ರೋಮರೋಮಗಳಲ್ಲಿ ಲಿಂಗಮಯನಾದವನ ದೇಹವನ್ನು ಅಗ್ನಿಯಿಂದ ದಹಿಸಬಾರದು. ಯೋಗಾಗ್ನಿಯಿಂದ ದಗ್ಧವಾದ ಕಾಯವುಳ್ಳ ಇಷ್ಟಲಿಂಗ ಜ್ಯೋತಿರ್ಲಿಂಗಗಳ ಸಂಯೋಗವನ್ನು ಹೊಂದಿದ ಮುಮುಕ್ಷುವಾದ ಲಿಂಗಾಂಗಿಯು ಮರಣಹೊಂದಲಾಗಿ ಅವನ ದೇಹವನ್ನು ಭೂಮಿಯಲ್ಲಿ ನಿಕ್ಷೇಪಮಾಡಬೇಕಲ್ಲದೆ ಅಗ್ನಿಸಂಸ್ಕಾರ ಮಾಡಲಾಗದೆಂದು ಶಿವಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

ಕೋಟಿಶೈವಾಲಯಂ ದಗ್ಧಂ ಶಿವಭಕ್ತಂ ದಹೇದ್ಯದಿ ।
ದಹನ್ನಜ್ಞಾನಯೋಗೇನ ಬ್ರಹ್ಮಹತ್ಯಾಮವಾಪ್ನುಯಾತ್ ॥
ಲಿಂಗದೇಹಿಶರೀರಸ್ಯ ಲಿಂಗಸಂಸ್ಕಾರವರ್ಜಿತಃ ।
ಕುರ್ಯಾಚ್ಚೇದ್ವಹ್ನಿಸಂಸ್ಕಾರಮುಭಯೋರ್ನರಕೇ ಕ್ಷಯಃ ॥
ಯಃ ಪ್ರಾಣಲಿಂಗನಿಕ್ಷಿಪ್ತೋ ನಿಕ್ಷಿಪೇತ್ತಂ ತು ಲಿಂಗಿನಮ್ ।
ತದ್ದೇಹದಹನಾದ್ಘೋರಂ ರೌರವಂ ನರಕಂ ವ್ರಜೇತ್ ॥

**ಅರ್ಥ**:—ಲಿಂಗಾಂಗಿಯಾದ ಶಿವಭಕ್ತನನ್ನು ದಹಿಸುವುದು ಕೋಟಿ ಶಿವಾಲಯಗಳ ದಹನಕ್ಕೆ ಸಮಾನವಾದುದು. ಪ್ರಮಾದದಿಂದ ಶಿವಭಕ್ತನನ್ನು ದಹಿಸಿದವನು ಬ್ರಹ್ಮಹತ್ಯಾದೋಷಕ್ಕೆ ಭಾಗಿಯಾಗುವನು. ಲಿಂಗದೇಹಿಯ ಮೃತಶರೀರವನ್ನು ದಹಿಸಿದವನಿಗೂ, ಇವನಿಗೂ ನರಕವುಂಟಾಗುವುದು. ಪ್ರಾಣಲಿಂಗಿಯೆನಿಸಿದ ಶಿವಲಿಂಗಧಾರಿಯನ್ನು ಭೂಮಿಯಲ್ಲಿ ನಿಕ್ಷೇಪಮಾಡುವುದನ್ನು ಬಿಟ್ಟು ದಹನಮಾಡುವುದರಿಂದ ಘೋರ ನರಕವಂ ಹೊಂದುವನೆಂದು ವೀರಾಗಮದಲ್ಲಿ ಹೇಳಲ್ಪಟ್ಟಿರುತ್ತದೆ.

ರುದ್ರರೂಪಃ ಶಿವಜ್ಞಾನೀ ಸರ್ವಾಂಗೇ ಲಿಂಗಸಂಗಿನಃ ॥
ಕರ್ಮಮಂತ್ರೇಣ ದಹನಾನ್ನರಕಃ ಕಾಲಮಕ್ಷಯಮ್ ॥
ಲಿಂಗಂ ಭೂತಿಂ ಚ ರುದ್ರಾಕ್ಷಂ ಯೇ ದೇಹೇ ಧಾರಯಂತಿ ಚ ।
ಸರ್ವಾಂಗಲಿಂಗಸಂಯುಕ್ತಂ ತದ್ದೇಹಂ ಶಿವಮುಚ್ಯತೇ ॥
ತದ್ದೇಹಂ ದಹತೇ ಕರ್ಮೀ ನರಕಃ ಕಾಲಮಕ್ಷಯಮ್ ॥

ಅರ್ಥ :—ಸರ್ವಲಿಂಗ ಸಂಯೋಗಿಯಾದುದರಿಂದ ರುದ್ರಸ್ವರೂಪ ನಾದ ಶಿವಜ್ಞಾನಿಯನ್ನು ದಹಿಸುವವನು ಘೋರ ನರಕವನ್ನೈದುವನು. ಲಿಂಗವನ್ನೂ, ಭಸ್ಮವನ್ನೂ, ರುದ್ರಾಕ್ಷವನ್ನೂ ಯಾರು ಧರಿಸಿರುತ್ತಾರೆಯೋ ಅವರು ಸರ್ವಾಂಗಲಿಂಗಸಂಬಂಧಿಗಳೆನಿಸುತ್ತಾರೆ. ಮಂಗಲಕರವಾದ ಅವರ ದೇಹವನ್ನು ದಹಿಸಬಾರದು. ದಹಿಸಿದವನು ದೀರ್ಘಕಾಲ ನರಕ ವನ್ನೈದುವನೆಂದು ಶಿವರಹಸ್ಯ ಖಂಡದಲ್ಲಿ ಹೇಳಲ್ಪಟ್ಟಿರುತ್ತದೆ.

ಶಂಕೆ :—ತಾನಿರುವವರಿವಿಗೂ ಅಗ್ನಿಹೋತ್ರಮಾಡಬೇಕು. ಪ್ರತಿ ದಿವಸವೂ ತಪ್ಪದೆ ಸಂಧ್ಯಾವಂದನೆಯಂ ಮಾಡಬೇಕು. ಸ್ನಾನ, ಸಂಧ್ಯಾ, ಜಪ, ಹೋಮ, ಸ್ವಾಧ್ಯಾಯ, ಪಿತೃತರ್ಪಣ, ಆತಿಥ್ಯ, ವೈಶ್ವದೇವ ಮುಂತಾದ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಪ್ರತಿದಿವಸವೂ ಅನುಷ್ಠಿಸ ಬೇಕು. ಪಿತೃಗಳ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಅಹರಹಃ ಶ್ರಾದ್ಧ ವನ್ನಾಚರಿಸಬೇಕು. ಹಾಗೆ ಅನುಷ್ಠಿಸದಿದ್ದವನು ದೋಷಿಯಾಗುವನೆಂದು ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿದ್ದರೂ ಇಂತಹ ನಿತ್ಯನೈಮಿತ್ತಿಕಾದಿ ಕರ್ಮ ಗಳನ್ನೆಲ್ಲಾ ಬಿಟ್ಟು

ಅಶ್ವಾಲಂಭಂ ಗವಾಲಂಭಂ ಸಂನ್ಯಾಸಂ ಪಲಪೈತೃಕಮ್ ।
ದೇವರೇಣ ಸುತೋತ್ಪತ್ತಿಂ ಕಲೌ ಪಂಚ ವಿವರ್ಜಯೇತ್ ॥

ಅಶ್ವಾಲಂಭ (ಕೊಲ್ಲುವಿಕೆ), ಗವಾಲಂಭ, ಸಂನ್ಯಾಸ, ಪಲಪೈತೃಕ (ಮಾಂಸ ತರ್ಪಣ) ದೇವರೇಣ (ಮೈದುನನಿಂದ) ಸುತೋತ್ಪತ್ತಿ ಎಂದರೆ ಸಂತಾನೋತ್ಪತ್ತಿ, ಈ ಐದನ್ನು ಕಲಿಯುಗದಲ್ಲಿ ಮಾಡಕೂಡದೆಂದು ನಿಷೇಧಿ ಸಲ್ಪಟ್ಟಿದೆ. ಆದರೂ ಗೃಹಸ್ಥಧರ್ಮವನ್ನು ಬಿಟ್ಟು, ನಿಷಿದ್ಧವಾದ ಸಂನ್ಯಾಸಾ ಶ್ರಮ ಸ್ವೀಕಾರಮಾಡಿದಬಳಿಕ ಹಿಂದೆ ಗೃಹಸ್ಥಾಶ್ರಮದಲ್ಲಿ ಮಾಡಿದ ಪುಣ್ಯ ಕರ್ಮಗಳಿಂದುಂಟಾದ ಅಪೂರ್ವ (ಸಂಸ್ಕಾರ)ವು ಆತ್ಮನಲ್ಲಿ ನಿಂತಿರುವುದೋ? ಇಲ್ಲವೋ? ಎಂದು ಎರಡುವಿಧ ವಿಕಲ್ಪಗಳುದಿಸುವುವು. ಸಂನ್ಯಾಸ ಸ್ವೀಕಾರಮಾಡಿದರೂ ಕರ್ಮಜನ್ಯವಾದ ಅಪೂರ್ವವು ನಿಂತಿರುತ್ತದೆ. ಹಿಂದೆ ಅನುಷ್ಠಿಸಿದ ಯಜ್ಞಾದಿಕ್ರಿಯೆಗಳೆಲ್ಲವೂ ಶೀಘ್ರವಾಗಿ ನಷ್ಟವಾದರೂ, ಕಾಲಾಂತರದಲ್ಲಿ ಸ್ವರ್ಗಾದಿಫಲವನ್ನೀಯುವವರಿವಿಗೂ ಆ ಅಪೂರ್ವವು

ಆತ್ಮನಲ್ಲಿ ಸ್ಥಿರವಾಗಿ ಉಳಿದುಕೊಂಡಿದ್ದು ದೇಹವಳಿದಮೇಲೆ ಕರ್ಮಾನು ಗುಣವಾದ ಫಲವನ್ನು ಕೊಡುವುದೆಂದು ಒಪ್ಪಿಕೊಂಡಿದ್ದರೂ ಮಧ್ಯ ದಲ್ಲಿ ಸಕಲ ಕರ್ಮತ್ಯಾಗಪೂರ್ವಕ ಸಂನ್ಯಾಸ ಸ್ವೀಕಾರಮಾಡಿದಮೇಲೆ "ಸಾಯುಜ್ಯಸಿಧ್ಯರ್ಥಂ ಸಂನ್ಯಾಸಃ" ಎಂಬ ಸಿದ್ಧಾಂತಾನುಸಾರವಾಗಿ ಸಂನ್ಯಾಸಿಗಳಿಗಾಗಬೇಕಾದ ಮೋಕ್ಷವು ಸಿದ್ಧಿಸದೆ ಹೋಗಬೇಕು.

**ಸಮಾಧಾನ:**—ಫಲಾಪೇಕ್ಷೆಯಿಲ್ಲದೆ ಮಾಡಿದ ಧರ್ಮವು ಮುಕ್ತಿ ಯನ್ನುಂಟುಮಾಡುವುದರಿಂದ "ಸ್ವರ್ಗಕಾಮೋ ಯಜೇತ" ಎಂಬ ವಾಕ್ಯದಲ್ಲಿರುವ ಸ್ವರ್ಗಪದವು

ಯನ್ನದುಃಖೇನ ಸಂಭಿನ್ನಂ ನ ಚ ಗ್ರಸ್ತಮನಂತರಮ್ ।
ಅಭಿಲಾಷೋಪನೀತಂ ಯತ್ತತ್ಸುಖಂ ಸ್ವಃ ಪದಾಸ್ಪದಮ್ ॥

ಎಂಬ ವಾಕ್ಯಾನುಸಾರವಾಗಿ ನಿತ್ಯಸುಖಸ್ವರೂಪವಾದ ಮೋಕ್ಷವೆಂಬ ಅರ್ಥದಲ್ಲಿರುವುದರಿಂದ ಸಂನ್ಯಾಸಿಯ ಆತ್ಮನಲ್ಲಿ ತಾನು ಗೃಹಸ್ಥಾಶ್ರಮ ದಲ್ಲಿ ಅನುಷ್ಠಿಸಿದ ಜ್ಯೋತಿಷ್ಟೋಮಾದಿ ಯಾಗಗಳಿಂದುಂಟಾದ ಅಪೂರ್ವ (ಸಂಸ್ಕಾರ) ವಿದ್ದರೂ ಅದು ಮೋಕ್ಷಕ್ಕೆ ಪ್ರತಿಬಂಧಕವನ್ನುಂಟುಮಾಡಲಾ ರದು. ಯಾವುದೊಂದು ಫಲಾಪೇಕ್ಷೆಯಿಲ್ಲದೆ ಕರ್ಮಾನುಷ್ಠಾನಮಾಡು ವುದರಿಂದ ಮೋಕ್ಷವು ಸಿದ್ಧಿಸಿದಮೇಲೆ ತಾನಿರುವವರಿವಿಗೂ ಮಾಡಬೇಕಾದ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ತ್ಯಾಗಮಾಡಿ ಆಶ್ರಮಸ್ವೀಕಾರಮಾಡ ಬೇಕಾಗಿಲ್ಲವು.

**ಶಂಕೆ:**—

"ನಾನ್ಯತ್ಕರ್ಮಸಂತ್ಯಾಗಾನ್ಮೋಕ್ಷಂ ವಿಂದಂತಿ ಮಾನವಾಃ ।"
"ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ ಮಾನಶುಃ ॥"

ಕರ್ಮವನ್ನು ತ್ಯಾಗಮಾಡುವುದರಿಂದ ಮೋಕ್ಷವು ಸಿದ್ಧಿಸುವುದೆಂದು ಪ್ರಮಾಣವಚನಗಳಿರುವುದರಿಂದ ಸಂನ್ಯಾಸವನ್ನು ಸ್ವೀಕರಿಸುವುದರಿಂದ ಪ್ರಯೋಜನವಿರುತ್ತದಲ್ಲವೆ?

ಸಮಾಧಾನ :—ಅಂತಹ ಕರ್ಮತ್ಯಾಗಪೂರ್ವಕ ಸಂನ್ಯಾಸಸ್ವೀಕಾರವನ್ನು ಹೇಳುವ "ತಮೇವ ವಿದಿತ್ವಾತಿಮೃತ್ಯುಮೇತಿ" "ನಾನ್ಯಃ ಪಂಥಾ ವಿದ್ಯತೇಽಯನಾಯ" "ತರತಿ ಶೋಕಮಾತ್ಮವಿತ್" "ಜ್ಞಾನಾದೇವ ತು ಕೈವಲ್ಯಮ್".

ಮೊದಲಾದ ಶ್ರುತಿವಾಕ್ಯಗಳು ಮೋಕ್ಷಕ್ಕೆ ಜ್ಞಾನವೇ ಸಾಕ್ಷಾತ್ಕಾರಣವೆಂದು ಬೋಧಿಸುವುದರಿಂದಲೂ ಆ ಕರ್ಮವಾದರೂ ಜ್ಞಾನದ್ವಾರಾ ಹೇತುವಾಗಿದೆಯೆ ಹೊರತು ಸಾಕ್ಷಾತ್ ಕಾರಣವಾಗಿಲ್ಲವೆಂಬುವುದರಲ್ಲಿ ತಾತ್ಪರ್ಯವಾಗಿದೆ. ಹಾಗೆ ಅಂಗೀಕಾರಮಾಡದಿದ್ದರೆ—

ನಿತ್ಯನೈಮಿತ್ತಿಕೈರೇವ ಕುರ್ವಾಣೋ ದುರಿತಕ್ಷಯಮ್ ।
ಜ್ಞಾನಂ ಚ ವಿಮಲೀಕುರ್ವನ್ನಭ್ಯಾಸೇನ ಚ ಪಾಚಯೇತ್ ॥
ಅಭ್ಯಾಸಾತ್ತಸ್ಯವಿಜ್ಞಾನಂ ಕೈವಲ್ಯಂ ಲಭತೇ ನರಃ।
ಧರ್ಮಾತ್ಸುಖಂ ಚ ಜ್ಞಾನಂ ಚ ಜ್ಞಾನಾನ್ಮೋಕ್ಷೋಽಧಿಗಮ್ಯತೇ ॥
ಕರ್ಮಣೈವಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।
ನ್ಯಾಯಾರ್ಜಿತಧನೋ ವಿದ್ವಾಸ್ತತ್ವನಿಷ್ಠೋಽತಿಥಿಪ್ರಿಯಃ ॥
ಶ್ರಾದ್ಧಕೃತ್ಸತ್ಯವಾದೀ ಚ ಗೃಹಸ್ಥೋಽಪಿ ವಿಮುಚ್ಯತೇ ।
"ಕಾಶ್ಯಾಂ ತು ಮರಣಾನ್ಮುಕ್ತಿಃ"

ಜ್ಞಾನದ್ವಾರಾ ಕರ್ಮಗಳು ಮುಕ್ತಿಗೆ ಕಾರಣಗಳಾಗಿವೆಯೆಂದು ಸ್ಪಷ್ಟವಾಗಿ ಹೇಳುವ ವಚನಗಳಿಗೆಲ್ಲ ವಿರೋಧವುಂಟಾಗಬೇಕಾಗುವುದು.

ಇನ್ನು ಕರ್ಮಜನ್ಯ ಅಪೂರ್ವವು ಆತ್ಮನಲ್ಲಿ ನಿಂತಿರುವುದಿಲ್ಲವೆಂಬ ಎರಡನೆಯ ಪಕ್ಷವು ಯಜ್ಞಯಾಗಾದಿ ಕರ್ಮಗಳಿಂದುಂಟಾದ ಅಪೂರ್ವವು (ವಾಸನೆಯು) ಮಧ್ಯಕಾಲದಲ್ಲಿ ನಾಶವಾಗದೆ ಆಯಾಯ ಫಲವನ್ನು ಕೊಡುವವರೆಗೆ ತಾನು ಸ್ಥಾಯಿಯಾಗಿದ್ದೇ ಇರುತ್ತದೆಂಬ ಸಿದ್ಧಾಂತವಚನಗಳೆಲ್ಲ ವ್ಯರ್ಥವಾಗಬೇಕಾಗುವುದು. ಇದಲ್ಲದೆ ವಶಿಷ್ಠ, ವಿಶ್ವಾಮಿತ್ರ ಮೊದಲಾದ ಮಹರ್ಷಿಗಳು ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಸಾಂಗವಾಗಿ ಅನುಷ್ಠಿಸುತ್ತ ಜೀವನ್ಮುಕ್ತಾವಸ್ಥೆಯನ್ನು ಪಡೆದಿದ್ದರು. ಮುಕ್ತಿಗೋಸ್ಕರ

ವಾಗಿ ಕರ್ಮತ್ಯಾಗಮಾಡಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಲಿಲ್ಲ. ಇಂತಹ ಉದಾಹರಣೆಗಳಿಗೆಲ್ಲ ಬಾಧೆಯುಂಟಾದರೂ ತತ್ವಶ್ರವಣ ಮಾಡಲೇಬೇಕು.

**"ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಸ್ಸಂನ್ಯಾಸಯೋಗಾ ದ್ಯತಯಶ್ಶುದ್ಧಸತ್ವಾಃ"**

ಇತ್ಯಾದಿ ವೇದವಚನಾನುಸಾರವಾಗಿ ಶ್ರೀ ಶಂಕರಾಚಾರ್ಯರು ಸಹ ಸಂನ್ಯಾಸವನ್ನು ಸ್ವೀಕರಿಸಿದ್ದರು. ಮತ್ತು ಬ್ರಾಹ್ಮಣನಾದವನನ್ನು ಪಿತೃ ಮೇಧಾದಿಗಳಲ್ಲಿ ಹೇಳಿರುವ ಮಂತ್ರಗಳಿಂದ ದಹನಮಾಡಬೇಕೆಂದು ವಿಧಿಸಿದ್ದಾರೆ. ಆದರೆ—



## ಸಾಪಿಂಡ್ಯಾದಿ (ಶ್ರಾದ್ಧ) ನಿರಾಕರಣ:

ಸ್ನಾತ್ವಾ ಗೃಹಸ್ಥಶ್ಶುದ್ಧಾತ್ಮಾ ಯತೇಸ್ಸಂಸ್ಕಾರಮಾಚರೇತ್ ।
ಶಿಷ್ಯೈಶ್ಚ ಚಿರಮಾಲೋಕ್ಯ ಗಂಧಪುಷ್ಪೈರಲಂಕೃತವ್ ॥
ನೃತ್ಯಗೀತಾದಿಕೈಶ್ಚಾಪಿ ಕುಂಕುಮಾದ್ಯೈಃ ಕುಶೋದಕೈಃ ।
ಪ್ರೋಷಿತಂ ಜಯಶಬ್ದೇನ ದುಂದುಭಿಧ್ವನಿನಾ ತದಾ ॥
ದಿಶಂ ಪ್ರಾಚೀಮುದೀಚೀಂ ವಾ ಗತ್ವಾ ತತ್ರ ಖನೇದ್ಭುಧಃ ।
ವಿಶುದ್ಧೇ ತು ಕ್ಷಿತೇರ್ಗರ್ತೇ ಶರೀರಂ ನಿಕ್ಷಿಪೇದ್ಯತೇಃ ॥
ಯತೀನಾಂ ಮರಣೇ ಪ್ರಾಪ್ತೇsಸ್ಪೃಶ್ಯಾದಿರ್ನೈವ ವಿದ್ಯತೇ ।
ಅಶೌಚವಿಧ್ಯಾ ಸ್ನಾತಶ್ಚೇದ್ದಿಕ್ಷು ಯಾತ್ರಾಂ ವ್ರಜೇನ್ನರಃ ॥
ಜ್ಞಾತಿಪುತ್ರಕಳತ್ರಾಣಾಂ ಪರಿವ್ರಾಡ್ಮರಣಂ ಯದಿ ।
ಆಶೌಚಂ ನಾಸ್ತಿ ತೇಷಾಂ ವೈ ಸ್ನಾನಮುಪ್ಯಾಚರೇನ್ನ ತು ॥
ಮೃತೌ ನ ದಹನಂ ಕಾರ್ಯಂ ಪರಹಂಸಸ್ಯ ಸರ್ವದಾ ।
ಕರ್ತವ್ಯಂ ಖನನಂ ತಸ್ಯ ನಾಶೌಚಂ ನೋದಕಕ್ರಿಯಾ ॥
ಅನ್ಯೇಷಾಮಪಿ ಭಿಕ್ಷೂಣಾಂ ಖನನಂ ಪೂರ್ವಮಾಚರೇತ್ ।

**ಅರ್ಥ :**—ಗೃಹಸ್ಥನು ಸ್ನಾನಾದಿಗಳಿಂದ ಪರಿಶುದ್ಧನಾಗಿ ಸಂನ್ಯಾಸಿಯ ಮೃತದೇಹವನ್ನು ಸಂಸ್ಕರಿಸತಕ್ಕದು. ಆ ಸಂನ್ಯಾಸಿಯ ದೇಹವನ್ನು ಗಂಧಪುಷ್ಪಾದಿಗಳಿಂದ ಅಲಂಕರಿಸಿ ವಾದ್ಯಘೋಷಸಹಿತವಾಗಿ ಉತ್ತರ ದಿಕ್ಕಿಗಾಗಲಿ ಪೂರ್ವದಿಕ್ಕಿಗಾಗಲಿ ತೆಗೆದುಕೊಂಡು ಹೋಗಿ ಪರಿಶುದ್ಧವಾದ ಭೂಮಿಯಲ್ಲಿ ಗರ್ತವನ್ನು ರಚಿಸಿ ನಿಕ್ಷೇಪಮಾಡಬೇಕು. ಮತ್ತು

ಮರಣಹೊಂದಿದ ಯತಿಗಳ ವಿಷಯದಲ್ಲಿ ಅಸ್ಪೃಶ್ಯಾದಿ ದೋಷಗಳಿಲ್ಲವು. ಒಂದುಪಕ್ಷ ಯಾರಾದರೂ ಅಶುಚಿಯಾದೆನೆಂಬ ಭಾವನೆಯಿಂದ ಸ್ನಾನಾದಿಗಳನ್ನು ಮಾಡಿದರೆ ಅವನು ಆ ದೋಷ ಪರಿಹಾರಕ್ಕಾಗಿ ದಿಗ್ಯಾತ್ರೆಯನ್ನು ಮಾಡಬೇಕು. ಸಂನ್ಯಾಸಿಯಾದವನು ಮರಣಹೊಂದಲಾಗಿ ಅವನ ಮಕ್ಕಳಿಗೂ, ಜ್ಞಾತಿಗಳಿಗೂ, ಬಂಧುಗಳಾರಿಗೂ ಆಶೌಚವಿಲ್ಲವಾದುದರಿಂದ ಸ್ನಾನವನ್ನಾಚರಿಸಕೂಡದು. ಪರಮಹಂಸನು ಮರಣವನ್ನು ಹೊಂದಲು

ಅವನ ದೇಹವನ್ನು ದಹಿಸಲಾಗದು. ಅವಶ್ಯವಾಗಿ ಭೂನಿಕ್ಷೇಪವನ್ನು ಮಾಡಬೇಕು. ಪಿಂಡೋದಕಕ್ರಿಯೆಗಳನ್ನಾಚರಿಸಲಾಗದು. ಬೇರೆ ಭಿಕ್ಷುಕರಿಗೂ ಸಹ ಖನನನಿಯಮವನ್ನೇ ಪಾಲಿಸಬೇಕೆಂದು ಆಂಗೀರಸ, ಮನುಸ್ಮೃತಿ, ಸೂತಸಂಹಿತಾದಿ ವಚನಗಳಿಗನುಸಾರವಾಗಿ ಸಂನ್ಯಾಸಿಗಳ ಮೃತ ದೇಹಕ್ಕೆ ಭೂನಿಕ್ಷೇಪವು ವಿಧಿಸಲ್ಪಟ್ಟಿರುತ್ತದೆ.

ಅದರಂತೆ ಲಿಂಗಾಂಗಸಾಮರಸ್ಯಸಿದ್ಧಿಯಂ ಪಡೆದ ಮಹಾಪಾಶುಪತರೆನಿಸಿದ ಲಿಂಗಧಾರಿಗಳು ಈ ಸ್ಥೂಲಶರೀರವನ್ನು ತ್ಯಜಿಸಲಾಗಿ ಅಂತಹ ಲಿಂಗದೇಹವನ್ನು ಭೂನಿಕ್ಷೇಪಮಾಡತಕ್ಕದೆಂದು ಅನಂತ ಶ್ರುತಿ, ಸ್ಮೃತಿ ಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುವದರಿಂದ ಲಿಂಗಾಂಗಿಗಳಿಗೆ ಪಿತೃತ್ವಾದಿ ಸಿದ್ಧಿಗೋಸ್ಕರ ದಹನಕರ್ಮಪೂರ್ವಕವಾದ ಪ್ರೇತಕೃತ್ಯವನ್ನಪೇಕ್ಷಿಸದೆ ಮೋಕ್ಷೋಪಯೋಗಿಯಾದ ಭೂನಿಕ್ಷೇಪವಂ ಮಾಡಬೇಕಲ್ಲದೆ ದಹನವನ್ನು ಮಾಡಕೂಡದು. ಆದರೆ ಈ ಮಹಾಪಾಶುಪತರಿಗೂ, ಮಾರ್ಗಶೈವರಿಗೂ ಇರುವ ವಿಶೇಷವೇನಂದರೆ, ಮಾರ್ಗಶೈವರು ತಾವಿರುವವರೆಗೂ ನಿತ್ಯನೈಮಿತ್ತಿಕಾದಿ ಸಕಲ ಕರ್ಮಗಳ ಅನುಷ್ಠಾನವಂ ಮಾಡುತ್ತಾ ತನಗೆ ಮರಣವು ಸಂಭವಿಸಲು ಮೊದಲು ಆಹಿತಾಗ್ನಿಯಾಗಿದ್ದರೆ ಮರಣವಾಗುವ ಮುಂಚಿತವಾಗಿ ಪ್ರಾಜಾಪತ್ಯೇಷ್ಟಿಯ ಅಗ್ನಿಯನ್ನು ಆತ್ಮಾರೋಪಣಮಾಡಿ ಪ್ರಾಣಬಿಡುವುದರಿಂದ ಭೂನಿಕ್ಷೇಪವನ್ನು ಮಾಡಬೇಕು. ಅವನು ಆಹಿತಾಗ್ನಿಯಲ್ಲದಿದ್ದರೆ ಶೈವತಂತ್ರದಲ್ಲಿ ಹೇಳಿದಂತೆ ಕರ್ಮವನ್ನು ಮಾಡಬೇಕು. ಅವನು ಅಲಿಂಗಿಯಾಗಿರುವ ಪಕ್ಷದಲ್ಲಿ ಯಾವಜ್ಜೀವವೂ ಮಾಡಲ್ಪಡಬೇಕಾದ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಮಾಡದಿದ್ದರೆ ದೋಷಕ್ಕೆ ಭಾಗಿಯಾಗಿ ಸಕಲ ಕರ್ಮಾನುಷ್ಠಾನ ಪರಿಹಾರಪೂರ್ವಕವಾಗಿ ಸಂನ್ಯಾಸಾಶ್ರಮವನ್ನು ಪಡೆಯಬೇಕು.

ಇನ್ನು ಮಹಾಪಾಶುಪತರೆನಿಸಿದ ಲಿಂಗಾಂಗಿಗಳು ಶ್ರೀಗುರುಗಳಿಂದ ವೇಧಾ, ಮನು, ಕ್ರಿಯಾ ಎಂಬ ಮೂರು ದೀಕ್ಷೆಗಳಂ ಪಡೆದು ಪರಿಶುದ್ಧಾತ್ಮರಾಗಿ ಆಚಾರ್ಯಕೃಪಾಕಟಾಕ್ಷದಿಂದ ಸರ್ವಾಂಗಲಿಂಗ ಸಾಹಿತ್ಯವುಳ್ಳವರಾಗಿ ಪ್ರಾಕೃತಸಂಬಂಧಗಳಾದ ಆಣವ, ಮಾಯಾ,

ಕಾರ್ಮಿಕಗಳೆಂಬ ಬಂಧಹೇತುಗಳಾದ ಮೂರು ಮಲಗಳಿಂದ ಬಿಡಲ್ಪಟ್ಟವರಾಗಿ ಲಿಂಗಸ್ಥಲ ಅಂಗಸ್ಥಲಗಳ ತತ್ತ್ವಾನುಸಂಧಾನವುಳ್ಳವರಾಗಿ ಲಿಂಗಾನಂದವೈಭವದಿಂದಿರುವಲ್ಲಿ ಕಾಲಪರಿಪಾಕವಶದಿಂದ ಸ್ಥೂಲದೇಹವನ್ನು ತ್ಯಜಿಸಲಾಗಿ ಅವನ ಆತ್ಮಕ್ಕೆ ಪ್ರೇತತ್ವವಿಲ್ಲದುದರಿಂದ ಸಾಪಿಂಡ್ಯಾದಿ ಕರ್ಮಗಳನ್ನು ಮಾಡಕೂಡದು. ಪ್ರೇತತ್ವನಿವೃತ್ತಿಪೂರ್ವಕ ಪಿತೃಲೋಕ ಪ್ರಾಪ್ತಿಯೇ ಸಾಪಿಂಡ್ಯಾದಿ ಕರ್ಮಗಳಿಗೆ ಪ್ರಯೋಜನವೇ ಹೊರತು ಇನ್ನಾವ ಪ್ರಯೋಜನವಿಲ್ಲ.

ಪೂರ್ವಮೀಮಾಂಸೆಯ ವಿಕೃತಿ ಪ್ರಕರಣದಲ್ಲಿ

"ತಸ್ಮಾ ಏತಾಂ ಪ್ರಾಜಾಪತ್ಯಾಂ ಶತಕೃಷ್ಣಲಾಂ ನಿರ್ವಪೇತ್"

ಪ್ರಜಾಪತಿ ದೇವತಾಸಂಬಂಧವಾದ ಸುವರ್ಣಮಯವಾದ ತಂಡುಲದ ಚರುವನ್ನು ಹವನಮಾಡತಕ್ಕುದು – ಎಂಬುವಲ್ಲಿ ಸುವರ್ಣಮಯವಾದ ತಂಡುಲದ ಚರುವಿನಿಂದ ಹೋಮಮಾಡಬೇಕೆಂದು ವಿಧಿಸಲ್ಪಟ್ಟಿರುತ್ತದೆ. ಈ ಯಾಗವು ದರ್ಶಪೂರ್ಣಮಾಸೇಷ್ಟಿಯ ವಿಕೃತಿಯಾಗವಾದುದರಿಂದ ಪ್ರಕೃತಿಯಾಗದಂತೆ ವಿಕೃತಿಯಾಗವನ್ನು ಮಾಡಬೇಕೆಂದು ಚೋದಕವಾಕ್ಯವಿರುವುದರಿಂದ ದರ್ಶಪೂರ್ಣಮಾಸೇಷ್ಟಿಯಲ್ಲಿ "ವ್ರೀಹೀನವಹಂತಿ" ಭತ್ತವನ್ನು ವನಕೆಯಿಂದ ಕುಟ್ಟಿ ಹೊಟ್ಟನ್ನು ತೆಗೆಯಬೇಕು ಎಂಬ ವಾಕ್ಯದಲ್ಲಿ ಬಂದಿರುವ ಅವಹನನ (ಕುಟ್ಟುವಿಕೆ) ವು ಶತಕೃಲ (ಸುವರ್ಣದ ತಂಡುಲ) ದಲ್ಲಿಯೂ ಪ್ರಸಕ್ತವಾದುದರಿಂದ ಅವಹನನ (ಕುಟ್ಟುವಿಕೆ)ಕ್ಕೆ ಮೇಲಿನ ಹೊಟ್ಟು ಹೋಗುವಿಕೆ (ತುಷಾವಿಮೋಕ)ಯೇ ಫಲವಾಗಿರುವುದರಿಂದ ಸುವರ್ಣತಂಡುಲರೂಪವಾದ ಶತಕೃಷ್ಣಪಲದಲ್ಲಿ ಅಂತಹ ತುಷೆ (ಹೊಟ್ಟ)ಯೇ ಇಲ್ಲದುದರಿಂದ ಅವಘಾತಕ್ಕೆ (ಕುಟ್ಟುವಿಕೆಗೆ) ಬಾಧೆಯುಂಟಾಗುತ್ತದೆ. ಅದರಂತೆ ಪ್ರಕೃತದಲ್ಲಿ ಶಿವಸಾಯುಜ್ಯವಂ ಹೊಂದಿರುವ ಮಹಾಪಾಶುಪತರಾದ ಲಿಂಗಾಂಗಿಗಳಿಗೆ ಪ್ರೇತತ್ವವೇ ಇಲ್ಲದಮೇಲೆ ಅಂತಹ ಪ್ರೇತತ್ವವನ್ನು ನಿವಾರಿಸಲು ಸಾಧಕವಾದ ಸಾಪಿಂಡ್ಯಾದಿ ಕರ್ಮಗಳಿಗೆ ಬಾಧೆಯುಂಟಾಗುವುದು.

ಕಾಶ್ಯಾಂ ಮೃತಾನಾಂ ಸರ್ವೇಷಾಂ ಯತೀನಾಂ ಲಿಂಗಧಾರಿಣಾಮ್ ।
ದೇವತ್ವಮೇವ ಭವತಿ ಪಿತೃತ್ವಂ ನೈವ ವಿದ್ಯತೇ ॥

ಕಾಶಿಯಲ್ಲಿ ಮರಣಹೊಂದಿದವರಿಗೂ, ಸಂನ್ಯಾಸಿಗಳಿಗೂ, ಲಿಂಗಧಾರಿಗಳಿಗೂ ಪರಮೇಶ್ವರ ಸ್ವರೂಪತ್ವವುಂಟಾಗುವುದು. ಪಿತೃತ್ವಭಾವವುಂಟಾಗುವುದಿಲ್ಲವೆಂದು ಸ್ಕಾಂದಪುರಾಣದಲ್ಲಿ ಹೇಳಿರುವುದರಿಂದ ಅಲಿಂಗಿಗಳಿಗುಂಟಾಗುವ ಪ್ರೇತತ್ವವು ಲಿಂಗಧಾರಿಗಳಿಗಿಲ್ಲವಾದುದರಿಂದ ಅಂತಹ ಪ್ರೇತತ್ವವನ್ನು ನಾಶಗೊಳಿಸುವ ಶ್ರಾದ್ಧಾಂತರ್ಗತ ಸಾಪಿಂಡ್ಯಾದಿಕರ್ಮಗಳಿಗೆ ಪ್ರಯೋಜನವಿಲ್ಲವಾದುದರಿಂದ ಲಿಂಗಾಂಗಿಗಳು ಅವುಗಳನ್ನು ಆಚರಿಸಬೇಕಾಗಿಲ್ಲವು.



## ಗೃಹಸ್ಥರ ಶಿವೈಕ್ಯಸಿದ್ಧಿಗೆ ತತ್ತ್ವಸಂಯೋಜನೆಯ ಆವಶ್ಯಕತೆ

ವಾಸ್ತವವಾಗಿ ಪ್ರೇತತ್ವವಿಲ್ಲದಿದ್ದರೂ ಅವಿದ್ಯಾಕಲ್ಪಿತವಾದ ಜೀವ ಭಾವವಿರುವುದರಿಂದ ಅಂತಹ ಜೀವಭಾವವು ನಿವೃತ್ತಿಯಾಗುವುದಕ್ಕೋಸ್ಕರ ಪಿತೃ, ಪಿತಾಮಹ, ಪ್ರಪಿತಾಮಹ ಸ್ವರೂಪರಾದ ಈಶ್ವರ, ಸದಾಶಿವ, ಪರಮಶಿವರನ್ನುದ್ದೇಶಿಸಿ ತತ್ತ್ವಸಂಯೋಜನಮಾಡಬೇಕು.

ಚತುರ್ಥಸ್ಯ ನಿವೃತ್ಯರ್ಥಂ ಜೀವಭಾವನಿವೃತ್ತಿತಃ ।
ತತ್ತ್ವಾದಿಯೋಜನಾದೂರ್ಧ್ವಂ ಚತುರ್ಥೋऽಪಿ ನಿವರ್ತತೇ ॥

ಪರಶಿವಸ್ಥಾನದಲ್ಲಿರುವ ನಾಲ್ಕನೆಯವನಾದ ವೃದ್ಧಪ್ರಪಿತಾಮಹನು ಮುಕ್ತಿಯನ್ನು ಪಡೆಯುವನೆಂದು ಮುಕುಟಾಗಮದಲ್ಲಿ ಹೇಳಲ್ಪಟ್ಟಿರುತ್ತದೆ. ಇಲ್ಲಿ ತತ್ತ್ವಪದದಿಂದ ವೀರಶೈವಸಿದ್ಧಾಂತದ ಪ್ರಕಾರ ಮೂವತ್ತಾರು ತತ್ತ್ವಗಳನ್ನೂ, ಆದಿಪದದಿಂದ ಮೂವತ್ತೆಂಟು ಕಲೆಗಳನ್ನೂ ತೆಗೆದುಕೊಳ್ಳಬೇಕು. ಲಿಂಗಾಂಗಿಯಾದ ಮೃತಪುರುಷನಿಗೆ ಹನ್ನೊಂದನೆಯ ದಿವಸ ಮಾಡಬೇಕಾದ ಮಾಹೇಶ್ವರಪೂಜೆ ಏಕಾದಶ ರುದ್ರಾರಾಧನೆಮಾಡಿ ಹನ್ನೆರಡನೆಯ ದಿವಸ ಪಿತೃ, ಪಿತಾಮಹ, ಪ್ರಪಿತಾಮಹ ಸ್ಥಾನಾಪನ್ನರಾದ ಈಶ್ವರ, ಸದಾಶಿವ, ಶಿವಸ್ವರೂಪರಾದ ಮೂರುಜನ ಮಾಹೇಶ್ವರಲ್ಲಿ ಓಂ ಹಾಂ ಪಾರ್ಥಿವತತ್ತ್ವಮಾವಾಹಯಾಮಿ, ಓಂ ಹಾಂ ಜಲತತ್ತ್ವಮಾವಾಹಯಾಮಿ, ಓಂ ಹಾಂ ತೇಜಸ್ತತ್ತ್ವಮಾವಾಹಯಾಮಿ, ಓಂ ಹಾಂ ವಾಯುತತ್ತ್ವಮಾವಾಹಯಾಮಿ ಇತ್ಯಾದಿಯಾಗಿ ಪೃಥಿವೀತತ್ತ್ವ ಮೊದಲುಮಾಡಿ ಶಿವತತ್ತ್ವದವರೆಗೂ ಇರುವ ಮೂವತ್ತಾರು ತತ್ತ್ವಗಳನ್ನೂ "ಈಶಾನಸ್ಸರ್ವವಿದ್ಯಾನಾಂ ಶಶಿನೀಮಾವಾಹಯಾಮಿ, ಈಶ್ವರಸ್ಸರ್ವಭೂತಾನಾಂ ಅಂಗದಾಮಾವಾಹಯಾಮಿ, ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿ ಬ್ರಹ್ಮಾಧಿಷ್ಠಾಮಾವಾಹಯಾಮಿ, ಬ್ರಹ್ಮಾ ಶಿವೋ ಮೇ ಅಸ್ತು ಮರೀಚೀಮಾವಾಹಯಾಮಿ, ಸದಾಶಿವೋಂ ಜ್ವಲಿನೀಮಾವಾಹಯಾಮಿ" ಇತ್ಯಾದಿ ಶಶಿನೀ ಮೊದಲುಮಾಡಿ ಸ್ಥಿತಿ ಪರ್ಯಂತವಾಗಿ ಕಲಾಧ್ವೋಕ್ತವಾದ ಮೂವತ್ತೆಂಟು ಕಲೆಗಳನ್ನೂ ಅಕ್ಷತೆ

ಗಳಿಂದೊಡಗೂಡಿದ ಬಿಲ್ವದಳಗಳಿಂದಾವಾಹಿಸಿದ ಬಳಿಕ ತತ್ತ್ವಸ್ವರೂಪರೂ, ಕಲಾಸ್ವರೂಪರೂ ಆದ ಆ ಮಾಹೇಶ್ವರರಿಗೆ ಆಸನ, ಪಾದ್ಯ, ಅರ್ಘ್ಯ, ಆಚಮನಾದಿಗಳನ್ನು ವಿಧ್ಯುಕ್ತವಾಗಿ ಅರ್ಪಿಸಿ ಪಾದಪ್ರಕ್ಷಾಳನಪೂರ್ವಕ ಷೋಡಶೋಪಚಾರವಂ ಗೈದು

ಮೇ ಪಿತುಃ ಸರ್ವಜೀವಭಾವನಿವೃತ್ತಿದ್ವಾರಾ ಶಿವಮಹೇಶ್ವರ
ಸದಾಶಿವಸ್ವರೂಪ ಪಿತೃಪಿತಾಮಹಪ್ರಪಿತಾಮಹೈಕ್ಯಪ್ರಾಪ್ತ್ಯರ್ಥಂ
ಸಾಕ್ಷತಬಿಲ್ವದಳೈಸ್ತತ್ತ್ವಕಲಾಸಂಯೋಜನಂ ಕರಿಷ್ಯೇ

ಎಂದು ಕರ್ತನು ಸಂಕಲ್ಪಮಾಡಿ ಅಕ್ಷತೆಬಿಲ್ವದಳಗಳಿಂದ "ಓಂ-ಹಾಂ ಪಾರ್ಥಿವತತ್ತ್ವಂ ಸಂಯೋಜಯಾಮಿ, ಓಂ-ಹಾಂ ಜಲತತ್ತ್ವಂ ಸಂಯೋಜಯಾಮಿ, ಓಂ-ಹಾಂ ವಾಯುತತ್ತ್ವಂ ಸಂಯೋಜಯಾಮಿ, ಓಂ-ಹಾಂ ಆಕಾಶತತ್ತ್ವಂ ಸಂಯೋಜಯಾಮಿ" ಎಂದು ಹೇಳುತ್ತಾ ಮುವ್ವತ್ತಾರು ತತ್ತ್ವಗಳನ್ನೂ,

"ಈಶಾನಸ್ಸರ್ವವಿದ್ಯಾನಾಂ ಶಶಿನೀಂ ಸಂಯೋಜಯಾಮಿ, ಈಶ್ವರಸ್ಸರ್ವಭೂತಾನಾಂ ಅಂಗದಾಂ ಸಂಯೋಜಯಾಮಿ, ಬ್ರಹ್ಮಾಧಿಪತಿ ಬ್ರ್ರಹ್ಮಣೋಧಿಪತಿ ಬ್ರ್ರಹ್ಮಾಧಿಷ್ಠಾಂ ಸಂಯೋಜಯಾಮಿ, ಶಿವೋ ಮೇಅಸ್ತು ಮರೀಚೀಂ ಸಂಯೋಜಯಾಮಿ, ಸದಾಶಿವೋಂ ಜ್ವಲಿನೀಂ ಸಂಯೋಜಯಾಮಿ" ಎಂದು ಪಂಚಬ್ರಹ್ಮ ಮಂತ್ರಗಳಿಂದ ಶಶಿನೀ ಮೊದಲುಮಾಡಿ ಸ್ಥಿತ್ಯಂತವಾದ ಮೂವ್ವತ್ತೆಂಟು ಕಲೆಗಳನ್ನೂ ಸಂಯೋಜಿಸಿದ ಬಳಿಕ ಮೃತಪುರುಷನ ಜೀವಭಾವ ನಿವೃತ್ತಿಯಾಗಿ ಪಿತೃ, ಪಿತಾಮಹ, ಪ್ರಪಿತಾಮಹ ಸ್ವರೂಪರಾದ ಈಶ್ವರ, ಸದಾಶಿವ, ಶಿವ ಎಂಬ ಶುದ್ಧತತ್ವವಾಸಿಗಳಾಗಿ ಆ ಶಿವತತ್ವಸ್ಥಾನದಲ್ಲಿದ್ದವನು ಆ ತತ್ವದಿಂದ ಮುಕ್ತನಾಗಿ ಅವಿರಳ ಶಿವಸಾಯುಜ್ಯವಂ ಪಡೆಯುವನು. ಅನಂತರ ವರ್ಗತ್ರಯವನ್ನುದ್ದೇಶಿಸಿ ವಾರ್ಷಿಕಾದಿ ಮಹೇಶ್ವರಾರಾಧನೆಗಳನ್ನು ಕ್ರಮದಿಂದ ನಡೆಸುತ್ತಾ ಬರಬೇಕು.

ಶಂಕೆ :—ಶ್ರೀಗುರುವು ದೀಕ್ಷೆಯನ್ನು ಮಾಡುವ ಸಮಯದಲ್ಲಿ ಕ್ರಿಯಾದೀಕ್ಷಾಂತರ್ಗತವಾದ ಸ್ವಸ್ತಿಕಾರೋಹಣವೆಂಬ ದೀಕ್ಷೆಯಿಂದ ಶಿಷ್ಯನಿಗೆ ತಾಯಿಗರ್ಭದಿಂದುಂಟಾಗಿರುವ ಮಾಂಸಪಿಂಡದ ನಿವೃತ್ತಿಗೋಸ್ಕರ

ಪಾದಾದಿ ಮಸ್ತಕಪರಿವಿಗೂ ಸಂಹಾರಕ್ರಮದಿಂದ ಷಡಧ್ವನ್ಯಾಸಮಾಡಿದ ಬಳಿಕ ಮಂತ್ರಪಿಂಡತ್ವದ ಪ್ರಾಪ್ತಿಗೋಸ್ಕರ ಮತ್ತೆ ಉತ್ಪತ್ತಿಕ್ರಮದಿಂದ ಷಡಧ್ವನ್ಯಾಸ ಮಾಡುತ್ತಾನಷ್ಟೆ. ಆಗ ಶಿವಸ್ವರೂಪನಾದಮೇಲೆ ಪುನಃ ದೇಹಾವಸಾನದಲ್ಲಿ ತತ್ತ್ವಕಲಾಸಂಯೋಜನದಿಂದ ಪ್ರಯೋಜನವೇನು?

**ಸಮಾಧಾನ:**—ಶಿವಭಕ್ತನು ಮೊದಲು ಇಂತಹ ಶಿವದೀಕ್ಷೆಯನ್ನು ಪಡೆದಿದ್ದರೂ ಭಾವನಾಮಾತ್ರದಿಂದ ಮಂತ್ರಪಿಂಡ ಸಂಬಂಧವುಳ್ಳವನಾಗಿ

**“ ತಸ್ಯ ತಾವದೇವ ಚಿರಂ ಯಾವನ್ನವಿಮೋಕ್ಷೇ ಅಥ ಸಂಪತ್ಸ್ಯೇ ”**

ಮುಂತಾದ ಶ್ರುತಿ ವಚನಾನುಸಾರವಾಗಿ ತಾವರೆ ಎಲೆಯ ಮೇಲೆ ಬಿದ್ದ ನೀರಿನಂತೆ ನಿರ್ಲಿಪ್ತನಾದಂತಿದ್ದರೂ ಪಾಂಚಭೌತಿಕ ಶರೀರವನ್ನು ಧರಿಸಿರುವುದರಿಂದ ಹಸಿವು ಬಾಯಾರಿಕೆ ರಾಗದ್ವೇಷಾದಿಗಳುಂಟಾಗುವುದು ಸ್ವಾಭಾವಿಕವಾದುದರಿಂದಲೂ ನಿತ್ಯನೈಮಿತ್ತಿಕಾದಿ ಸಮಸ್ತ ಕರ್ಮಾನುಷ್ಠಾನಕ್ಕೆ ಪ್ರಯೋಜಕವಾದ ಮತಾಭಿಮಾನವು ಇದ್ದೇ ಇರುತ್ತದೆ. ಕಲ್ಲಿನಲ್ಲಿ ಸೇರಿಕೊಂಡಿರುವ ಸುವರ್ಣವು ಭೂಸಂಬಂಧದಿಂದ ತಿರಸ್ಕೃತವಾಗಿ ಹೇಗೆ ಅವ್ಯಕ್ತವಾಗಿರುವುದೋ ಹಾಗೆ ಮಂತ್ರಪಿಂಡತ್ವವನ್ನುಂಟುಮಾಡುವ ಕ್ರಿಯಾದೀಕ್ಷೆಯನ್ನು ಪಡೆದಿದ್ದರೂ ಪ್ರತ್ಯಕ್ಷವಾಗಿ ಜೀವಭಾವದಿಂದ ತಿರಸ್ಕೃತವಾಗಿ ಶಿವಭಾವವು ಅವ್ಯಕ್ತವಾಗಿರುತ್ತದೆ. ದೇಹವನ್ನು ಬಿಟ್ಟಮೇಲೆ ಹಿಂದೆ ಹೇಳಿದ ಪ್ರಕಾರ ತತ್ತ್ವಕಲಾ ಸಂಯೋಜನದಿಂದ ಜೀವಭಾವವು ನಿವೃತ್ತಿಯಾಗಿ ಅವ್ಯಕ್ತವಾಗಿದ್ದ ಶಿವಸ್ವರೂಪವು ವ್ಯಕ್ತವಾಗುವುದು.

ಗುರುದೀಕ್ಷಾಪರಿಪ್ರಾಪ್ತಶಿವಲಿಂಗಾಂಗಯೋಗತಃ ।
ಭ್ರಿಂಗಕೀಟನ್ಯಾಯೇನ ಶಿವೈಕ್ಯಂ ಪ್ರಾಪ್ತವಾನ್ ದ್ವಿಜಃ ॥
ಲಿಂಗಾಂಗಸಂಗಿನಿ ಮೃತೇ ಸಂಪ್ರಾಪ್ತೇ ದ್ವಾದಶೇಽಹನಿ ।
ಸಾಪಿಂಡ್ಯಂ ನೈವ ಕರ್ತವ್ಯಂ ಪ್ರೇತತ್ವಾಭಾವತೋ ಮುನೇ ॥
ದೀಕ್ಷಾಕಾಲಪರಿಪ್ರಾಪ್ತ ಶಿವೈಕ್ಯಂ ಜೀವಭಾವತಃ ।
ಅವಿರ್ಭೂತಮಿತಿಪ್ರಾಹುಶ್ಶೈವಾಗಮವಿಶಾರದಾಃ ॥

ಸದಾಶಿವಾದ್ಯಭಿನ್ನೇಭ್ಯಃ ಪಿತೃಭ್ಯಸ್ತತ್ತ್ವಸಂಮಿತಾಃ ।
ಕಲಾಸ್ಸಂಗೃಹ್ಯ ಚಾನ್ಯತ್ರ ಸಮಭ್ಯರ್ಚ್ಯ ಯಥಾ ವಿಧಿ ॥
ಜೀವಭಾವನಿವೃತ್ತ್ಯರ್ಥಂ ಮೃತಲಿಂಗಾಂಗಸಂಗಿನಃ ।
ವರ್ಗತ್ರಯೈಕ್ಯಸಿಧ್ಯರ್ಥಂ ತತ್ತ್ವಾದೀನ್ಯೋಜಯೇತ್ಸುತಃ ॥

(ಮುಕುಟಾಗಮ)

ಅರ್ಥ :—ಗುರುವಿನಿಂದ ದೀಕ್ಷೆಯನ್ನು ಪಡೆದ ಲಿಂಗಾಂಗಿಯು ಕೀಟವು ಭ್ರಮರಚಿಂತನೆಯಿಂದ ಭ್ರಮರವೇ ತಾನಾದಂತೆ ಜೀವನು ನಿರಂತರ ಶಿವಚಿಂತನೆಯಿಂದ ಶಿವಸ್ವರೂಪನಾಗುವನು. ಇಂತಹ ಲಿಂಗಾಂಗಿಯು ಮೃತನಾದರೆ ಹನ್ನೆರಡನೆಯ ದಿವಸ ಪ್ರಾಕೃತಜನರಿಗೆ ಮಾಡುವಂತೆ ಸಾಪಿಂಡ್ಯಾದಿ ಕರ್ಮಗಳನ್ನು ಮಾಡದೆ ಮಹೇಶ್ವರ, ಸದಾಶಿವ, ಶಿವರೆಂಬ ಪಿತೃ, ಪಿತಾಮಹ, ಪ್ರಪಿತಾಮಹರ ಸ್ಥಾನದಲ್ಲಿ ಮೂರು ಜನ ಮಾಹೇಶ್ವರರನ್ನು ಕುಳ್ಳಿರಿಸಿ ವಿಧ್ಯುಕ್ತಪೂಜೆಯಂ ಮಾಡಿ ಮೂವತ್ತಾರು ತತ್ತ್ವಗಳನ್ನೂ ಮೂವತ್ತೆಂಟು ಕಲೆಗಳನ್ನೂ ಸಂಯೋಜನ ಮಾಡುವುದರಿಂದ ಜೀವಭಾವನಿವೃತ್ತಿಯಾಗುವುದು ಎಂದು ಮಕುಟಾಗಮದಲ್ಲಿ ಹೇಳಲ್ಪಟ್ಟಿರುವದಲ್ಲದೆ

ದ್ವಾದಶೇಽಹನಿ ಸಂಪ್ರಾಪ್ತೇ ಮೃತಲಿಂಗಾಂಗಸಂಗಿನಃ ।
ಜೀವಭಾವನಿವೃತ್ತ್ಯರ್ಥಂ ಕುರ್ಯಾತ್ತತ್ತ್ವಾದಿಯೋಜನಮ್ ॥
ಲಿಂಗಾಂಗಸಂಗಿನಿ ಮೃತೇ ಸಾಪಿಂಡ್ಯಾದಿ ನ ಕಾರಯೇತ್ ।
ತತ್ತ್ವಸಂಯೋಜನಾದೇವ ಜೀವಭಾವೋ ನಿವರ್ತತೇ ॥

ಎಂದು ಚಂದ್ರಜ್ಞಾನಾಗಮದಲ್ಲಿಯೂ—

ಆತ್ಮವಿದ್ಯಾಶಿವಾಖ್ಯಾನಿ ತತ್ತ್ವಾನಿ ಚ ಯಥಾ ಕ್ರಮಮ್ ।
ತ್ವಂ ಪದಂ ಚಾತ್ಮತತ್ತ್ವಂ ಸ್ಯಾತ್ ವಿದ್ಯಾತತ್ತ್ವಮಸೀತಿ ಚ ॥
ತತ್ಪದಂ ಶಿವತತ್ತ್ವಂ ಸ್ಯಾದಾತ್ಮತತ್ತ್ವಾತ್ಮಕಂ ಪುನಃ ।
ಪಂಚವಿಂಶತಿ ಸಂಖ್ಯಾಕಂ ದಶತತ್ತ್ವಾತ್ಮಕಂ ತಥಾ ॥
ವಿದ್ಯಾತತ್ತ್ವಂ ಶಿವಾಖ್ಯಂ ಸ್ಯಾತ್ತತ್ತ್ವಮೇಕಮಿತಿಸ್ಮೃತಮ್ ।
ತತ್ತ್ವಾನಾಮಧಿಪೋ ಜ್ಞೇಯೋ ಮಹೇಶಶ್ಚ ಸದಾಶಿವಃ ॥
ಶಿವಃ ಪರಾತ್ಪರಶ್ಚೈವ ಶಿವೇ ಪರಮಕಾರಣೇ ॥
ದೀಕ್ಷಾತ್ರಯಪ್ರಕಾರೇಣ ಗುರುಣಾ ದೀಕ್ಷಿತೋ ಯಥಾ ॥

ತಥೈಕ್ಯಸ್ಯ ಚ ಭಕ್ತಸ್ಯ ಸಾಪಿಂಡ್ಯೇ ಕಿಂ ಪ್ರಯೋಜನಮ್ ।
ತಸ್ಮಾತ್ತತ್ತ್ವೇಶ್ವರಾಸ್ಸಮ್ಯಗರ್ಚನೀಯಾ ಯಥಾ ಕ್ರಮಮ್ ॥
ದ್ವಾದಶೇಽಹನಿ ಸಂಪ್ರಾಪ್ತೇ ಕಲ್ಯಾಣೇ ಶಿವಯೋಗಿನೇ ।

ಎಂದು ವೀರಾಗಮದಲ್ಲಿಯೂ

ದಹರಾಕಾಶಲಿಂಗಸ್ಯ ಸತೋಯೋಗಾದಿ ಲಿಂಗತಃ ।
ಲಿಂಗಭಾವಾತ್ಮಕತಯಾ ಪ್ರೇತಕಾರ್ಯಾದಿಕಂ ನ ಹಿ ॥

ಎಂದು ಪದ್ಮಪುರಾಣದಲ್ಲಿಯೂ ಹೇಳಲ್ಪಟ್ಟಿರುವುದು. ಅಲಿಂಗಿಗಳಲ್ಲಿ ಪಿತೃಪಿತಾಮಹಾದಿಗಳು ಕ್ರಮದಿಂದ ಗೃಹಸ್ಥಾಶ್ರಮವನ್ನು ತ್ಯಜಿಸಿ ಸಂನ್ಯಾಸಾಶ್ರಮವಂ ಸ್ವೀಕರಿಸಿದ ಬಳಿಕ ಮರಣಹೊಂದಲು ಅಂಥವರಿಗೆ ಮಾತ್ರ ಶ್ರಾದ್ಧಪಿಂಡೋದಕ ಸಾಪಿಂಡ್ಯಾದಿಕರ್ಮಗಳನ್ನು ನಿಷೇಧಿಸಿರುವುದರಿಂದಲೂ ಮತ್ತು ಸಂನ್ಯಾಸವನ್ನು ಸ್ವೀಕರಿಸದೆ ಗೃಹಸ್ಥಾಶ್ರಮದಲ್ಲಿಯೇ ಮರಣಹೊಂದಲು ಅಂಥವರಿಗೆ ಸಾಪಿಂಡ್ಯಾದಿಕರ್ಮಗಳನ್ನು ವಿಧಿಸಿರುವುದರಿಂದಲೂ ಸಾಪಿಂಡ್ಯಾದಿಗಳಿಗುಂಟಾದ ಅನಿತ್ಯತ್ವವನ್ನು ಯಾರೂ ಪರಿಹರಿಸಲಾರರು.



